ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೧೨

# ದೇವ್ಯುಪನಿಷನ್ಮಾಲಾ

(ಕನ್ನಡ ಅನುವಾದ ಸಹಿತ)

ಅನುವಾದಕ :

ಆಸ್ಥಾನವಿದ್ವಾನ್ ಪಾಟಣಕರ ಚಂದ್ರಶೇಖರ ಭಟ್ಟ

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್,

ಮೈಸೂರು.

# ಪೀ ಠಿ ಕಾ

ಚೇತನವರ್ಗದಲ್ಲಿ ಮಾನವನಿಗೆ ವಸ್ತುತತ್ತ್ವವನ್ನು ಅರಿಯಬೇಕೆಂಬ ಕುತೂಹಲವು ಹುಟ್ಟುಗುಣವಾಗಿದೆ. ತತ್ತ್ವಜ್ಞಾನವು ಹುಟ್ಟುವವರೆಗೂ ಸಂಶಯ–ಜಿಜ್ಞಾಸೆಗಳಿಂದ ಖಿನ್ನನಾಗಿ ಜ್ಞಾನಕ್ಕಾಗಿ ಶ್ರಮಿಸಿ ಯತ್ನಿಸುವನು. ಅನೇಕ ಪ್ರಮಾಣಗಳಿಂದ ಬಾಹ್ಯವಸ್ತುಗಳ ತತ್ತ್ವವನ್ನು ಅರಿತು ವ್ಯವಹಾರಮಗ್ನನಾದ ಹಾಗೆಲ್ಲ ಇಷ್ಟವಿಘಾತ, ಅನಿಷ್ಟಪ್ರಾಪ್ತಿಗಳಿಂದ ಸಂಸಾರವು ದುಃಖಮಯವೆಂಬುದನ್ನು ನಂಬಿ ಅದರ ಜಿಹಾಸೆಯಿಂದ ಸಮಸ್ತದುಃಖಶಾಂತಿ–ನಿರತಿಶಯಾನಂದಗಳ ಪ್ರಾಪ್ತಿಗೆ ಸಾಧನವಾದ ಅಧ್ಯಾತ್ಮತತ್ತ್ವಜ್ಞಾನವನ್ನು ಹೊಂದಲು ಅಂತರ್ಮುಖನಾಗುವನು.

ಅಧ್ಯಾತ್ಮತತ್ತ್ವವು ಉಪನಿಷತ್ತುಗಳಿಂದಲೂ ತನ್ಮೂಲಕವಾದ ಇತರ ಶಾಸ್ತ್ರ ಗ್ರಂಥಗಳಿಂದಲೂ ವೇದ್ಯವಾದುದು. ನಿಖಿಲ ಉಪನಿಷತ್ತುಗಳೂ ಚಿತ್ತಶುದ್ಧಿಗೆ ಸಾಧನವಾದ ಉಪಾಸನಾ (ಭಕ್ತಿ) ಮಾರ್ಗವನ್ನು ಬೋಧಿಸಿ ಜೀವಬ್ರಹ್ಮೈಕ್ಯವೆಂಬ ತತ್ತ್ವದ ಜ್ಞಾನದಲ್ಲಿ ಪರ್ಯವಸಾನ ಹೊಂದಿ ಕೃತಾರ್ಥಗಳಾಗಿವೆ. ನಿರ್ವಿಶೇಷ ಬ್ರಹ್ಮತತ್ತ್ವದ ಪರಿಣಾಮವಿಶೇಷದಿಂದ ರೂಪಾಂತರಗಳಾದ ಆದಿತ್ಯ–ಗಣೇಶ ಮುಂತಾದ ದೇವತೆಗಳು ಉಪಾಸನೆಗಳಿಗೆ ಉಪಾಸ್ಯರಾಗಿರುವರು. ಈ ಉಪಾಸನೆಯನ್ನು ಸಗುಣೋಪಾಸನೆಯೆಂದು ಕರೆಯುತ್ತಾರೆ. ಈ ಸಗುಣರೂಪಗಳಿಂದ ಉಪಾಸ್ಯರಾದ ಆದಿತ್ಯಾದಿ ದೇವತೆಗಳಲ್ಲಿ ಶಕ್ತಿ ದೇವತೆಯೂ ಒಂದಾಗಿದೆ. ಶಕ್ತಿ ದೇವಿಯ ವಿವಿಧಾವತಾರಚರಿತ್ರಗಳನ್ನು ವಿಮರ್ಶಿಸಿದರೆ ಶಕ್ತಿಸಂಪನ್ನರಾದ ಅನೇಕ ಬ್ರಹ್ಮಾದಿದೇವತೆಗಳ ಶಕ್ತಿಸಮಷ್ಟಿಯಿಂದ ಮೂರ್ತಿಮತ್ತಾದ ಚಾಮುಂಡಾ ಮುಂತಾದ ರೂಪವು ಆವಿರ್ಭವಿಸಿದೆಯೆಂದು ಹೇಳಿರುವುದರಿಂದ ಜಗತ್ತಿನಲ್ಲಿ ಪ್ರತಿಯೊಂದು ವಸ್ತುವಿನಲ್ಲಿಯೂ ಅಸಾಧಾರಣವಾಗಿ ಇರುವ ಶಕ್ತಿಯು ದೇವಿಯ ವ್ಯಷ್ಟಿರೂಪ ವಿಶೇಷವೆಂದು ಹೇಳಬೇಕಾಗುವುದು. ಈ ದೃಷ್ಟಿಯಿಂದ ಶಕ್ತಿದೇವಿಯು ಜಗತ್ತನ್ನೆಲ್ಲ ವ್ಯಾಪಿಸಿರುವುದರಿಂದ ಗಣೇಶಾದಿ ಪರಿಚ್ಛಿನ್ನ ಆಕಾರಗಳಲ್ಲಿಯೂ ಶಕ್ತಿದೇವಿಯೇ ಪೂಜಿಸಲ್ಪಡುವಳು. ಹೀಗಿರಲು ಸಾಕ್ಷಾತ್ತಾಗಿ ಶಕ್ತಿದೇವಿಯ ಉಪಾಸನೆಯು ಎಲ್ಲಕ್ಕಿಂತಲೂ ಮಿಗಿಲಾದುದೆಂಬುದು ಶಾಕ್ತರ ಸಿದ್ಧಾಂತವು.

ಶಕ್ತಿದೇವಿಯ ಉಪಾಸನೆಗಳು ನಾನಾಮುಖವಾಗಿ ದೇವೀ ಉಪನಿಷತ್ತುಗಳಲ್ಲಿಯೂ ಮಂತ್ರಶಾಸ್ತ್ರಗಳಲ್ಲಿಯೂ ಹೇಳಲ್ಪಟ್ಟಿವೆ. ಈ ಉಪಾಸನೆಗಳಲ್ಲಿ ಮಂತ್ರ ಜಪ, ನ್ಯಾಸ, ಸ್ತೋತ್ರ, ಪೂಜಾ ಮತ್ತು ತದಂಗವಾದ ಕೆಲವು ಆಚಾರ ವಿಶೇಷಗಳು ಮುಖ್ಯವಾಗಿ ಅನುಷ್ಠೇಯಗಳಾಗಿವೆ. ಇವುಗಳ ಒಂದೊಂದು ಪ್ರಯೋಗವು ಒಂದೊಂದು ಉಪನಿಷತ್ತಿನಲ್ಲಿ ಬೇರೆಯಾಗಿ ವರ್ಣಿಸಲ್ಪಟ್ಟಿರುವುದರಿಂದ ಕಲ್ಪಸೂತ್ರಾದಿ ತಂತ್ರಗ್ರಂಥಗಳಿಂದ ಸಂಪೂರ್ಣ ಪ್ರಯೋಗವನ್ನು ತಿಳಿಯಬೇಕು. ಉಪಾಸಕರು ಈ ಉಪನಿಷದ್ವಾಕ್ಯಾರ್ಥ ವಿಚಾರದಿಂದ ಬಂದ ತತ್ತ್ವಜ್ಞಾನದ ಸಹಾಯದಿಂದ ಉಪಾಸ್ಯದೇವತೆಯ ನಾನಾಶಕ್ತಿಸಂಪನ್ನವಾದ ಸಗುಣ ಆಕೃತಿಯನ್ನೂ ನಿರ್ಗುಣ ಪರಮಾರ್ಥತತ್ತ್ವವನ್ನೂ ಅನುಸಂಧಾನಮಾಡಿ ಉಪಾಸನೆಯನ್ನಾಚರಿಸಬೇಕು. " ಯದೇವ ವಿದ್ಯ ಯಾ ಕರೋತಿ " ಎಂಬ ಶ್ರುತಿಯು ಇಂತಹ ಅನುಷ್ಠಾನವನ್ನು ವೀರ್ಯವತ್ತರವೆಂದು ಹೇಳಿದೆ.

ಹೀಗೆ ಶಕ್ತಿದೇವತೆಗೆ ಸಂಬಂಧಿಸಿದ ವಿವಿಧ ಉಪಾಸನೆಗಳನ್ನು ಹೇಳುವ ಉಪನಿಷತ್ತುಗಳಲ್ಲಿ " ಭಾವನೋಪನಿಷತ್ " ಮುಂತಾದುವುಗಳು ಅತಿಮುಖ್ಯವಾದುವು. ಇವುಗಳಲ್ಲಿ ಅಥರ್ವವೇದದ ಶಾಖೆಗೆ ಸೇರಿದ ಉಪನಿಷತ್ತುಗಳು ಹೆಚ್ಚಾಗಿವೆ. ಮಂತ್ರಶಾಸ್ತ್ರೋಕ್ತವಿಧಾನದಿಂದ ಉಪಾಸನಾಚರಣೆಯು ಖಿಲವಾಗುತ್ತ ಬಂದ ಈ ಸಮಯದಲ್ಲಿ ಈ ಉಪನಿಷತ್ತುಗಳ ಅರ್ಥವನ್ನು ತಿಳಿಯುವುದು ಕಷ್ಟಸಾಧ್ಯವು. ಈ ಪುಸ್ತಕದಲ್ಲಿ ಎಲ್ಲ ಉಪನಿಷತ್ತುಗಳನ್ನೂ ಕನ್ನಡ ಅನುವಾದದೊಡನೆ ಮಾಲಾರೂಪವಾಗಿ ಸೇರಿಸಿದೆ. ಜಿಜ್ಞಾಸುಗಳಿಗೆ ಮೊದಲು ಆವಶ್ಯಕವಾದ ಪದ–ಪದಾರ್ಥಗಳ ಜ್ಞಾನಕ್ಕೆ ತಕ್ಕಂತೆ ಸಂಸ್ಕೃತವಾಕ್ಯಗಳ ಛಾಯಾರೂಪವಾದ ಅರ್ಥವನ್ನೂ ಕೆಲವುಕಡೆ ತಾತ್ಪರ್ಯವನ್ನೂ ವಿವರಿಸಿದೆ. ಇತರ ಶಾಸ್ತ್ರಗ್ರಂಥಗಳ ಒಡನೆ ಸಮನ್ವಯದೃಷ್ಟಿಯಿಂದ ಮಾಡುವ ಆಕ್ಷೇಪ ಸಮಾಧಾನಗರ್ಭಿತವಾದ ವ್ಯಾಖ್ಯಾನವು ದೊಡ್ಡ ಪ್ರಸ್ಥಾನರೂಪವಾಗಿ ಬೆಳೆಯುವುದರಲ್ಲಿ ಸಂದೇಹವಿಲ್ಲ.

ಆಳುವ ಮಹಾಸ್ವಾಮಿಯವರ ಅಪ್ಪಣೆಯಂತೆ ಈ ಉಪನಿಷನ್ಮಾಲೆಯನ್ನು ಕನ್ನಡ ಅನುವಾದದೊಡನೆ ಪ್ರಕಾಶಪಡಿಸುತ್ತಲಿದ್ದೇನೆ. ಇದರಲ್ಲಿ ಮೂಲವಾಕ್ಯಗಳನ್ನೂ ಅನುವಾದ ಭಾಗವನ್ನೂ ಹೊಸ ವಿಧಾನದಿಂದ ಸುಂದರವಾಗಿ ಮುದ್ರಣಮಾಡಿದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ನನಗೆ ಅವಕಾಶ ಮಾಡಿಕೊಟ್ಟ ಮಹನೀಯರಿಗೆ ತುಂಬಾ ಕೃತಜ್ಞನಾಗಿದ್ದೇನೆ.

**ಅನುವಾದಕ.**



# ವಿಷಯಾನುಕ್ರಮಣಿಕೆ

॥ ಶ್ರೀರಸ್ತು ॥

# ॥ ಭಾವನೋಪನಿಷತ್ ॥

---

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ।
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ ।
ವ್ಯಶೇಮ ದೇವಹಿತಂ ಯದಾಯುಃ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಹರಿಃ ಓಂ ॥ ಆತ್ಮಾನಮಖಂಡಮಂಡಲಾಕಾರವ ಬ್ರಹ್ಮಾಂಡಮಂಡಲಂ ಸ್ವಪ್ರಕಾಶಂ ಧ್ಯಾಯೇತ್ ॥ ೧ ॥

ಶ್ರೀಗುರುಃ ಸರ್ವ (ಪರಮ) ಕಾರಣಭೂತಾ ಶಕ್ತಿಃ॥ ರೂಪೋದೇಹಃ ॥ ೨ ॥

ನವ ಚಕ್ರರೂಪಂ ಶ್ರೀ ಚಕ್ರಮ್ ॥ ೩ ॥

|| ಶ್ರೀ ||

# ಭಾವನೋಪನಿಷತ್ತಿನ ಕನ್ನಡ ಅನುವಾದವು.

---

ಅಥರ್ವ ವೇದಕ್ಕೆ ಸೇರಿದ ಎಲ್ಲ ಉಪನಿಷತ್ತುಗಳ ಪ್ರಾರಂಭದಲ್ಲಿ ಮೇಲೆ ಹೇಳಿದ ಶಾಂತಿ ಮಂತ್ರವನ್ನು ಓಂ ಶಾಂತಿಃ ಎಂದು ಮೂರು ಸಲ ಆವೃತ್ತಿ ಸಹಿತವಾಗಿ ಪಠಿಸುವದು ಸಂಪ್ರದಾಯವು. ಭಾವನೋಪನಿಷತ್ತು ಅಥರ್ವ ವೇದಕ್ಕೆ ಸೇರಿದ ಉಪನಿಷತ್ತುಗಳಲ್ಲಿ ಒಂದಾಗಿದೆ. ಆದ್ದರಿಂದ ಆ ಮಂತ್ರವನ್ನು ಮೊದಲು ಸೇರಿಸಿದೆ.

ಪ್ರತ್ಯಕ್ಷಾದಿಪ್ರಮಾಣಗಳಿಗೆ ಗೋಚರವಾಗಿರುವ ಸಂಪೂರ್ಣ ಬ್ರಹ್ಮಾಂಡ ಮಂಡಲದ ಈಗ ತೋರುವ ರೂಪವನ್ನು ಮರೆತು ಸ್ವಪ್ರಕಾಶನಾಗಿಯೂ ಸಕಲವನ್ನೂ ವ್ಯಾಪಿಸಿ ಅಪರಿಚ್ಛಿನ್ನನಾಗಿಯೂ ಇರುವ ಆತ್ಮರೂಪವನ್ನಾಗಿ ಧ್ಯಾನಿಸಬೇಕು. || ೧ ||

ಈಶ್ವರಾನುಗ್ರಹದಿಂದ ಲಭಿಸುವ ವಿವೇಕವನ್ನೇ ಸರ್ವಸಂಶಯಗಳನ್ನು ಪರಿಹರಿಸಿ ಮಂತ್ರ ವೀರ್ಯವನ್ನು ಪ್ರಕಾಶ ಪಡಿಸುವುದರಿಂದ ಗುರುವೆಂದು ಮಂತ್ರ ಶಾಸ್ತ್ರದಲ್ಲಿ ಕರೆಯುತ್ತಾರೆ. ಇಂತಹ ಗುರುವಿಗೆ ವಿಮರ್ಶ ಎಂಬ ಒಂದು ಸಂಕೇತವೂ ಇದೆ. ಈ ಗುರುವು ಕಾರ್ಯವರ್ಗಕ್ಕೆಲ್ಲ ಕಾರಣವಾಗಿರುವುದರಿಂದ ಸರ್ವಕಾರಣ ಭೂತವೆಂದು ವಿಶೇಷಣವನ್ನು ಹೇಳಿದೆ. ಆ ವಿಮರ್ಶ ಶಕ್ತಿಯ ಸ್ವರೂಪವು ಒಂಭತ್ತು ರಂಧ್ರಗಳಿಂದ ಕೂಡಿರುತ್ತದೆ. ಎರಡು ಕಿವಿ ಮತ್ತು ಜಿಹ್ವೇಂದ್ರಿಯ ಈ ಮೂರು ರಂಧ್ರಗಳಿಗೆ ದಿವ್ಯೌಘವೆಂದು ಹೆಸರು. ಎರಡು ಕಣ್ಣು ಮತ್ತು ಉಪಸ್ಥೇಂದ್ರಿಯ ಈ ಮೂರು ಸಿದ್ಧೌಘವು. ಎರಡು ನಾಸಾರಂಧ್ರಗಳು ಮತ್ತು ಪಾಯು ಇಂದ್ರಿಯ ಈ ಮೂರರ ಗುಂಪು ಮಾನವೌಘವು. ಹೀಗೆ ರಂಧ್ರಗಳ ನವತ್ವ ಸಂಖ್ಯೆಯಿಂದ ಗುರುವು ನವತ್ವ ಸಂಖ್ಯೆಯಿಂದ ಕೂಡಿರುವನೆಂದು ತಾತ್ಪರ್ಯವು.

" ಗುರುರಾದ್ಯಾ ಭವೇಚ್ಛಕ್ತಿಃ ಸಾ ವಿಮರ್ಶಮಯೀ ಮತಾ |
ನವತ್ವಂ ತಸ್ಯ ದೇಹಸ್ಯ ರಂಧ್ರತ್ವೇನಾವಭಾಸತೇ ||
ಗುರುರೇವ ಪರಾಶಕ್ತಿರೀಶ್ವರಾನುಗ್ರಹಾತ್ಮಿಕಾ |
ಅವಕಾಶಪ್ರದಾನೇನ ಸೈವ ಯಾಯಾ ದುಪಾಯತಾಂ ||

ಮುಂತಾದ ತಂತ್ರ ಶಾಸ್ತ್ರದ ವಚನಗಳು ಈ ಅರ್ಥವನ್ನೇ ವಿವರಿಸುತ್ತಿವೆ. || ೨ ||

ತ್ರೈಲೋಕ್ಯ ಮೋಹನಾದಿ ಒಂಭತ್ತು ಚಕ್ರಗಳ ಸಮಷ್ಟಿ ಸ್ವರೂಪವಾದ ಈ ದೇಹವು ಶ್ರೀ ಚಕ್ರದ ಐಕ್ಯವನ್ನು ಹೊಂದಿಕೊಂಡಿರುತ್ತೆ. || ೩ ||

ವಾರಾಹೀ ಪಿತೃರೂಪಾ ಕುರುಕುಲ್ಲಾ ಬಲೀ ದೇವತಾ ಮಾತಾ ||
ಪುರುಷಾರ್ಥಾಃ ಸಾಗರಾಃ || ೪ ||

ದೇಹೋ ನವರತ್ನದ್ವೀಪಃ ||
ತ್ವಗಾದಿಸಪ್ತಧಾತುರೋಮಸಂಯುಕ್ತಃ ||
ಸಂಕಲ್ಪಾಃ ಕಲ್ಪತರವಸ್ತೇಜಃ ಕಲ್ಪಕೋದ್ಯಾನಮ್ ೫ ||

ರಸನಯಾ ಭಾವ್ಯಮಾನಾ ಮಧುರಾಮ್ಲ ತಿಕ್ತಕಟುಕಷಾಯಲವಣ ರಸಾಃ ಷಡೃತವಃ || ೬ ||

ಜ್ಞಾನ ಮರ್ಘ್ಯಂ ಜ್ಞೇಯಂ ಹವಿಃ ಜ್ಞಾತಾ ಹೋತಾ ಜ್ಞಾತೃಜ್ಞಾನ ಜ್ಞೇಯಾನಾಮಭೇದಭಾವನಂ ಶ್ರೀಚಕ್ರಪೂಜನಮ್ || ೭ ||

ನಿಯತಿಃ ಶೃಂಗಾರಾದಯೋ ರಸಾ ಅಣಿಮಾದಯಃ |
ಕಾಮಕ್ರೋಧ ಲೋಭಮೋಹ ಮದಮಾತ್ಸರ್ಯ ಪುಣ್ಯಪಾಪ
ಮಯಾ ಬ್ರಾಹ್ಮ್ಯಾದ್ಯಷ್ಟ ಶಕ್ತಯಃ || ೮ ||

ತನ್ನ ದೇಹ—ಇಂದ್ರಿಯಗಳಲ್ಲಿ ಸಂಕ್ರಾಂತಗಳಾದ ಜನಕನ ಅಸ್ಥಿ ಮುಂತಾ ಅಂಶಗಳನ್ನು ಪಿತೃರೂಪಳಾದ ವಾರಾಹೀರೂಪದಿಂದಲೂ ಮಾತೆಯ ಮಾಂಸಾದಿ ಅಂಶ ಗಳನ್ನು ಮಾತೃ ರೂಪಳಾದ ಕುರುಕುಲ್ಲಾವಳೀ ದೇವತಾ ರೂಪದಿಂದಲೂ ಧ್ಯಾನಿಸ ಬೇಕು. ಪಶ್ಚಿಮಾದಿ ದಿಕ್ಕುಗಳಲ್ಲಿರುವ ಇಕ್ಷು-ಇರಾ-ಘೃತ-ಕ್ಷೀರಸಮುದ್ರಗಳನ್ನು ಧರ್ಮ ಅರ್ಥ—ಕಾಮ—ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನಾಗಿಭಾವಿಸಬೇಕು. ॥ ೪ ॥

ರಸ—ಮಾಂಸ— ರೋಮ— ತ್ವಕ್ —ರುಧಿರ— ಶುಕ್ರ—ಮಜ್ಜಾ—ಅಸ್ಥಿ —ಮೇದಸ್ ಎಂಬ ಚರ್ಮ ರೋಮ ಸಹಿತವಾದ ಧಾತುಗಳನ್ನು ಪುಷ್ಯರಾಗ—ನೀಲ—ವೈಡೂರ್ಯ— ವಿದ್ರುಮ— ಮೌಕ್ತಿಕ —ಮರಕತ— ವಜ್ರ —ಗೋಮೇಧ —ಪದ್ಮರಾಗಗಳೆಂಬ ನವರತ್ನ ರೂಪಗಳಾಗಿ ದೇಹ ಮಧ್ಯದಲ್ಲಿರುವ ನವರತ್ನಮಯ ಖಂಡಗಳನ್ನಾಗಿ ಭಾವಿಸಬೇಕು. ಮನಸ್ಸಿನ ಸಂಕಲ್ಪ ಪೂರ್ವಕವಾಗಿ ಸತ್ಕರ್ಮಾನುಷ್ಠಾನಮಾಡಿ ವಾಂಛಿತ ಫಲಗಳನ್ನು ಹೊಂದಬೇಕಾಗಿರುವುದರಿಂದ ಅಂತಹ ಸಂಕಲ್ಪಗಳೇ ಕಲ್ಪವೃಕ್ಷ ರೂಪಗಳೆಂದೂ ಆಸಂಕಲ್ಪ ವೃತ್ತಿಗಳಿಗೆ ಆಧಾರವಾದ ಮನಸ್ಸನ್ನು ಜ್ಯೋತಿ ರೂಪವಾದ ಕಲ್ಪವೃಕ್ಷ ಗಳಿಗೆ ಆಧಾರವಾದ ಉದ್ಯಾನವನವೆಂದೂ ಧ್ಯಾನಿಸಬೇಕು. ॥ ೫ ॥

ರಸನೇಂದ್ರಿಯದಿಂದ ಉಂಟಾಗುವ ಸಿಹಿ—ಹುಳಿ—ಕಹಿ—ಕಾರ—ಒಗರು—ಉಪ್ಪು ಎಂಬ ಷಡ್ರಸಗಳ ಅನುಭವವು ಉಪಾಸನಾ ಕಾಲದಲ್ಲಿಯೂ ಮನಸ್ಸಿನಲ್ಲಿ ಸೂಕ್ಷ್ಮ ರೂಪದಿಂದಿರುವದರಿಂದ ಅನುಭವಕ್ಕೆ ಗೋಚರವಾಗುತ್ತಲಿರುವ ಷಡ್ರಸಗಳನ್ನು ವಸಂತ—ಗ್ರೀಷ್ಮ—ವರ್ಷಾ—ಶರತ್—ಹೇಮಂತ—ಶಿಶಿರ ವೆಂಬ ಆರು ಋತುಗಳ ರೂಪ ದಿಂದ ಧ್ಯಾನಿಸಬೇಕು. ಇಂತಹ ಪ್ರತ್ಯಕ್ ಧ್ಯಾನದಿಂದ ಪರಾಕ್ ವಸ್ತುಗಳ ಕಡೆಗೆ ಮನದ ನಿರೋಧವುಂಟಾಗುವುದು. ॥ ೬ ॥

ವ್ಯಾವಹಾರಿಕ ವಸ್ತುವಿನ ಜ್ಞಾನವು ಪೂಜಾ ಸಾಮಗ್ರಿಯು. ತಿಳಿವಳಿಕೆಗೆ ವಿಷಯ ವಾಗುವ ಬಾಹ್ಯ ವಸ್ತುಗಳೆಲ್ಲವೂ ಹವಿಸ್ಸು. ಅಹಂಕಾರಕ್ಕೆ ಆಸ್ಪದನಾದ ಉಪಾಸಕನು ಪೂಜೆ ಮಾಡುವವನು, ಚಿಚ್ಛಕ್ತಿಯು ಉಪಾಸ್ಯ ದೇವತೆಯು. ಸ್ವಾತ್ಮ ಚೈತನ್ಯ ಕ್ಕಿಂತ ಭಿನ್ನವಾಗಿ ತೋರುತ್ತಲಿರುವ ಜ್ಞಾತೃಜ್ಞೇಯ ಜ್ಞಾನಗಳೆಂಬ ತ್ರಿಪುಟಿಯನ್ನು ಐಕ್ಯದಿಂದ ಭಾವಿಸಬೇಕೆಂಬುದನ್ನು ಈ ವಾಕ್ಯವು ವಿಧಿಸುತ್ತದೆ. ಐಕ್ಯ ಭಾವನೆಯೇ ಶ್ರೀ ಚಕ್ರ ಪೂಜೆಯೆಂದು ತಾತ್ಪರ್ಯವು. ॥ ೭ ॥

ನಿಯತಿಯೆಂದರೆ ಪ್ರಾರಬ್ಧ ಕರ್ಮವು ಶೃಂಗಾರ—ಭಯಾನಕ—ರೌದ್ರ—ಬೀಭತ್ಸ ಹಾಸ್ಯ—ವೀರ—ಕರುಣ—ಅದ್ಭುತ—ಶಾಂತ ವೆಂಬದಾಗಿ ನವರಸಗಳು. ಈ ಹತ್ತು ಭಾವ ವಸ್ತುಗಳನ್ನು ಅಣಿಮಾ—ಲಘಿಮಾ—ಮಹಿಮಾ—ಈಶಿತ್ವ—ವಶಿತ್ವ—ಪ್ರಾಕಾಮ್ಯ—ಭುಕ್ತಿ ಇಚ್ಛಾ—ಪ್ರಾಪ್ತಿ—ಪ್ರಕಾಮುಗಳೆಂಬ ಹತ್ತು ಸಿದ್ಧಿಗಳ ತಾದಾತ್ಮ್ಯದಿಂದ ಧ್ಯಾನಿಸಬೇಕು. ॥ ೮ ॥

ಆಧಾರನವಕಂ ಮುದ್ರಾಶಕ್ತಯಃ
ಪೃಥಿವ್ಯ ಪ್ತೇಜೋವಾಯ್ವಾಕಾಶ ಶ್ರೋತ್ರತ್ವಕ್ಚಕ್ಷುರ್ಜಿಹ್ವಾ
ಘ್ರಾಣವಾಕ್ಪಾದ ಪಾಣಿಪಾಯೂಪಸ್ಥಾನಿ ಮನೋವಿಕಾರಃ
ಕಾಮಾಕರ್ಷಿಣ್ಯಾದಿ ಷೋಡಶಶಕ್ತಯಃ ॥ ೯ ॥

ವಚನಾದಾನಗಮನವಿಸರ್ಗಾನಂದಹಾನೋಪಾದಾನೋ
ಪೇಕ್ಷಾಖ್ಯಬುದ್ಧಯೋಽನಂಗ ಕುಸುಮಾದ್ಯಷ್ಟೌ ॥ ೧೦ ॥

ಅಲಂಬುಸಾ-ಕುಹೂರ್ವಿಶ್ವೋದರಾ ವಾರಣಾ ಹಸ್ತಿಜಿಹ್ವಾ ಯ
ಶೋವತೀ ಪಯಸ್ವಿನೀ ಗಾಂಧಾರೀ ಪೂಷಾ ಶಂಖಿನೀ ಸರಸ್ವತೀ
ಇಡಾ ಪಿಂಗಲಾ ಸುಷುಮ್ನಾ ಚೇತಿ ಚತುರ್ದಶ ನಾಡ್ಯಸ್ಸರ್ವಸಂಕ್ಷೋ
ಭಿಣ್ಯಾದಿಚತುರ್ದಶ ಶಕ್ತಯಃ ॥ ೧೧ ॥

ಮೂಲಾಧಾರ– ಸ್ವಾಧಿಷ್ಠಾನ– ಮಣಿಪೂರಕ– ಅನಾಹತ – ವಿಶುದ್ಧಿ – ಆಜ್ಞಾ ಎಂಬ ಷಟ್ಚಕ್ರಗಳು, ಮೇಲೆ ಮತ್ತು ಕೆಳಭಾಗಗಳಲ್ಲಿ ಎರಡು ಸಹಸ್ರಾರ ಕಮಲಗಳು, ಮತ್ತು ಲಂಬಿಕಾಗ್ರ ಕಮಲ ಒಂದು, ಇವುಗಳ ಸಮಷ್ಟಿ ಒಂದು, ಹೀಗೆ ಹತ್ತು ಆಧಾರಗಳಲ್ಲಿ ಸಂಕ್ಷೋಭಿಣೀ ಮೊದಲ್ಗೊಂಡು ತ್ರಿಖಂಡ ಪರ್ಯಂತ ಮುದ್ರಾಭಿಮಾನಿಗಳಾದ ಹತ್ತು ಶಕ್ತಿ ದೇವತೆಗಳ ಐಕ್ಯವನ್ನು ಧ್ಯಾನಿಸಬೇಕು. ಆ ಹತ್ತು ಮುದ್ರೆಗಳು:— ಸರ್ವಸಂಕ್ಷೋಭಿಣೀ – ದ್ರಾವಿಣೀ – ಸರ್ವಾಕರ್ಷಿಣೀ – ಸರ್ವವಶಂಕರೀ ಉನ್ಮಾದಿನೀ–ಮಹಾಂಕುಶ–ಖೇಚರೀ–ಬೀಜ–ಸರ್ವಯೋನಿ–ತ್ರಿಖಂಡ ಮುದ್ರೆ ಎಂಬ ಹೆಸರುಗಳಿಂದ ಮಂತ್ರ ಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆ. ಪೃಥಿವೀ–ಅಪ್–ತೇಜ–ವಾಯು ಆಕಾಶ (ಪಂಚಭೂತಗಳು) ಶ್ರೋತ್ರ–ತ್ವಕ್–ಚಕ್ಷು–ಜಿಹ್ವಾ–ಘ್ರಾಣ (ಪಂಚಜ್ಞಾನೇಂದ್ರಿಯಗಳು) ವಾಕ್ - ಪಾಣಿ - ಪಾದ - ಪಾಯು - ಉಪಸ್ಥ (ಪಂಚಕರ್ಮೇಂದ್ರಿಯಗಳು) ವಿಕಾರಾಸ್ಪದವಾದ ಮನಸ್ಸು ಎಂಬ ಹದಿನಾರು ಅವಯವಗಳು ಸರ್ವಾಶಾಪರಿಪೂರಕ ಚಕ್ರದಲ್ಲಿರುವ ಕಾಮಾಕರ್ಷಿಣೀ ಮುಂತಾದ ದೇವತಾ ಐಕ್ಯದಿಂದ ಧ್ಯಾನಿಸಲ್ಪಡಬೇಕು. ಆ ಹದಿನಾರು ದೇವತೆಗಳ ಹೆಸರು:-ಕಾಮಾ ಕರ್ಷಿಣೀ–ಬುದ್ಧ್ಯಾಕರ್ಷಿಣೀ-ಅಹಂಕಾರಾಕರ್ಷಿಣೀ -ಶಬ್ದಾಕರ್ಷಿಣೀ-ಸ್ಪರ್ಶಾಕರ್ಷಿಣೀ -ರೂಪಾಕರ್ಷಿಣೀ ರಸಾಕರ್ಷಿಣೀ -ಗಂಧಾಕರ್ಷಿಣೀ -ಚಿತ್ತಾಕರ್ಷಿಣೀ - ಧೈರ್ಯಾಕರ್ಷಿಣೀ - ಸ್ಮೃತ್ಯಾಕರ್ಷಿಣೀ -ನಾಮಾಕರ್ಷಿಣೀ -ಬೀಜಾಕರ್ಷಿಣೀ -ಆತ್ಮಾಕರ್ಷಿಣೀ -ಅಮೃತಾಕರ್ಷಿಣೀ ಶರೀರಾಕರ್ಷಿಣೀ ಎಂಬದಾಗಿವೆ. ॥ ೯ ॥

ವಚನ - ಆದಾನ - ಗಮನ - ವಿಸರ್ಗ - ಆನಂದಗಳೆಂಬ ಕರ್ಮೇಂದ್ರಿಯಗಳ ವಿಷಯಗಳು ಐದು, ತ್ಯಾಗ - ಸ್ವೀಕಾರ - ಉಪೇಕ್ಷೆಗಳೆಂಬ ಬುದ್ಧಿಗಳು ಮೂರು, ಸೇರಿ ಎಂಟು ವೃತ್ತಿಗಳಲ್ಲಿ ಅನಂಗ ಕುಸುಮಾ - ಅನಂಗ ಮೇಖಲಾ - ಅನಂಗ ಮದನಾ ಅನಂಗ ಮದನಾತುರಾ - ಅನಂಗ ರೇಖಾ - ಅನಂಗ ವೇಗಾ - ಅನಂಗಾಂಕುಶಾ - ಅನಂಗ ಮಾಲಿನೀ ಎಂಬ ಎಂಟು ಶಕ್ತಿಗಳ ಐಕ್ಯವನ್ನು ಚಿಂತಿಸಬೇಕು. ॥ ೧೦ ॥

ಅಲಂಬುಸಾ - ಕುಹೂ - ವಿಶ್ವೋದರಾ - ವಾರಣಾ - ಹಸ್ತಿಜಿಹ್ವಾ - ಯಶೋವತೀ ಪಯಸ್ವಿನೀ - ಗಾಂಧಾರೀ - ಪೂಷಾ - ಶಂಖಿನೀ - ಸರಸ್ವತೀ - ಇಡಾ - ಪಿಂಗಳಾ ಸುಷುಮ್ನಾ ಎಂಬವು ಇದೇ ಹೆಸರಿನಿಂದ ಪ್ರಸಿದ್ಧವಾದ ಹದಿನಾಲ್ಕು ನಾಡಿಗಳು. ಸರ್ವಸಂಕ್ಷೋಭಿಣೀ -ಸರ್ವವಿದ್ರಾವಿಣೀ -ಸರ್ವಾಕರ್ಷಿಣೀ - ಸರ್ವಾಹ್ಲಾದಿನೀ - ಸರ್ವಸಂಮೋಹಿನೀ - ಸರ್ವಸ್ತಂಭಿನೀ - ಸರ್ವರಂಜನೀ - ಸರ್ವವಶಂಕರೀ - ಸರ್ವೋನ್ಮಾದಿನೀ - ಸರ್ವಾರ್ಥಸಾಧಕೀ - ಸರ್ವಸಂಪತ್ತಿಪೂರಣೀ - ಸರ್ವಮಂತ್ರಮಯೀ ಸರ್ವದ್ವಂದ್ವಕ್ಷಯಂಕರೀ ಎಂಬವು ಇದೇ ಹೆಸರಿನಿಂದ ಪ್ರಸಿದ್ಧಿಯುಳ್ಳ ಹದಿನಾಲ್ಕು ಶಕ್ತಿಗಳು. ನಾಡಿಗಳಲ್ಲಿ ಈ ಶಕ್ತಿಗಳ ಐಕ್ಯವನ್ನು ಧ್ಯಾನಿಸಬೇಕು. ॥ ೧೧ ॥

ಪ್ರಾಣಾಪಾನವ್ಯಾನೋದಾನಸಮಾನನಾಗಕೂರ್ಮಕೃಕರದೇವದತ್ತ ಧನಂಜಯಾ ದಶವಾಯವಃ ಸರ್ವಸಿದ್ಧಿಪ್ರದಾದಿಬಹಿರ್ದಶಾರ ದೇವತಾಃ ॥ ॥ ೧೨ ॥

ಏತದ್ವಾಯುಸಂಸರ್ಗಕೋಪಾಧಿಭೇದೇನ ರೇಚಕಃ ಪಾಚಕಃ ಶೋಷಕೋ ದಾಹಕಃ ಪ್ಲಾವಕ ಇತಿ ಪ್ರಾಣಮುಖ್ಯತ್ವೇನಪಂಚಧಾಜಠರಾಗ್ನಿರ್ಭವತಿ ॥ ೧೩ ॥

ಕ್ಷಾರಕ-ಉದ್ಗಾರಕಃ ಕ್ಷೋಭಕೋ ಜೃಂಭಕೋ ಮೋಹಕ ಇತಿ ನಾಗಪ್ರಾಧಾನ್ಯೇನ ಪಂಚವಿಧಾಸ್ತೇ ಮನುಷ್ಯಾಣಾಂ ದೇಹಗಾಃ ಭಕ್ಷ್ಯ ಭೋಜ್ಯ ಚೋಷ್ಯಲೇಹ್ಯ ಪೇಯಾತ್ಮಕ ಪಂಚವಿಧಮನ್ನಂಪಾಚಯಂತಿ ॥ ೧೪ ॥

ಏಕಾದಶವಹ್ನಿಕಲಾಸ್ಸರ್ವಜ್ಞಾದ್ಯಾ ಅಂತರ್ದಶಾರದೇವತಾಃ ॥ ೧೫ ॥

ಶೀತೋಷ್ಣಸುಖದುಃಖೇಚ್ಛಾಃ ಸತ್ತ್ವಂ ರಜಸ್ತಮೋ ವಶಿನ್ಯಾದಿಶಕ್ತಯೋಽಷ್ಟೌ ॥ ೧೬ ॥

ಪ್ರಾಣ - ಅಪಾನ - ವ್ಯಾನ - ಉದಾನ - ಸಮಾನಗಳು ಐದು ಮುಖ್ಯವಾದ ವಾಯುವೃತ್ತಿಗಳು. ನಾಗ - ಕೂರ್ಮ - ಕೃಕರ - ದೇವದತ್ತ - ಧನಂಜಯಗಳೆಂಬವು ಐದು ಉಪವಾಯುಗಳು. ಈ ಹತ್ತು ವಾಯುಗಳಲ್ಲಿ ಸರ್ವಾರ್ಥಸಾಧಕ ಚಕ್ರದ ದೇವತೆಗಳಾದ ಸರ್ವಸಿದ್ಧಿಪ್ರದಾ - ಸರ್ವಸಂಪತ್ಪ್ರದಾ - ಸರ್ವಪ್ರಿಯಂಕರೀ - ಸರ್ವಮಂಗಲಕಾರಿಣೀ - ಸರ್ವಕಾಮಪ್ರದಾ - ಸರ್ವದುಃಖವಿಮೋಚನೀ - ಸರ್ವಮೃತ್ಯುಪ್ರಶಮನೀ - ಸರ್ವವಿಘ್ನನಿವಾರಣೀ - ಸರ್ವಾಂಗಸುಂದರೀ - ಸರ್ವಸೌಭಾಗ್ಯದಾಯಿನೀ ಎಂಬ ಹತ್ತು ಶಕ್ತಿಗಳ ತಾದಾತ್ಮ್ಯವನ್ನು ಧ್ಯಾನಮಾಡಬೇಕು. || ೧೨ ||

ಮೇಲೆ ಹೇಳಿರುವ ವಾಯುಗಳಲ್ಲಿ ಮೊದಲಿನ ಐದು ವಾಯುಗಳ ಸಂಸರ್ಗದಿಂದ ರೇಚನ - ಪಚನ - ಶೋಷಣ - ದಾಹ - ಪ್ಲವನವೆಂಬ ಐದು ಕಾರ್ಯಗಳಲ್ಲಿ ಜಠರಾಗ್ನಿಯು ಶಕ್ತವಾಗುವದು. ಜಠರಾಗ್ನಿಯು ಒಂದೊಂದು ಬಗೆಯ ಉಪಾಧಿ ಸಂಪರ್ಕದಿಂದ ಒಂದೊಂದು ಕಾರ್ಯವನ್ನು ನೆರವೇರಿಸುತ್ತಾ ರೇಚಕ - ಪಾಚಕ - ಶೋಷಕ ದಾಹಕ - ಪ್ಲಾವಕವೆಂಬದಾಗಿ ಮುಖ್ಯವಾಯು ಸಂಸರ್ಗ ನಿಮಿತ್ತದಿಂದ ಹೆಸರನ್ನು ಹೊಂದುವದು. || ೧೩ ||

ಐದು ಉಪವಾಯುಗಳಲ್ಲಿ ಮೊದಲನೆಯದಾದ ನಾಗವಾಯುವಿನ ಪ್ರಧಾನತೆಯಲ್ಲಿ ಜಠರಾಗ್ನಿಯು ಪೂರ್ವದಂತೆ ಒಂದೊಂದು ವಾಯುವಿನ ಸಂಪರ್ಕವೆಂಬ ಉಪಾಧಿಯಿಂದ ಕ್ಷಾರಕ - ಉದ್ಗಾರಕ - ಕ್ಷೋಭಕ - ಜೃಂಭಕ - ಮೋಹಕವೆಂಬ ಹೆಸರನ್ನು ಪಡೆದು ಅದಕ್ಕೆ ತಕ್ಕಂತೆ ಕ್ಷರಣ - ಉದ್ಗಾರ - ಕ್ಷೋಭ - ಜೃಂಭಣ ಮೋಹವೆಂಬ ಕ್ರಿಯೆಗಳನ್ನು ಮಾಡುವದು. ಮತ್ತು ಭಕ್ಷ್ಯ - ಭೋಜ್ಯ - ಚೋಷ್ಯ ಲೇಹ್ಯ - ಪೇಯವೆಂಬ ಐದು ವಿಧದ ಅನ್ನವನ್ನು ಪಚನಮಾಡುತ್ತದೆ. || ೧೪ ||

ಚಕ್ರದ ಒಳಗಿನ ಹತ್ತು ಅರಗಳ ನಡುವೆಯಿರುವ ಸರ್ವಜ್ಞಾ - ಶಕ್ತಿ - ಸರ್ವಶಕ್ತಿದೇವೀ - ಸರ್ವೈಶ್ವರ್ಯ ಪ್ರದಾಯಿನೀ - ಸರ್ವಜ್ಞಾನಮಯೀ - ಸರ್ವವ್ಯಾಧಿ ವಿನಾಶಿನೀ - ಸರ್ವಾಧಾರ ಸ್ವರೂಪಿಣೀ - ಸರ್ವಪಾಪಹರಾ - ಸರ್ವಾನಂದಮಯೀ ಸರ್ವರಕ್ಷಾ ಸ್ವರೂಪಿಣೀ - ಸರ್ವೇಪ್ಸಿತ ಫಲಪ್ರದಾ ಎಂಬ ಹತ್ತು ಶಕ್ತಿಗಳ ಅಭೇದವನ್ನು ಪೂರ್ವೋಕ್ತವಾದ ಹತ್ತು ಅಗ್ನಿ ಕಲೆಗಳಲ್ಲಿ ಧ್ಯಾನಿಸಬೇಕು. || ೧೫ ||

ವಶಿನೀ - ಕಾಮೇಶ್ವರೀ - ಮೋದಿನೀ - ವಿಮಲಾ - ಅರುಣಾ - ಜಯಿನೀ - ಸರ್ವೇಶ್ವರೀ - ಕೌಲಿನೀ ಎಂಬ ಎಂಟು ವಶಿನ್ಯಾದಿ ಶಕ್ತಿಗಳು. ಇವುಗಳ ಐಕ್ಯವನ್ನು ಶೀತ ಉಷ್ಣ - ಸುಖ - ದುಃಖ - ಇಚ್ಛಾ - ಸತ್ತ್ವ - ರಜಸ್ - ತಮಸ್ ಎಂಬ ಎಂಟರಲ್ಲಿ ಚಿಂತಿಸಬೇಕು. || ೧೬ ||

ಶಬ್ದಾದಿತನ್ಮಾತ್ರಾಃ ಪಂಚಪುಷ್ಪಬಾಣಾಃ ॥
ಮನಇಕ್ಷುಧನುಃ ॥
ರಾಗಃ ಪಾಶಃ ॥
ದ್ವೇಷೋಽಂಕುಶಃ ॥ ೧೭ ॥

ಅವ್ಯಕ್ತಮಹದಹಂಕಾರಾಃ ಕಾಮೇಶ್ವರೀವಜ್ರೇಶ್ವರೀ
ಭಗಮಾಲಿನ್ಯೋಽನ್ತಸ್ತ್ರಿಕೋಣಗಾ ದೇವತಾಃ ॥ ೧೮

ನಿರುಪಾಧಿಕಸಂವಿದೇವ ಕಾಮೇಶ್ವರಃ ॥ ೧೯ ॥

ಸದಾನಂದ ಪೂರ್ಣಃ ಸ್ವಾತ್ಮೈವ ಪರದೇವತಾ ಲಲಿತಾ

ಲೌಹಿತ್ಯಮೇತಸ್ಯ ಸರ್ವಸ್ಯ ವಿಮರ್ಶಃ ॥ ೨೦ ॥

ಶಬ್ದ - ಸ್ಪರ್ಶ - ರೂಪ - ರಸ - ಗಂಧಗಳು ಪಂಚತನ್ಮಾತ್ರಗಳೆಂದು ಕರೆಯಲ್ಪಡುವ ಜ್ಞಾನೇಂದ್ರಿಯಗಳ ವಿಷಯಗಳು. ಇವುಗಳಲ್ಲಿ ಐದು ಪುಷ್ಪ ಬಾಣಗಳ ಐಕ್ಯವನ್ನು ಧ್ಯಾನಿಸುವದು. ಅವಿಕೃತವಾದ ಮನಸ್ಸು ಇಕ್ಷುಚಾಪವೆಂದೂ ಷಟ್ತ್ರಿಂಶತ್ತತ್ವಗಳಲ್ಲಿ ಒಂದಾದ ಪ್ರೀತಿಯೆಂಬ ತತ್ವವು ಪಾಶವೆಂದೂ ದ್ವೇಷವು ಅಂಕುಶವೆಂದೂ ಧ್ಯಾನಿಸಲ್ಪಡಬೇಕು. ‖ ೧೭ ‖

ಅವ್ಯಕ್ತವೆಂದರೆ ಪ್ರಕೃತಿ ತತ್ವವೆಂದೂ ಮಹತ್ ಎಂದರೆ ಬುದ್ಧಿ ತತ್ವವೆಂದೂ ತಿಳಿಯಬೇಕು. ಮಹತ್ - ಅಹಂಕೃತಿ - ಅವ್ಯಕ್ತವೆಂಬ ತತ್ವಗಳನ್ನು ಕಾಮೇಶ್ವರೀ ವಜ್ರೇಶ್ವರೀ - ಭಗಮಾಲಿನೀ ಎಂಬ ಒಳಗಿನ ತ್ರಿಕೋಣದೇವತಾ ರೂಪಗಳನ್ನಾಗಿ ಭಾವಿಸಬೇಕು. ‖ ೧೮ ‖

ಉಪಾಧಿ ಶೂನ್ಯವಾದ ಶುಧ್ಧ ಚೈತನ್ಯವೇ ಬಿಂದು ರೂಪನಾದ ಕಾಮೇಶ್ವರನು " ಸಂವಿತ್ಕಾಮೇಶ್ವರಃ ಸ್ಮೃತಃ " ಎಂಬ ವಚನವು ಇದಕ್ಕೆ ಆಧಾರವು. ‖ ೧೯ ‖

ಹಿಂದೆ ಹೇಳಿರುವ ಶುದ್ಧ ಚೈತನ್ಯವು ಸದಾನಂದವೆಂಬ ಉಪಾಧಿಯಿಂದ ಕೂಡಿ ಉಪಾಸ್ಯವಾಗುವುದು. ಆ ಉಪಾಸ್ಯ ದೇವತೆಯನ್ನು ಸ್ವಾತ್ಮಾಭೇದದಿಂದ ಧ್ಯಾನಿಸುವದು. ಅಂತಃಕರಣದಿಂದ ಕೂಡಿದ ಚೈತನ್ಯವು ಉಪಾಸಕನು. ಅಲ್ಲಿ ಪರದೇವತೆಯು ಅಂತರ್ಯಾಮಿರೂಪದಿಂದಿರುವದು. ಇದಕ್ಕೆ ಲಲಿತಾ ಎಂದು ಅಸಾಧಾರಣವಾದ ಹೆಸರು. ಒಬ್ಬ ಆತ್ಮನು ಅಂತಃಕರಣೋಪಾಧಿಯಿಂದ ಉಪಾಸಕನೂ ಆನಂದತ್ವಾದಿ ಧರ್ಮಶೂನ್ಯವಾದ ಧರ್ಮಿರೂಪದಿಂದ ಉಪಾಸ್ಯ ಪರದೇವತೆಗೆ ಆಧಾರ ಭೂತನಾದ ಕಾಮೇಶ್ವರನೂ ಆಗಿರುವನು. ಕಾಮೇಶ್ವರಾಂಕ ನಿಲಯಳಾದ ಉಪಾಸ್ಯ ದೇವತೆಯು ಆನಂದತ್ವಾದಿ ಕಿಂಚಿದುಪಾಧಿಯಿಂದ ಕೂಡಿ ಪರದೇವತೆ ಅಥವಾ ಲಲಿತಾ ಎಂದೆನಿಸಲ್ಪಡುವುದು. ‖ ೨೦ ‖

ಕಾಮೇಶ್ವರ - ಲಲಿತಾ - ಸ್ವಾತ್ಮಾ ಈ ವಸ್ತುಗಳ ಅನುಸಂಧಾನವೇ ಲೌಹಿತ್ಯವೆಂದು ಕರೆಯಲ್ಪಡುವದು. ಸರ್ವ ಪ್ರಾಣಿಗಳಿಗೂ ಸ್ವಾತ್ಮನಲ್ಲಿ ಪ್ರೀತಿಯಿರುವುದನ್ನು ನಾವು ಕಾಣುತ್ತಲಿದ್ದೇವೆ.

ಪ್ರೀತಿ ಮತ್ತು ರಾಗ ಎರಡೂ ಒಂದೇ ತತ್ವವು. ಹಿಂದಿನ ವಾಕ್ಯಗಳಲ್ಲಿ ನಿರುಪಾಧಿಕ ಪದದಿಂದ ಕೇವಲ ಆತ್ಮವನ್ನೂ ಸದಾನಂದ ಪೂರ್ಣ ಪದದಿಂದ ಉಪಾಧಿ ವಿಶಿಷ್ಟ ಆತ್ಮವನ್ನೂ ಹೇಳಿರುತ್ತದೆ. ಶುದ್ಧ–ಉಪಹಿತಗಳಿಗೆ ತಾದಾತ್ಮ್ಯವೇ ಸಂಬಂಧವು. ಆದರೆ ಆ ಸಂಬಂಧವು ತ್ರಿಪುರ ಸುಂದರೀ ಕಾಮೇಶ್ವರರಸ್ಥೂಲ ವಿಗ್ರಹಗಳ ಸಂಬಂಧ ರೂಪವಾದ್ದರಿಂದ ಕಾಮೇಶ್ವರಾಂಕನಿಲಯತ್ವವೆಂಬದಾಗಿ ವ್ಯವಹರಿಸಲ್ಪಡುವ ಸಂಯೋಗವೆಂಬ ವಾಸನಾ ರೂಪವಾಗಿಯೇ ಇರುವುದು. ಇದನ್ನು ಶಿವಶಕ್ತಿ

ಅನನ್ಯಚಿತ್ತತ್ವೇನ ಚ ಸಿದ್ಧಿಃ || ೨೨ ||

ಭಾವನಾಯಾಃ ಕ್ರಿಯಾ ಉಪಚಾರಃ || ೨೩ ||

ಅಹಂ ತ್ವಮಸ್ತಿ ನಾಸ್ತಿ ಕರ್ತವ್ಯಮಕರ್ತವ್ಯಮುಪಾಸಿತವ್ಯ
ಮಿತಿ ವಿಕಲ್ಪಾನಾಮಾತ್ಮನಿ ವಿಲಾಪನಂ ಹೋಮಃ || ೨೪ ||

ಭಾವನಾವಿಷಯಾಣಾಮಭೇದಭಾವನಾ ತರ್ಪಣಮ್ || ೨೫

ಪಂಚದಶತಿಥಿರೂಪೇಣ ಕಾಲಸ್ಯ ಪರಿಣಾಮಾವಲೋಕನಂ ।

ಸಾಮರಸ್ಯವೆಂದೂ ಕರೆಯುವುದುಂಟು. ಉಪಾಧಿ ಶೂನ್ಯತಾದಶೆಯಲ್ಲಿ ಸ್ಫಟಿಕದಲ್ಲಿ ಶುದ್ಧತ್ವವು ತೋರುವಂತೆ ಕಾಮೇಶ್ವರನಲ್ಲಿ ಶುದ್ಧತ್ವವಿರುವುದರಿಂದ ಶುಕ್ಲ ಚರಣತ್ವ ವಾಸನೆಯೂ ವಿಶಿಷ್ಟದಲ್ಲಿ ಉಪಾಸನಾ ವೃತ್ತಿ ಸಂಬಂಧದಿಂದ ಮನಸ್ಸಿನ ರಾಗವಿರು ವುದರಿಂದ ರಕ್ತಚರಣತ್ವವಾಸನೆಯೂ ಇರುವುದು. ಈ ಎರಡು ವಿಧವಾದ ಚರಣ ಪ್ರಭೆಗಳ ಮಿಶ್ರಣದಲ್ಲಿ ಮಿಶ್ರಚರಣತ್ವ ವಾಸನೆಯು ಇರುವುದು. || ೨೧ ||

ಬಹಿರ್ಯಾಗದಲ್ಲಿ ಪ್ರತಿಯೊಂದು ಆವರಣದಲ್ಲಿಯೂ ಒಂದೊಂದು ಸಿದ್ಧಿಯೂ ಮುದ್ರೆಯೂ ಪೂಜಿಸಲ್ಪಡುತ್ತವೆ. ಆ ಆವರಣ ದೇವತೆಯನ್ನು ಸ್ವಾತ್ಮೈಕ್ಯದಿಂದ ಏಕಾಗ್ರಚಿತ್ತದಿಂದ ಧ್ಯಾನಿಸುವುದೇ ಸಿದ್ಧಿಯು. || ೨೨ ||

ಲಲಿತಾ ದೇವತೆಯನ್ನು ಧಾರಾ ರೂಪವಾಗಿ ಪುನಃ ಪುನಃ ನೆನಸಿಕೊಳ್ಳುವದು ಉಪಚಾರ ಸಮರ್ಪಣವು. ಗಂಧಾದ್ಯುಪಚಾರ ಭಾವನೆಗಳನ್ನು ವಿಶಿಷ್ಟ ರೂಪದಿಂದ ಮಾಡಿದರೆ ದೇವೀ ಭಾವನೆಗೆ ವಿರೋಧ ಬರುವುದರಿಂದ ವಿರೋಧವಿಲ್ಲದಂತೆ ಭಾವನೆ ಯನ್ನು ನಡೆಸಬೇಕು. || ೨೩ ||

ಶ್ರೀ ಚಕ್ರದಲ್ಲಿ ಅನಂತವಾದ ಶಕ್ತಿಗಳಿವೆ, ಅವುಗಳಲ್ಲಿ ತ್ರಿಪುರಸುಂದರೀ ದೇವಿಯ ಅಭೇದ ಭಾವನೆಯನ್ನು ಮಾಡಿದ್ದರ ಫಲವಾಗಿ ಉಂಟಾಗುವ ಹೋಮ ವಾಸನೆಯನ್ನು ಇಲ್ಲಿ ಹೇಳಿರುತ್ತದೆ. ಇಲ್ಲಿ "ಅಹಂ–ತ್ವಂ" ಶಬ್ದಗಳಿಂದ ಪ್ರತ್ಯಕ್ ಪರಾಕ್ ವಸ್ತುಗಳನ್ನೂ "ಅಸ್ತಿನಾಸ್ತಿ" ಎಂಬ ಶಬ್ದಗಳಿಂದ ಲೌಕಿಕ ವಿಧಿ ನಿಷೇಧ ಗಳನ್ನೂ "ಕರ್ತವ್ಯ-ಮಕರ್ತವ್ಯಂ" ಎಂಬ ಶಬ್ದಗಳಿಂದ ವೈದಿಕ ಕರ್ಮಕಾಂಡಗಳಲ್ಲಿ ರುವ ವಿಧಿನಿಷೇಧಗಳನ್ನೂ "ಉಪಾಸಿತವ್ಯಂ" ಎಂಬ ಶಬ್ದದಿಂದ ಉಪನಿಷತ್ತಿನ ವಿಧಿಯನ್ನೂ ಈ ರೀತಿ ಏಳು ಶಬ್ದಗಳಿಂದ ಸಮಸ್ತ ವೃತ್ತಿಗಳನ್ನೂ ಸಂಗ್ರಹಿಸಿರುತ್ತೆ. ಈ ವೃತ್ತಿಗಳಿಗೆ ಕಾರಣವಾದ ಶಕ್ತಿ ಸಮೂಹವನ್ನು ಪರದೇವತೆಯಲ್ಲಿ ವಿಲಯವಾದಂತೆ ಭಾವಿಸಬೇಕು. || ೨೪ ||

ಶ್ರೀ ಗುರು ಮೊದಲಾಗಿ ಹೋಮಾಂತವಾಗಿ ಇಲ್ಲಿ ಹೇಳಲ್ಪಟ್ಟಿರುವ ಸಕಲ ಪದಾರ್ಥಗಳನ್ನೂ ಅಭೇದ ದೃಷ್ಟಿಯಿಂದ ಭಾವಿಸುವುದಲ್ಲದೇ ಅಭೇದ ಭಾವನೆಯಲ್ಲಿ ಸಹ ವಿಷಯ ಸ್ವಭಾವಾನುಸಾರವಾಗಿ ಕಾಣುವ ಭೇದಾಂಶವನ್ನೂ ಮರೆಮಾಚಿ ನಿರ್ವಿಕಲ್ಪಕಭಾವನಾ ಪೂರ್ವಕವಾಗಿ ಸ್ವಾತ್ಮ ಮಾತ್ರ ವಿಶ್ರಾಂತಿಯು ತರ್ಪಣ ಭಾವನೆಯು. || ೨೫ ||

ದೇಹ ರೂಪವಾದ ಶ್ರೀ ಚಕ್ರವು ಸ್ವಾತ್ಮ ಮಾತ್ರಾವಶೇಷವೆಂದು ಸ್ಪಷ್ಟಪಡಿಸಿ ಪ್ರಪಂಚಕ್ಕೂ ಸ್ವಾತ್ಮನಲ್ಲಿ ವಿಲಯನವನ್ನು ಇಲ್ಲಿ ಹೇಳುತ್ತದೆ. ಪ್ರಪಂಚವು ಕಾಲ ದೇಶ - ಉಭಯಾತ್ಮಕವಾಗಿ ಮೂರು ವಿಧವುಂಟು. ಚಂದ್ರ ಮಂಡಲದಲ್ಲಿ ಸಾದಾಖ್ಯ

ಏವಂ ಮುಹೂರ್ತತ್ರಿತಯಂ ಮುಹೂರ್ತದ್ವಿತಯಂ ಮುಹೂರ್ತ ತ್ರಂ ವಾ ಭಾವನಾಪರೋ ಜೀವನ್ಮುಕ್ತೋ ಭವತಿ ಸ ಏವ ಶಿವಯೋಗೀತಿ ತೇ ॥ ೨೭ ॥

ಪಾಠಾಂತರಂ:— ಬಾಹ್ಯಾಂಭ್ಯಂತರಕರಣಾನಾಂ ರೂಪಗ್ರಹಣಾ ೀಗ್ಯತಾಸ್ತು ಇತ್ಯಾವಾಹನಂ ॥ ೨೮ ॥

ತಸ್ಯಬಾಹ್ಯಾಭ್ಯಂತರ ಕರಣಾನಾ ಮೇಕರೂಪಗ್ರಹಣಮಾಸನಂ ॥೨೯॥

ರಕ್ತಶುಕ್ಲ ಪದೈಕೀಕರಣಂ ಪಾದ್ಯಂ ॥ ೩೦ ॥

ಉಜ್ಜ್ವಲದಾಮೋದಾನಂದಾಸನದಾನಮರ್ಘ್ಯಮ್ ॥ ೩೧ ॥

ಸ್ವಚ್ಛಂ ಸ್ವತಃ ಸಿದ್ಧಮಿತ್ಯಾಚಮನೀಯಂ ॥ ೩೨ ॥

ಚಿಚ್ಚಂದ್ರಮಯಾತಿ ಸರ್ವಾಂಗಸ್ರವಣಂಸ್ನಾನಂ ॥ ೩೩ ॥

ಕಲೆಯೊಂದು ವಿನಹ ಮಿಕ್ಕ ದರ್ಶಾದಿ ಹದಿನೈದು ಕಲೆಗಳು ಪ್ರತಿಪತ್ ಆದಿಯಾಗಿ ಪೂರ್ಣಿಮಾಂತ ತಿಥಿ ರೂಪವಾಗಿ ಕರೆಯಲ್ಪಟ್ಟಿವೆ. ಕಾಲವು ಈ ಹದಿನೈದು ತಿಥಿಗಳ ಮೂಲಕ ಪ್ರಪಂಚ ರೂಪವಾಗಿ ಪರಿಣಮಿಸಿರುತ್ತೆ. ಎಂಬ ಭಾವನೆಯು ಪಂಚದಶ ನಿತ್ಯಾ ಶಕ್ತಿ ಭಾವನೆಯಲ್ಲಿ ಸೇರುತ್ತದೆ. || ೨೬ ||

ಈ ಹಿಂದೆ ಹೇಳಿದಂತೆ ಸ್ವಾತ್ಮ ಮಾತ್ರ ವಿಷಯಕವಾದ ನಿರ್ವಿಕಲ್ಪಕ ಭಾವನೆಯನ್ನು ಅಧಮನಾದರೆ ಮೂಹೂರ್ತತ್ರಯವೂ ಮಧ್ಯಮನು ಮುಹೂರ್ತದ್ವಯವೂ ಉತ್ತಮಾಧಿಕಾರಿಯು ಒಂದೇ ಮುಹೂರ್ತ ಕಾಲವೂ ಆಚರಿಸಿದಲ್ಲಿ ಜೀವನ್ಮುಕ್ತನಾಗುವನು. ಮತ್ತು ಅಂತಹ ಮಹಾತ್ಮನೇ ಶಿವಯೋಗಿ ಎಂದು ಕರೆಯಲ್ಪಡುವನು. ಮೂರು ವೇದಗಳೂ ಬಹಿರಂಗ ಕರ್ಮಗಳನ್ನು ಪ್ರತಿಪಾದಿಸುತ್ತವೆ, ಅಥರ್ವ ವೇದವು ಅಂತರಂಗ ಕರ್ಮಗಳನ್ನೇ ಪ್ರತಿಪಾದನೆ ಮಾಡುತ್ತದೆ. ಆದರಲ್ಲೂ ಈ ಉಪನಿಷತ್ತು ಎಲ್ಲಕ್ಕೂ ಅಂತರಂಗತಮವಾದ ಭಾವನೆಯನ್ನು ನಿರೂಪಿಸುತ್ತಿದೆ. || ೨೭ ||

ಈ ಪಾಠದಲ್ಲಿ ಮುಂದೆ ಒಂದೊಂದು ವಿಧವಾಗಿಯೂ ನಡೆಯುವ ಐಕ್ಯಭಾವನಾ ವಿಶೇಷವನ್ನೇ ಒಂದೊಂದು ಉಪಚಾರವನ್ನಾಗಿ ಕಲ್ಪಿಸಿ ವರ್ಣಿಸಿರುತ್ತದೆ. ಬಹಿರಿಂದ್ರಿಯ ಮತ್ತು ಅಂತರಿಂದ್ರಿಯಗಳು ಆಕಾರವನ್ನು ಗ್ರಹಿಸುವ ಶಕ್ತಿಯಿಂದ ಶೂನ್ಯವಾಗಲೆಂದು ಭಾವನೆಯೇ ಆವಾಹನವು. || ೨೮ ||

ಅಂತರ್ಬಹಿರಿಂದ್ರಿಯಗಳೆಲ್ಲಕ್ಕೂ ಒಂದೇ ವಿಷಯವನ್ನು ಗ್ರಹಿಸುವ ಶಕ್ತಿಯು ಆಸನೋಪಚಾರವು. || ೨೯ ||

ರಕ್ತಚರಣತ್ವದಿಂದ ಕೂಡಿದ ಲಲಿತಾ ರೂಪವನ್ನೂ ಶುಕ್ಲಚರಣತ್ವದಿಂದ ಕೂಡಿದ ಕಾಮೇಶ್ವರ ರೂಪವನ್ನೂ ಭಾವನೆಯಿಂದ ಒಂದುಗೂಡಿಸುವಿಕೆಯು ಪಾದ್ಯೋಪಚಾರವು. || ೩೦ ||

ಸ್ಫುರಿಸುವ ವಿವಿಧ ಸಂತೋಷಮಯಾಸನವನ್ನು ಸಮರ್ಪಿಸುವದು ಅರ್ಘ್ಯೋಪಚಾರವು. || ೩೧ ||

ಶುದ್ಧವಾಗಿಯೂ ಸ್ವತಃ ಸಿದ್ಧವಾಗಿಯೂ ಆತ್ಮವಸ್ತುವಿದೆಯೆಂದು ಭಾವನೆಯೇ ಆಚಮನೀಯೋಪಚಾರವು. || ೩೨ ||

ಚೈತನ್ಯವೆಂಬ ಚಂದ್ರಕಲಾ ಅಮೃತದಿಂದ ಸರ್ವಾಂಗವನ್ನೂ ನೆನೆದಂತೆ ಭಾವಿಸುವದು ಸ್ನಾನೋಪಚಾರವು. || ೩೩ ||

ಚಿದಗ್ನಿಸ್ವರೂಪಪರಮಾನಂದಶಕ್ತಿಸ್ಫುರಣಂ ವಸ್ತ್ರಂ ॥ ೪ ॥

ಪ್ರತ್ಯೇಕಂ ಸಪ್ತವಿಂಶತಿಧಾ ಭಿನ್ನತ್ವೇನೇಚ್ಛಾಜ್ಞಾನಕ್ರಿಯಾತ್ಮಕ
ಬ್ರಹ್ಮಗ್ರಂಥಿಮದ್ರಸತಂತು ಬ್ರಹ್ಮನಾಡೀ ಬ್ರಹ್ಮಸೂತ್ರಂ ॥ ೩೫ ॥

ಸ್ವವ್ಯತಿರಿಕ್ತವಸ್ತು ಸಂಗರಹಿತ ಸ್ಮರಣಂ ವಿಭೂಷಣಂ ॥ ೩೬ ॥

ಸಚ್ಚಿತ್ಸುಖಪರಿಪೂರ್ಣತಾಸ್ಮರಣಂಗಂಧಃ ॥ ೩೭ ॥

ಸಮಸ್ತವಿಷಯಾಣಾಂ ಮನಸಃ ಸ್ಥೈರ್ಯೇಣಾನುಸಂಧಾನಂ ಕುಸುಮಂ
॥ ೩೮ ॥

ತೇಷಾಮೇವಸರ್ವದಾ ಸ್ವೀಕರಣಂ ಧೂಪಃ ॥ ೩೯ ॥

ಪವನಾವಚ್ಛಿನ್ನೋರ್ಧ್ವಜ್ವಲನಸಚ್ಚಿದುಲ್ಕಾಕಾಶದೇಹೋದೀಪಃ
॥ ೪೦ ॥

ಸಮಸ್ತಯಾತಾಯಾತವರ್ಜ್ಯಂ ನೈವೇದ್ಯಂ ॥ ೪೧ ॥

ಅವಸ್ಥಾತ್ರಯಾಣಾಮೇಕೀಕರಣಂತಾಂಬೂಲಂ ॥ ೪೨ ॥

ಮೂಲಾಧಾರಾದಾಬ್ರಹ್ಮರಂಧ್ರಪರ್ಯಂತಂ ಬ್ರಹ್ಮರಂಧ್ರಾದಾ ಮೂಲಾಧಾರಪರ್ಯಂತಂ ಗತಾಗತರೂಪೇಣಪ್ರಾದಕ್ಷಿಣ್ಯಂ ॥ ೪೩ ॥

ತುರ್ಯಾವಸ್ಥಾ ನಮಸ್ಕಾರಃ ॥ ೪೪ ॥

ದೇಹಶೂನ್ಯ ಪ್ರಮಾತೃತಾನಿಮಜ್ಜನಂ ಬಲಿಹರಣಮ್ ॥ ೪೫ ॥

ಸತ್ಯಮಸ್ತಿಕರ್ತವ್ಯಮಕರ್ತವ್ಯಮೌದಾಸೀನ್ಯನಿತ್ಯಾತ್ಮವಿಲಾಪನಂ ಹೋಮಂ ॥ ೪೬ ॥

ಆನಂದಾಂಶಸ್ಫುರಣವು ಚೈತನ್ಯವೆಂಬ ಅಗ್ನಿಜ್ವಾಲೆಯ ಪ್ರಕಾಶ ಸ್ವರೂಪವೆಂಬ ಭಾವನೆಯುವಸ್ತ್ರೋಪಚಾರವು. || ೩೪ ||

ಇಪ್ಪತ್ತೇಳು ವಿಭಾಗಗಳನ್ನೊಳಗೊಂಡ ಇಚ್ಛಾ - ಜ್ಞಾನ - ಕ್ರಿಯಾ ಎಂಬ ಬ್ರಹ್ಮ ಗ್ರಂಥಿಯಿಂದ ಕೂಡಿದ ರಸತಂತುಮಯವಾದ ಬ್ರಹ್ಮನಾಡಿಯನ್ನು ಬ್ರಹ್ಮಸೂತ್ರೋಪ ಚಾರವೆಂದು ತಿಳಿಯಬೇಕು. || ೩೪ ||

ತನಗೆ ವ್ಯತಿರಿಕ್ತ ವಸ್ತುಗಳು ಇಲ್ಲದ್ದರಿಂದ ಅಸಂಗತ್ವಸ್ಮರಣೆಯು ವಿಭೂಷಣೋ ಪಚಾರವು. || ೩೬ ||

ಸತ್ಯತೆ, ಚೈತನ್ಯ, ಆನಂದ, ಪೂರ್ಣತೆ ಇವುಗಳ ಸ್ಮರಣವು ಗಂಧೋಪಚಾರವು. || ೩೭ ||

ಯಾವವಿಷಯವನ್ನು ಗ್ರಹಿಸುವಾಗಲೂ ಚಂಚಲವಾಗದೇ ಸ್ಥಿರತ್ವದಿಂದ ಕೂಡಿದ ಮನಸ್ಸಿನ ಅನುಸಂಧಾನವೇ ಪುಷ್ಪೋಪಚಾರವು. || ೩೮ ||

ಸರ್ವದಾ ಸ್ಥಿರತ್ವದಿಂದ ಅವುಗಳನ್ನು ಗ್ರಹಿಸುತ್ತಿರವದು ಧೂಪವು. || ೩೯ ||

ಗಾಳಿಯ ಪರಿಚ್ಛೇದದಿಂದ ಊರ್ಧ್ವಮುಖವಾಗಿ ಜ್ವಲಿಸುವ ಸಚ್ಚಿತ್ಸ್ವರೂಪ ವಾದಕೊಳ್ಳಿಯ ಆವಕಾಶದಲ್ಲಿ ಕಲ್ಪಿತವಾದ ದೇಹವೇ ದೀಪೋಪಚಾರವು. || ೪೦ ||

ಎಲ್ಲ ಗಮನ ಆಗಮನಗಳನ್ನು ವರ್ಜಿಸುವುದೇ ನೈವೇದ್ಯೋಪಚಾರವು. ||೪೧||

ಜಾಗ್ರತ್–ಸ್ವಪ್ನ –ಸುಷುಪ್ತಿಗಳೆಂಬ ಅವಸ್ಥಾತ್ರಯವನ್ನು ಒಂದೇ ರೂಪ ವನ್ನಾಗಿ ಭಾವಿಸುವುದು ತಾಂಬೂಲವು. || ೪೨ ||

ಶರೀರದೊಳಗಿರುವ ಮೂಲಾಧಾರ ಮೊದಲಾಗಿ ಬ್ರಹ್ಮರಂಧ್ರಪರ್ಯಂತವೂ ಬ್ರಹ್ಮ ರಂಧ್ರದಿಂದ ಮೂಲಾಧಾರಪರ್ಯಂತವಾಗಿಯೂ ಗಮನ-ಆಗಮನಗಳ ಭಾವನೆಯೇ ಪ್ರಾದಕ್ಷಿಣ್ಯೋಪಚಾರವು. || ೪೩ ||

ತುರೀಯವಾದ ಅವಸ್ಥಾಪ್ರಾಪ್ತಿಯೇ ನಮಸ್ಕಾರವು. || ೪೪ ||

ದೇಹೋಪಾಧಿಯನ್ನು ತ್ಯಜಿಸಿ ಕೇವಲ ಪ್ರಮಾತೃತ್ವರೂಪದಲ್ಲಿ ಮುಳುಗು ವುದು ಬಲಿಹರಣೋಪಚಾರವು. || ೪೫ ||

ಸ್ವಲ್ಪ ವ್ಯತ್ಯಾಸದಿಂದ ಶುಧ್ಧವಾದ ಪಾಠದಿಂದ ಕೂಡಿದ ಈ ವಾಕ್ಯವನ್ನು ಹಿಂದೆ ವ್ಯಾಖ್ಯಾನ ಮಾಡಿರುತ್ತದೆ. || ೪೬ ||

ಸ್ವಯಂ ತತ್ಪಾದುಕಾ ನಿಮಜ್ಜನಂ ಪರಿಪೂರ್ಣಧ್ಯಾನಂ ॥ ೪೭ ॥

ಏವಂ ಮುಹೂರ್ತತ್ರಯಂ ಭಾವನಾಪರೋ ಜೀವನ್ಮುಕ್ತೋಭವತಿ । ತಸ್ಯ ದೇವತಾತ್ಮೈಕ್ಯಸಿದ್ಧಿಃ ॥ ಚಿಂತಿತಕಾರ್ಯಾಣ್ಯಯತ್ನೇನ ಸಿದ್ಧ್ಯನ್ತಿ ॥ ಸಏವಶಿವಯೋಗೀತಿಕಥ್ಯತೇ । ಕಾದಿಮತೇನಾಂತಶ್ಚಕ್ರಭಾವನಾಃ ಪ್ರತಿಪಾದಿತಾಃ ॥ ಜೀವನ್ಮುಕ್ತೋ ಭವತಿ ಯ ಏವಂವೇದ ॥ ಇತ್ಯುಪನಿಷತ್ ॥ ಓಂಭದ್ರಂಕರ್ಣೇಭಿರಿತಿ ಶಾಂತಿಃ ॥ ಹರಿಃಓಂತತ್ಸತ್ ॥ ಇತಿ ಭಾವನೋಪನಿಷತ್ ಸಂಪೂರ್ಣಾ ॥ ೪೮ ॥

ಯ ಏವಂ ವೇದ ಸೋಽಥರ್ವಶಿರೋಽಧೀತೇ ॥ ೪೯ ॥



ತಾನೇ ಆ ಗುರುಪಾದಕೆಯಲ್ಲಿ ಮುಳುಗಿಹೋದಂತೆ ಪಾರತಂತ್ರ್ಯವನ್ನು ಭಾವಿಸುವದು ಪರಿಪೂರ್ಣಧ್ಯಾನವು. ॥ ೪೭ ॥

ಜೀವನ್ಮುಕ್ತಿಫಲವು ಉಪಾಸಕನಿಗೆ ದೊರಕುವದಲ್ಲದೇ ಇತರ ಫಲಗಳೂ, ದೇವತಾತ್ಮರ ಐಕ್ಯಸಿದ್ಧಿ, ವಾಂಛಿತಸಕಲಕಾಮುಗಳ ಪ್ರಾಪ್ತಿ, ಶಿವಯೋಗಿ ಎಂಬ ಪದವಿ, ಇವುಗಳೂ ಪ್ರಾಪ್ತವಾಗುತ್ತವೆ.

ಇಲ್ಲಿ ಹೇಳಿರುವ ಅಂತಶ್ಚಕ್ರಭಾವನೆಗಳು ಕಾದಿನಾಮುಕಶಕ್ತಿಮತವನ್ನು ಅವಲಂಬಿಸಿರುತ್ತವೆ. ॥ ೪೮ ॥

ಈ ಉಪನಿಷತ್ತು ಈ ವಿಧವಾದ ಭಾವನೆಯನ್ನು ಪ್ರತಿಪಾದಿಸುತ್ತಿದೆಯೆಂದು ಯಾರು ತಿಳಿಯುವರೋ ಅವರೇ ಅರ್ಥಜ್ಞಾನಸಹಿತವಾಗಿ ಅಥರ್ವೋಪನಿಷತ್ತುಗಳನ್ನು ಅಧ್ಯಯನಮಾಡಿದವರಾಗುತ್ತಾರೆ. ಭಾವನೆಯನ್ನು ವಿಧಿಸುವುದರಿಂದಲೇ ಇದಕ್ಕೆ ಭಾವನೋಪನಿಷತ್ ಎಂಬ ನಾಮಧೇಯವು ಬಂದಿರುವುದು. ॥ ೪೯ ॥

ಭಾವನೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

# ॥ ತ್ರಿಪುರೋಽಪನಿಷತ್ ॥

---

ಹರಿಃ ಓಂ ವಾಙ್ಮೇ ಮನಸಿ - ಇತಿ ಶಾನ್ತಿಃ

ತಿಸ್ರಃ ಪುರಸ್ತ್ರಿಪಥಾ ವಿಶ್ವಚರ್ಷಣಾ ಅತ್ರಾಕಥಾ ಅಕ್ಷರಾಃ ಸಂನಿವಿಷ್ಟಾಃ । ಅಧಿಷ್ಠಾಯೈನಾ ಅಜರಾ ಪುರಾಣೀ ಮಹತ್ತರಾ ಮಹಿಮಾ ದೇವತಾನಾಮ್ ॥ ೧ ॥

ನವಯೋನಿಂ ನವಚಕ್ರಾಣಿ ದೀಧಿರೇ ನವೈವ ಯೋಗಾ ನವಯೋಗಿನ್ಯಶ್ಚ । ನವಾನಾಂ ಚಕ್ರಾ ಅಧಿನಾಥಾಃ ಸ್ಯೋನಾ ನವಭದ್ರಾ ನವ ಮುದ್ರಾ ಮಹೀನಾಮ್ ॥ ೨ ॥

|| ಶ್ರೀ ||

# ತ್ರಿಪುರೋಪನಿಷತ್ತಿನ ಕನ್ನಡ ಅನುವಾದವು.

---

ಈ ಉಪನಿಷತ್ತನ್ನು ಪಠಿಸುವ ಪ್ರಾರಂಭದಲ್ಲಿ "ವಾಙ್ಮೇಮನಸಿ" ಎಂಬ ಶಾಂತಿ ಮಂತ್ರವನ್ನು ಪಠಿಸಬೇಕು.

ಋಗ್ವೇದಕ್ಕೆ ಸೇರಿರುವ ಈ ತ್ರಿಪುರೋಪನಿಷತ್ತಿನ ಮೊದಲನೆಯ ಮಂತ್ರವು ಚಿತ್‌ಶಕ್ತಿಯ ಸ್ವರೂಪವನ್ನು ತೋರಿಸುತ್ತದೆ. ತಿಸ್ರಃ-ಪುರಃ=ಮೂರು ಶರೀರಗಳು, ಎಂದರೆ ಅಜ್ಞಾನಿಗಳ ದೃಷ್ಟಿಯಿಂದ ಕಲ್ಪಿಸಲ್ಪಟ್ಟ ವ್ಯಷ್ಟಿ - ಸಮಷ್ಟಿ ಎಂಬ ಭೇದಗಳನ್ನೊಳಗೊಂಡ, ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಶರೀರಗಳು ಇವೆ. ಹಾಗೆಯೇ ತ್ರಿಪಥಾಃ=ಮೂರು ಮಾರ್ಗಗಳು, ವ್ಯವಹಾರ ಕಾಲದಲ್ಲಿ ಜೀವತ್ವವನ್ನು ಹೊಂದಿದ ಚೈತನ್ಯದಿಂದ ಕರ್ಮ - ಉಪಾಸನಾ - ಜ್ಞಾನಮಾರ್ಗವೆಂಬ ತನ್ನ ಅಧಿಕಾರಕ್ಕೆ ತಕ್ಕಂತೆ ದೇವಯಾನ, ಪಿತೃಯಾಣ, ಮುಂತಾದ ಮೂರು ಮಾರ್ಗಗಳು ಇವೆ. ಮತ್ತು ಅತ್ರ=ಈ ಶ್ರೀ ಚಕ್ರದಲ್ಲಿ ಅಕಥಾ ಅಕ್ಷರಾಃ=ಅಕಾರ, ಕಕಾರ, ಥಕಾರಗಳಿಂದ ಪ್ರಾರಂಭಿಸಿ ಹದಿನಾರು ಅಕ್ಷರಗಳು, ಸನ್ನಿವಿಷ್ಟಾಃ=ಇರಿಸಲ್ಪಟ್ಟಿವೆ. "ಅಕಥಾದಿ ಶ್ರೀ ಪೀಠೇ" ಎಂಬ ಶ್ರುತಿಯನ್ನನುಸರಿಸಿ ಶ್ರೀ ಚಕ್ರದಲ್ಲಿ ಅಕಾರಾದಿ ಹದಿನಾರು ಸ್ವರಗಳೂ ಕಕಾರಾದಿ ಹದಿನಾರು ವರ್ಣಗಳೂ ಥಕಾರಾದಿ ಹದಿನಾರು ವರ್ಣಗಳೂ ಇವೆ. ಏನಾಃ=ಈ ಪುರತ್ರಯ, ಮಾರ್ಗತ್ರಯ, ಅಕಥಾದಿ ವರ್ಣಗಳನ್ನು ಅಧಿಷ್ಠಾಯ=ಚಿದಾಭಾಸ ರೂಪದಿಂದ ಪ್ರವೇಶಿಸಿ, ದೇವತಾನಾಂ, ಮಹಿಮಾ, ಬ್ರಹ್ಮಾದಿ ದೇವತೆಗಳಿಗೂ ಅವರವರ ಸೃಷ್ಟ್ಯಾದಿ ಶಕ್ತಿಗಳನ್ನು ಕೊಟ್ಟು ಸತ್ತಾ-ಚೈತನ್ಯ ವ್ಯಾಪ್ತಿಯೆಂಬ ಸ್ವಸ್ವರೂಪದಿಂದ ಶರೀರತ್ರಯ ವಿಲಕ್ಷಣವಾಗಿರುವುದರಿಂದ ಹುಟ್ಟು, ಸಾವು ಮುಂತಾದ ವಿಕಾರಗಳಿಲ್ಲದೇ ಎಲ್ಲದಕ್ಕಿಂತಲೂ ದೊಡ್ಡದಾಗಿಯೂ ಪುರಾತನವಾಗಿಯೂ ಇರುವ ಚಿತ್ ಶಕ್ತಿಯು ಸರ್ವೋತ್ಕೃಷ್ಟವಾದುದಾಗಿದೆ. || ೧ ||

ನವಯೋನಿಂ=ಮಹಾತ್ರಿಪುರಸುಂದರೀ ಶಕ್ತಿ ಮೊದಲಾದ ಒಂಭತ್ತು ಶಕ್ತಿಗಳೂ, ನವ ಚಕ್ರಾಣಿ—ಸರ್ವಾನಂದಮಯ ಮುಂತಾದ ಒಂಭತ್ತು ಚಕ್ರಗಳೂ, ನವೈವ ಯೋಗಾಃ=ಸಹಜಯೋಗವೂ ಸೇರಿ ಯಮನಿಯಮಾದಿ ಒಂಭತ್ತು ಯೋಗಗಳೂ, ನವಯೋಗಿನ್ಯಶ್ಚ=ಚಕ್ರಗಳಲ್ಲಿ ವಾಸಮಾಡುವ ಒಂಭತ್ತು ಯೋಗಿನಿಯರೂ, ನವಾನಾಂ ಮಹೀನಾಂ ಚಕ್ರಾ ಅಧಿನಾಥಾಃ=ಒಂಭತ್ತು ದೇವತಾಧಾರ ಭೂಮಿಗಳ ಚಕ್ರನಾಥರೂ, ಸ್ಯೋನಾಃ = ದ್ವಾರಪಾಲಕಿಯರೂ, ನವಭದ್ರಾಃ = ಕಾಮೇಶ್ವರೀ ಮುಂತಾದ ಒಂಭತ್ತು ಭದ್ರಾ ಶಕ್ತಿಗಳೂ, ನವಮುದ್ರಾಶ್ಚ = ಯೋನಿಮುದ್ರಾ

ಏಕಾ ಸ ಆಸೀತ್ ಪ್ರಥಮಾ ಸಾ ನವಾಸೀದಾಸೋನವಿಂಶಾ ದಾಸೋನತ್ರಿಂಶಾತ್ । ಚತ್ವಾರಿಂಶಾಂದಥ ತಿಸ್ರಃ ಸಮಿಧಾ ಉಶತೀರಿವ ಮಾತರೋ ಮಾ ವಿಶಂತು ॥ ೩ ॥

ಊರ್ಧ್ವಜ್ವಲನಂ ಜ್ಯೋತಿರಗ್ರೇ ತನೋ ವೈ ತಿರಶ್ಚೀನಮಜರಂ ತದ್ರಜೋಽಭೂತ್ । ಆನಂದನಂ ಮೋದನಂ ಜ್ಯೋತಿರಿಂದೋರೇತಾ ಉ ವೈ ಮಂಡಲಾ ಮಂಡಯಂತಿ ॥ ೪ ॥

ಮುಂತಾದ ಒಂಭತ್ತು ಮುದ್ರೆಗಳೂ, ದೀಧಿರೇ=ಪ್ರಕಾಶಿಸುತ್ತಿವೆ. ಈ ಮಂತ್ರದಲ್ಲಿ ಹೇಳಿದ ನವಶಕ್ತಿ ಮುಂತಾದವು ಎಲ್ಲವೂ ಸಹ ಚಿಚ್ಛಕ್ತಿಯನ್ನು ಆಶ್ರಯಿಸಿ ಅದರ ಪ್ರಕಾಶದಿಂದಲೇ ಪ್ರಕಾಶಿಸುತ್ತಿವೆ. ॥ ೨ ॥

ಏಕಾ ಸಾ ಪ್ರಥಮಾಆಸೀತ್=ಆಚಿತ್ ಶಕ್ತಿಯೊಂದೇ ಪ್ರಧಾನವಾಗಿದ್ದಿತು. ಸಾನವಾಸೀತ್-ಆಶಕ್ತಿಯೇ ನವಭದ್ರಾದಿ ರೂಪಳೂ ಆಗಿದ್ದಳು. ಆ ಸೋನ ವಿಂಶಾತ್=ಮತ್ತು ಆ ಶಕ್ತಿಯು ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯ ಗಳು, ಪಂಚಪ್ರಾಣಗಳು ಅಂತಃಕರಣ ಚತುಷ್ಟಯಗಳೆಂಬ ಹತ್ತೊಂಭತ್ತು ಪದಾರ್ಥ ಗಳ ಶಕ್ತಿ ರೂಪಳೂ ಆಗಿದ್ದಳು. ಹಾಗೆಯೇ ಆಸೋನ ತ್ರಿಂಶಾತ್=ಮೇಲೆ ಹೇಳಿದ ಹತ್ತೊಂಭತ್ತರ ಜೊತೆಗೆ ವಿಷಯ ಪಂಚಕವೂ ಉಪಪ್ರಾಣ ಪಂಚಕವೂ ಸೇರಿ ಇಪ್ಪತ್ತೊಂಭತ್ತು ವಸ್ತುಗಳ ಶಕ್ತಿರೂಪಳೂ ಆಗಿದ್ದಳು. ಚತ್ವಾರಿಂಶಾತ್=ಹದಿನಾಲ್ಕು ಇಂದ್ರಿಯಗಳೂ ಅದರ ಅಧೀಶರೂ ಅವಿದ್ಯಾ, ಕರ್ಮತ್ರಯ, ಅವರಣ, ವಿಕ್ಷೇಪ, ಮೈತ್ರೀ,ಕರುಣಾ, ಮುದಿತಾ, ಉಪೇಕ್ಷಾ, ವಿಶ್ವ, ತೈಜಸ, ಪ್ರಾಜ್ಞ,ತುರ್ಯಗಳೆಂಬವೂ ಸೇರಿ ನಲವತ್ತು ತತ್ವಗಳ ಶಕ್ತಿಗಳೂ ಆಗಿದ್ದಳು. ಸಮಿಧಾಃತಿಸ್ರಃ=ಜ್ವಲಿಸುತ್ತಿರುವ ಜ್ಞಾನ-ಇಚ್ಛಾ-ಕ್ರಿಯಾ ಶಕ್ತಿಗಳು, ಉಶತೀಃಮಾತರ ಇವಮಾ ಆವಿಶಂತು=ಪುತ್ರರ ಯೋಗಕ್ಷೇಮವನ್ನು ಅಪೇಕ್ಷಿಸುವ ತಾಯಿಂದರಂತೆ ನನ್ನನ್ನು ಪ್ರವೇಶಿಸಲಿ. ಈ ಸಮಸ್ತ ತತ್ವ ಸ್ವರೂಪಳೂ ಆದ ಶಕ್ತಿಯು ಇಚ್ಛಾಜ್ಞಾನ ಕ್ರಿಯಾ ಶಕ್ತಿರೂಪದಿಂದ ನನ್ನಲ್ಲಿ ಪ್ರವೇಶಿಸಿ ತಾಯಂದಿರು ಪುತ್ರ ಕ್ಷೇಮವನ್ನು ಬಯಸುತ್ತಿರುವಂತೆ ನನ್ನ ಹಿತವನ್ನು ಕೋರಲಿ ॥ ೩ ॥

ಅಗ್ರೇ ಊರ್ಧ್ವಜ್ವಲನಂ ಜ್ಯೋತಿಃ=ಪರಾಕ್ ವಸ್ತುವಿನ ವೃತ್ತಿ ಹುಟ್ಟುವುದಕೆ ಮೊದಲು ಪ್ರಪಂಚವೆಂಬ ಕಾಷ್ಠವನ್ನು ಅವಲಂಬಿಸಿ ಮೇಲಕ್ಕೆ ಉರಿಯುವ ತೇಜೋ ರೂಪವಾಗಿತ್ತು. ತಿರಶ್ಚೀನಂ ತಮಃ, ರಜಃ ತತ್ ಅಜರಂ ಅಭೂತ್=ತೇಜೋ ರೂಪಕ್ಕೆ ವ್ಯತ್ಯಸ್ತಗಳಾದ ತಮೋಗುಣ ರಜೋಗುಣಗಳೂ ಪರಾಗ್ರೂಪವನ್ನು ಬಿಟ್ಟು ನಿರ್ವಿಕಾರ ಬ್ರಹ್ಮರೂಪಗಳಾಗಿದ್ದವು. ಆನಂದನಂ, ಮೋದನಂ, ಜ್ಯೋತಿಃ ಇಂದೋಃ=ಬ್ರಹ್ಮಾತ್ಮಭಾವದಿಂದ ಆನಂದಿಸುವ ಮತ್ತು ಮೋದಿಸುವ ತೇಜಸ್ಸು ಸರ್ವನಿಯಾಮಕವಾಗಿತ್ತು. ಏತಾ ಉ ವೈ ಮಂಡಲಾಃ ಮಂಡಯಂತಿ=ಅಹಂಬ್ರಹ್ಮಾಸ್ಮಿ ಎಂದು ಉಂಟಾಗುವ ಬ್ರಹ್ಮಾತ್ಮೈಕ್ಯದ ನಿರ್ವಿಕಲ್ಪಕವೃತ್ತಿಗಳು ಬ್ರಹ್ಮನಲ್ಲಿ ಲಯ ಹೊಂದುವುವು. ಸೃಷ್ಟಿಪೂರ್ವದಲ್ಲಿ ಅದ್ವಿತೀಯವಾಗಿದ್ದ ಪರಮಾತ್ಮನು ಸೃಷ್ಟಿಕಾಲ ದಲ್ಲಿ ಉಂಟಾದ ದ್ವಿತೀಯ ವಸ್ತುಗಳನ್ನು ತನ್ನಲ್ಲಿಯೇ ಐಕ್ಯಮಾಡಿಕೊಂಡು ಅದ್ವೈತ ರೂಪದಲ್ಲಿಯೇ ಇರುವನಾದ್ದರಿಂದ ಅದ್ವೈತವು ಸರ್ವಕಾಲದಲ್ಲಿಯೂ ಇರುವುದೆಂದು ಪರಮಾರ್ಥವು. ॥ ೪ ॥

ಯಾಸ್ತಿಸ್ರೋ ರೇಖಾಃ ಸದನಾನಿ ಭೂಸ್ತ್ರೀಸ್ತ್ರಿವಿಷ್ಟಪಾಸ್ತ್ರಿಗುಣಾಸ್ತ್ರಿಪ್ರಕಾರಾಃ । ಏತತ್ತ್ರಯಂ ಪೂರಕಂ ಪೂರಕಾಣಾಂ ಮಂತ್ರಪ್ರತತೇ ಮದನೋ ಮದನ್ಯಾ ॥ ೫ ॥

ಮದಂತಿಕಾ ಮಾನಿನೀ ಮಂಗಲಾ ಚ ಸುಭಗಾ ಚ ಸಾ ಸುಂದರೀ ಸಿದ್ಧಿಮತ್ತಾ । ಲಜ್ಜಾ ಮತಿಸ್ತುಷ್ಟಿರಿಷ್ಟಾ ಚ ಪುಷ್ಟಾ ಲಕ್ಷ್ಮೀರುಮಾ ಲಲಿತಾ ಲಾಲಪಂತೀ ॥ ೬ ॥

ಇಮಾಂ ವಿಜ್ಞಾಯ ಸುಧಯಾ ಮದನ್ತೀ ಪರಿಸ್ಸೃತಾ ತರ್ಪಯನ್ತಃ ಸ್ವಪೀಠಮ್ । ನಾಕಸ್ಯ ಪೃಷ್ಠೇ ಮಹತೋ ವಸನ್ತಿ ಪರಂ ಧಾಮ ತ್ರೈಪುರಂ ಚಾವಿಶನ್ತಿ ॥ ೭ ॥

ಯಾಃ ತಿಸ್ರೋರೇಖಾಃ=ಜಡವಾದ ಜ್ಞಾನ, ಕ್ರಿಯಾ, ಇಚ್ಛಾ ಎಂಬ ಮೂರು ಶಕ್ತಿಗಳೂ, ಸದನಾನಿ=ಜಾಗ್ರದಾದಿ ತುರೀಯಾಂತ ಸ್ಥಾನಗಳಾದ ಕಣ್ಣು, ಕಂಠ, ಹೃದಯ, ಸಹಸ್ರಾರ ಚಕ್ರಗಳೂ, ಭೂಸ್ತ್ರೀಃ ತ್ರಿವಿಷ್ಟಪಾಃ=ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳೂ, ತ್ರಿಪ್ರಕಾರಾಃ ತ್ರಿಗುಣಾಶ್ಚ = ಸತ್ವತಮಃ ರಜಸ್ತಮಃ ತಮಸ್ತಮಃ ಎಂಬ ರೀತಿ ಮೂರು ಪ್ರಕಾರಗಳಿಂದ ಕೂಡಿದ ಮೂರು ಗುಣಗಳೂ, ಏತತ್ತ್ರಯಂ ಪೂರಕಾಣಾಂಪೂರಕಂ=ಈ ರೀತಿ ತ್ರಿರೇಖೆ-ತ್ರಿವಿಷ್ಟಪ-ತ್ರಿಗುಣಗಳೆಂಬ ಅಭಿಧಾನವುಳ್ಳ ಕಾಮೇಶ್ವರೀ ಮುಂತಾದ ಮೂರು ಶಕ್ತಿಗಳು ಬ್ರಾಹ್ಮೀ ಮುಂತಾದ ಚಕ್ರಾವರಣದೇವತೆಗಳಿಗೂ ಪ್ರಧಾನವಾದದ್ದು. ಮಂತ್ರ ಪ್ರತತೇ=ಅನೇಕ ಮಂತ್ರಗಳಿಂದ ವಿಸ್ತರಿಸಲ್ಪಟ್ಟಿರುವ ಶ್ರೀ ಚಕ್ರದಲ್ಲಿ, ಮದನ್ಯಾಸಹ ಮದನಃ=ಕಾಮಿನಿಯಾಗಿ ಮಧ್ಯ ತ್ರಿಕೋಣರೂಪದಿಂದಿರುವ ಚಿಚ್ಛಕ್ತಿಯೊಡನೆ ಬಿಂದುರೂಪಿಯಾದ ಕಾಮೇಶ್ವರನು ವಿಹರಿಸುತ್ತಾನೆ. ಕಾಮೇಶ್ವರೀ ಮುಂತಾದ ಶಕ್ತಿಪ್ರಧಾನವೂ ಆದಿವಿದ್ಯಾದಿ ರೂಪವೂ ಆದ ಶ್ರೀ ಚಕ್ರದಲ್ಲಿ ಬಿಂದು ರೂಪನಾದ ಕಾಮೇಶ್ವರನು ತ್ರಿಕೋಣರೂಪವಾದ ಶಕ್ತಿಯೊಡನೆ ವಿಹರಿಸುತ್ತಿದ್ದಾನೆಂದು ಕಾಮೇಶ್ವರ ಸ್ವರೂಪವನ್ನು ಈ ಮಂತ್ರವು ವಿವರಿಸಿದೆ. || ೫ ||

ಪ್ರಧಾನಶಕ್ತಿಯ ಹದಿನೈದು ನಿತ್ಯಾಶಕ್ತಿ ಸ್ವರೂಪಗಳನ್ನು ಹೊಂದಿದ ಆವರಣ ದೇವತೆಗಳು ಕ್ರಮವಾಗಿ ಮದಂತಿಕಾ, ಮಾನಿನೀ, ಮಂಗಳಾ, ಸುಭಗಾ, ಸುಂದರೀ, ಸಿದ್ಧಿಮತ್ತಾ, ಲಜ್ಜಾ, ಮತಿ, ತುಷ್ಟಿ, ಇಷ್ಟಾ, ಪುಷ್ಟಾ, ಲಕ್ಷ್ಮೀ, ಉಮಾ, ಲಲಿತಾ, ಲಾಲಪಂತೀ ಎಂಬ ಹೆಸರಿನಿಂದ ಪ್ರಸಿದ್ಧಗಳಾಗಿವೆ. || ೬ ||

ಚಿತ್ ಶಕ್ತಿಯು ಮೇಲೆ ಹೇಳಿದ ಪರಿವಾರದೇವತೆಗಳಿಂದ ಸೇವ್ಯಳಾಗಿ ಸ್ವ ಸ್ವರೂಪಾನುಸಂಧಾನದಿಂದ ಸಕಲದ್ವೈತ ಪ್ರಪಂಚವನ್ನೂ ಮರೆತು "ಅಹಮೇವೇದಂ ಸರ್ವಂ" ಕಣ್ಣಿಗೆ ಕಾಣಿಸುವ ವಸ್ತುವೆಲ್ಲವೂ ನಾನೇ ಎಂಬ ಜ್ಞಾನಾಮೃತದಿಂದ ಶಿವನ ಕೂಡ ಆನಂದದಲ್ಲಿ ಮುಳುಗಿದ್ದಾಳೆ. ಇಂತಹ ದೇವಿಯನ್ನು ಅದ್ವಿತೀಯಚಿನ್ಮಾತ್ರ ರೂಪಳನ್ನಾಗಿ ತಿಳಿದ ಜ್ಞಾನಿವರ್ಯರೂ ಮತ್ತು ಉತ್ತಮಾಧಿಕಾರವನ್ನು ಹೊಂದದೇ ಕಾಮನಾತ್ಯಾಗ ಪೂರ್ವಕವಾಗಿ ದೇವಿಯ ಆಧಾರವಾದ ಶ್ರೀ ಚಕ್ರವನ್ನು ಹಾಲು ಮುಂತಾದ ವಿಧಿ ವಿಹಿತವಾದ ಸಾಮಗ್ರಿಯಿಂದ ತೃಪ್ತಿಪಡಿಸುತ್ತಾ ಪೂಜಿಸುತ್ತಿದ್ದು ದೇಹಾವಸಾನದಲ್ಲಿ ಮಹತ್ತಮವಾದ ಸ್ವರ್ಗಲೋಕಕ್ಕಿಂತಲೂ ಊರ್ಧ್ವಭಾಗದಲ್ಲಿರುವ ಶ್ರೀ ಪುರದಲ್ಲಿ ಜ್ಞಾನಾಭ್ಯಾಸಿಗಳಾದ ಭಕ್ತರೂ ತ್ರಿಪುರಾದೇವಿಯ ಧಾಮವನ್ನು ಅಥವಾ ಕೃತ ಕೃತ್ಯತೆಯನ್ನುಂಟುಮಾಡುವ ಪರಮಪದವನ್ನು ಸೇರುತ್ತಾರೆ. || ೭ ||

ಕಾಮೋ ಯೋನಿಃ ಕಾಮಕಲಾ ವಜ್ರಪಾಣಿರ್ಗುಹಾಹಸಾ ಮಾತರಿಶ್ವಾಭ್ರಮಿನ್ದ್ರಃ । ಪುನರ್ಗುಹಾ ಸಕಲಾ ಮಾಯಯಾ ಚ ಪುರ್‍ಚ್ಯೈಷಾ ವಿಶ್ವಮಾತಾಽಽದಿವಿದ್ಯಾ ॥ ೮ ॥

ಷಷ್ಠಂ ಸಪ್ತಮಮಥ ವಹ್ನಿಸಾರಥಿಮಸ್ಯಾ ಮೂಲತ್ರಿಕಮಾದೇಯನ್ತಃ । ಕಥ್ಯಂ ಕವಿಂ ಕಲ್ಪಕಂ ಕಾಮಮೀಶಂ ತುಷ್ಟುವಾಂಸೋ ಅಮೃತತ್ವಂ ಭಜನ್ತೇ ॥ ೯ ॥

ಪುರಂ ಹನ್ತ್ರೀಮುಖಂ ವಿಶ್ವಮಾತೂ ರವೇರೇಖಾ ಸ್ವರಮಧ್ಯಂ ತದೇಷಾ । ಬೃಹತ್ತಿಥಿರ್ದಶಪಂಚಾದಿನಿತ್ಯಾ ಸಷೋಡಶಿಕಂ ಪುರಮಧ್ಯಂ ಬಿಭರ್ತಿ ॥ ೧೦ ॥

ಈ ಉಪನಿಷನ್ಮಂತ್ರವು ಆದಿಮೂಲ ವಿದ್ಯೆಯ ಮಂತ್ರವರ್ಣಗಳನ್ನು ಸಂಕೇತ ಪದಗಳಿಂದ ಬೋಧಿಸಿ ವಿಶಿಷ್ಟ ಮಂತ್ರಸ್ವರೂಪವನ್ನು ಸೂಚಿಸುತ್ತಿದೆ. ಕಾಮಃ= ಕಕಾರವು, ಯೋನಿಃ=ಏಕಾರವು, ಕಾಮಕಲಾ=ಈಕಾರವು, ವಜ್ರಪಾಣಿಃ=ಲಕಾರವು ಗುಹಾ=ಹ್ರೀಂಕಾರವು, ಹಸಾಃ=ಹಕಾರ-ಸಕಾರಗಳು, ಮಾತರಿಶ್ವಾ=ಕಕಾರವು, ಅಭ್ರಂ=ಹಕಾರವು, ಇಂದ್ರಃ=ಲಕಾರವು, ಪುನಃ, ಗುಹಾ=ಹ್ರೀಂಕಾರವು, ಸಕಲಾಃ= ಸಕಾರ-ಕಕಾರ-ಲಕಾರಗಳು, ಮಾಯಾ=ಹ್ರೀಂಕಾರವು, ಈ ರೀತಿಯಾಗಿ ಸಂಕೇತ ಪದಗಳಿಂದ ಸೂಚಿಸಲ್ಪಟ್ಟ ವರ್ಣಗಳನ್ನು ಇದೇ ಕ್ರಮದಲ್ಲಿ ಸಮಷ್ಟಿಯಾಗಿ ಸೇರಿಸಿ ಉಂಟಾಗುವ "ಕ ಏ ಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ" ಎಂಬ ಸ್ವರೂಪವು ವಿಶಿಷ್ಟ ರೂಪವೂ ಪುರಾತನವೂ ಆದ ವಿಶ್ವಮಾತೆಯ ಆದಿ ಮೂಲಮಂತ್ರವಾಗಿ ಪರಿಣಾಮವನ್ನು ಹೊಂದಿರುತ್ತೆ. ದೇವ್ಯುಪನಿಷತ್ತಿನಲ್ಲೂ "ಕಾಮೋಯೋನಿಃ" ಎಂಬ ವಾಕ್ಯದಿಂದಲೇ ಮೂಲಮಂತ್ರವನ್ನು ಉದ್ಧಾರಮಾಡಿದೆ. ‖ ೮ ‖

ಮೇಲೆ ಹೇಳಿದ ಮೂಲಮಂತ್ರದಲ್ಲಿ ಅಂತರ್ಗತವಾದ ಸಾರವಾದ ಅಂಶವನ್ನೂ ಆದರಿಂದ ಧ್ಯೇಯವಾದ ವಸ್ತುವನ್ನೂ ಅದರ ಜ್ಞಾನದ ಮಹಾಫಲವನ್ನೂ ಈ ವಾಕ್ಯವು ಪ್ರತಿಪಾದಿಸುತ್ತಿದೆ. ವಿಶಿಷ್ಟಮಂತ್ರದಲ್ಲಿ ಆರನೆಯದಾದ ಹಕಾರವು ಶಿವ ಬೀಜವು. ಏಳನೆಯದಾದ ಸಕಾರವು ಶಕ್ತಿಬೀಜವು, ಎಂಟನೆಯ ಕಕಾರವು ಕಾಮೇಶ ಬೀಜವು. ಶಕ್ತಿಬೀಜವು ಶಿವಕಾಮೇಶ ಬೀಜವರ್ಣಗಳಿಂದ ಸಂಪುಟಿತವಾಗಿರುವುದು ಸಾಕ್ಷಾತ್ತಾಗಿ ಶಕ್ತಿಶಿವಸ್ವರೂಪಗಳನ್ನು ಬೋಧಿಸುವ "ಹಸಕ" ಎಂಬ ಮೂರು ಇದೇ ಕ್ರಮಬದ್ಧರೀತಿಯಿಂದ ಜಪಿಸುತ್ತಾ ದ್ವೈತಪ್ರಪಂಚದ ನಿರಸನ ಮಾರ್ಗದಿಂದ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟವನೂ, ಕಾಲತ್ರಯದಲ್ಲಿಯೂ ಚೇತನಸ್ವರೂಪನೂ ಜೀವೇಶಾದಿ ರೂಪದಿಂದ ಸಕಲಪ್ರಪಂಚಕ್ಕೂ ವೇದ ವೇದಾಂತಾದಿ ಶಾಸ್ತ್ರಕ್ಕೂ ಕೂಡ ಕಲ್ಪಕನೂ ಆದ ಕಾಮೇಶನನ್ನು ಸ್ತುತಿಸುವಂತಹ ಕೇವಲ ವಿರಕ್ತರಾದ ಉಪಾಸಕರು ವಿದೇಹಕೈವಲ್ಯರೂಪವಾದ ಮುಕ್ತಿಯನ್ನು ಹೊಂದುತ್ತಾರೆ. ‖ ೯ ‖

ವಿಶ್ವಮಾತೆಯು ನಿರಾಕಾರರೂಪದಿಂದ ಮಧ್ಯಮಾಧಮಾಧಿಕಾರಿಗಳಿಗೆ ಗೋಚರಳೂ ಉಪಾಸ್ಯಳೂ ಆಗಲಾರದ ಕಾರಣದಿಂದ ಅಂತಹ ಭಕ್ತರ ಅನುಗ್ರಹಕ್ಕೋಸ್ಕರ ಕಾಲ್ಪನಿಕವಾದ ವಿವಿಧ ರೂಪಗಳನ್ನು ಧರಿಸಿರುವಳು. ಅಂತಹ ಕೆಲವು ರೂಪಗಳು ಈ ವಾಕ್ಯದಲ್ಲಿ ಹೇಳಲ್ಪಟ್ಟಿವೆ. ಏಕಾದಶದ್ವಾರಗಳಿಂದ ಕೂಡಿದ ಶರೀರ ರೂಪವನ್ನು "ಹಸಕ" ಎಂಬ ಮೂಲಮಂತ್ರದಲ್ಲಿ ಅಡಕವಾಗಿರುವ ಸಾರಭೂತವಾದ ಮೂರು ವರ್ಣಗಳ ರೂಪವನ್ನೂ, ಆದಿತ್ಯ ಮಂಡಲವನ್ನೂ ಈಂ-ಅಥವಾ ಓಂ ಎಂಬ ಸ್ವರ ರೂಪವನ್ನೂ ನಿಮಿಷಮೊದಲಾಗಿ ಸ್ಥೂಲಕಾಲದ ಪರ್ಯನ್ತವಿರುವ ಮಹಾ ಕಾಲ ರೂಪವನ್ನೂ, ಹದಿನೈದು ತಿಥಿಗಳ ಅಭಿಮಾನಿದೇವತಾ ರೂಪವನ್ನು ಹದಿನಾರು ಅವ

ಯದ್ವಾ ಮಣ್ಡಲಾದ್ವಾ ಸ್ತನಬಿನ್ದುಮೇಕಂ ಮುಖಂ ಚಾಧಸ್ತ್ರೀಣಿ ಗುಹಾ ಸದನಾನಿ । ಕಾಮೀ ಕಲಾಂ ಕಾಮರೂಪಾಂ ಚಿಕಿತ್ವಾ ನರೋ ಜಾಯತೇ ಕಾಮರೂಪಶ್ಚ ಕಾಮ್ಯಃ ॥ ೧೧ ॥

ಪರಿಸ್ರುತಂ ಝುಷಮಾಜಂ ಪಲಂ ಚ ಭಕ್ತಾನಿ ಯೋನೀಃ ಸುಪರಿಷ್ಕೃತಾಶ್ಚ ॥ ನಿವೇದಯನ್ ದೇವತಾಯೈ ಮಹತ್ಯೈ ಸ್ವಾತ್ಮೀಕೃತೇ ಸುಕೃತೇ ಸಿದ್ಧಿಮೇತಿ ॥ ೧೨ ॥

ಯವಗಳನ್ನೊಳಗೊಂಡ ಪುರಮಧ್ಯ ರೂಪವನ್ನೂ ಧರಿಸಿರುವಳು. ಈ ಕಾಲ್ಪನಿಕವಾದ ರೂಪಗಳಲ್ಲಿ ಉಪಾಸಕನು ತನ್ನ ಸಂಸ್ಕಾರವಶದಿಂದ ಇಷ್ಟಪಟ್ಟ ರೂಪವೆಂಬ ಉಪಾಧಿಯಲ್ಲಿ ವಿಶ್ವಮಾತೆಯನ್ನು ನಿಷ್ಕಾಮಚಿತ್ತದಿಂದ ಸೇವಿಸಿ ಶುದ್ಧಚಿತ್ತನಾಗಿ ತತ್ವಜ್ಞಾನ ಪ್ರಾಪ್ತಿಯಿಂದ ಕೃತ ಕೃತ್ಯನಾಗುವನು. ॥ ೧೦ ॥

ಮಂದಾಧಿಕಾರಿಗಳೂ, ಫಲಾಭಿಸಂಧಿ ತ್ಯಾಗದಲ್ಲಿ ಅಶಕ್ತರೂ ಆದ ಭಕ್ತರು ಸೇವಿಸಬಹುದಾದ ಮೂರ್ತಿಯನ್ನು ಈ ಮಂತ್ರವಾಕ್ಯವು ಹೇಳುತ್ತದೆ. ಸೂರ್ಯ ಚಂದ್ರಾದಿ ತೇಜೋಮಂಡಲವೆಂಬ ಉತ್ಕೃಷ್ಟವಾದ ಉಪಾಧಿಯಲ್ಲಿ ಆವಿರ್ಭವಿಸಿದ, ಗುಂಡಗಿರುವ ಸ್ತನಯುಗ್ಮವನ್ನೂ ಸುಂದರವಾದ ಮುಖವನ್ನೂ ಇದರಂತೆ ರಮಣೀಯ ಗಳಾದ ಸರ್ವಾವಯವಗಳನ್ನೂ ಸ್ಥೂಲ - ಸೂಕ್ಷ್ಮ - ಕಾರಣಗಳೆಂಬ ಮೂರು ಶರೀರ ಗಳನ್ನೂ ಧರಿಸಿರುವ, ಕಾಮೇಶನ ಕಾಮರೂಪವಾದ ಕಲೆಯನ್ನು ಧ್ಯಾನಮಾಡಿ ನಾನಾವಿಧದ ಕಾಮನೆಗಳಿಗೆ ವಶನಾದ ಭಕ್ತನು ತನ್ನ ಕಾಮನಾನುಸಾರವಾಗಿ ಇಷ್ಟ ಫಲವನ್ನು ಅನುಭವಿಸುತ್ತಾನೆ. ಆದರೆ ಈ ವಿಧದ ಸಕಾಮೋಪಾಸನೆಯು ಫಲಪ್ರದ ವಾಗಿದ್ದರೂ ಜನ್ಮಬಂಧವು ದೃಢವಾಗುತ್ತ ಬರುವುದರಿಂದ ಮುಮುಕ್ಷುಗಳು ಈ ಜಾಲಕ್ಕೆ ಬೀಳಬಾರದು. ಮೋಕ್ಷಮಿಚ್ಛಸಿ ಚೇದ್ಬ್ರಹ್ಮನ್ ಕಾಮನೋಪಾಸನಂ ತ್ಯಜ। ನಿಷ್ಕಾಮಾಂಚಿತ ಧೀವೃತ್ತ್ಯಾ ಮಾಮುಪಾಸ್ಯ ವಿಮೋಕ್ಷ್ಯಸೇ॥ ಎಂಬ ಸ್ಮೃತಿವಚನದಂತೆ ನಿಷ್ಕಾಮೋಪಾಸನೆಯೇ ಮುಮುಕ್ಷು ಜನಗಳ ವರ್ಗಕ್ಕೆ ಕರ್ತವ್ಯವು. ॥ ೧೧ ॥

ತ್ರೈವರ್ಣಿಕರಲ್ಲದವರೂ ಕೂಡ ಸ್ವಚ್ಛಂದಾಚಾರದಲ್ಲಿ ನಿರತರಾದರೂ ಒಂದು ಬಗೆಯಿಂದ ದೇವ್ಯುಪಾಸನದಲ್ಲಿ ಮಾರ್ಗವನ್ನು ಹೊಂದಿದವರಾಗಿರುತ್ತಾರೆ. ಆ ಮಾರ್ಗವು ಈ ವಿಧವಾದದ್ದು:- ಉಚಿತ ಸಂಸ್ಕರಣಗಳನ್ನುಮಾಡಿ ಸಿದ್ಧ ಪಡಿಸಿದ ಮತ್ಸ್ಯಗಳನ್ನೂ ಮೇಕೆಯ ಮಾಂಸವನ್ನೂ ಮತ್ತು ತನ್ನ ಜೀವನ ನಿರ್ವಾಹಕ್ಕೆ ಮುಖ್ಯ ಕಾರಣವಾದ ಉತ್ತಮರೀತಿಯಿಂದ ಏರ್ಪಡಿಸಿದ ಇತರವಾದ ತಾನು ಭುಂಜಿಸುವ ಅನ್ನಗಳನ್ನೂ ಮೊದಲು ಮಹಾದೇವಿಗೆ ಅರ್ಪಿತವಾಗಲೆಂದು ಧ್ಯಾನರೂಪದಿಂದ ಅರ್ಪಿಸಿ ಅನಂತರದಲ್ಲಿ ಆತ್ಮೋಪಭೋಗಕ್ಕೆ ಉಪಯೋಗಿಸುವ ಪುರುಷನೂ ಸುಕೃತ ಲಭ್ಯವಾದ ಉತ್ತಮ ಲೋಕದ ಸಿದ್ಧಿಯನ್ನು ಹೊಂದುವನು. ಈ ರೀತಿಯಾಗಿ ಸಮಸ್ತರಿಗೂ ತಮ್ಮ ತಮ್ಮ ವರ್ಣ ಧರ್ಮಕ್ಕೆ ಅನುಸಾರವಾಗಿ ಚಿತ್ತಶುದ್ಧಿಗೋಸ್ಕರ ದೇವೀ ಉಪಾಸನೆಯನ್ನು ಮಾಡಲು ಸರ್ವರೂ ಅವಕಾಶವನ್ನು ಹೊಂದಿರುವರು.

॥ ೧೨ ॥

ಸೃಣ್ಯೇವ ಸಿತಯಾ ವಿಶ್ವಚರ್ಷಣಿಃ ಪಾಶೇನೈವ ಪ್ರತಿಬಧ್ನಾತ್ಯಭೀಕಾನ್ ।
ಇಷುಭಿಃ ಪಂಚಭಿರ್ಧನುಷಾ ಚ ವಿದ್ಧತ್ಯಾದಿಶಕ್ತಿರರುಣಾ ವಿಶ್ವಜನ್ಯಾ ॥೧೩॥

ಭಗಃ ಶಕ್ತಿರ್ಭಗವಾನ್ ಕಾಮ ಈಶ ಉಭಾ ದಾತಾರಾವಿಹ ಸೌಭಗಾನಾಮ್ ॥ ಸಮಪ್ರಧಾನೌ ಸಮಸತ್ವೌ ಸಮೋಜೌ । ತಯೋಃ ಶಕ್ತಿರಜರಾ ವಿಶ್ವಯೋನಿಃ ॥ ೧೪ ॥

ಪರಿಸೃತಾ ಹವಿಷಾ ಭಾವಿತೇನ ಪ್ರಸಂಕೋಚೇ ಗಲಿತೇ ವೈ ಮನಸ್ಕಃ ।
ಶರ್ವಃ ಸರ್ವಸ್ಯ ಜಗತೋ ವಿಧಾತಾ ಧರ್ತಾ ಹರ್ತಾ ವಿಶ್ವರೂಪತ್ವಮೇತಿ ॥ ೧೫ ॥

ಸಿತಯಾ, ವಿಶ್ವಜನ್ಯಾ, ಅರುಣಾ, ಆದಿಶಕ್ತಿಃ=ಸರಸ್ವತೀಮಹಾಲಕ್ಷ್ಮಿಯರಿಂದ ಸಹಿತಳಾದ ಕೆಂಪುಬಣ್ಣದಿಂದ ರಾರಾಜಿಸುವ ಗೌರೀ ರೂಪಳಾದ ಆದಿಶಕ್ತಿಯು ತಾನೇ ಸಕಲ ಪ್ರಪಂಚವನ್ನೂ ನಿರ್ವಿಶೇಷ ಚಿನ್ಮಾತ್ರದಲ್ಲಿ ಅಡಗಿಸಿ ಪರಬ್ರಹ್ಮಮಾತ್ರಾದ್ವೈತ ವನ್ನು ಪ್ರಕಾಶಪಡಿಸುವ ಬ್ರಹ್ಮವಿದ್ಯಾರೂಪಿಣಿಯಾಗಿ ಸಕಾಮೋಪಸನೆಯ ಮಾರ್ಗ ದಲ್ಲಿ ಪ್ರವೃತ್ತರಾದವರನ್ನು ತತ್ವಜ್ಞಾನಕ್ಕೆ ವಿರೋಧಿಯಾದ ಅಜ್ಞಾನದ ವೃತ್ತಿಗಳೆಂಬ ಪಾಶದಿಂದ ಬಂಧಿಸಿ ಮತ್ತು ವಿವಿಧವಾದ ಕಾಮಕ್ರೋಧಾದಿ ರೂಪಗಳಾದ ಪಂಚಬಾಣ ಬಿಲ್ಲು ಮುಂತಾದ ಸಮಸ್ತ ಆಯುಧಗಳಿಂದಲೂ ಪ್ರಹರಿಸಿ ನಾಶಮಾಡುವಳು. ಈ ಕಾಮಪಾಶಬಂಧಕ್ಕೆ ಸಿಕ್ಕಿದ ಜನರು ಮತ್ತೆ ಮತ್ತೆ ಅಧೋಗತಿಯನ್ನೇ ಹೊಂದುವುದ ರಿಂದ ಪ್ರತ್ಯಗಾತ್ಮತತ್ವಕ್ಕೆ ಅಭಿಮುಖರಾಗಿ ನಿಶ್ರೇಯಸ ಸಾಧನೋಪಾಯವನ್ನು ಸರ್ವ ವಿಧದಿಂದಲೂ ಕಳೆದುಕೊಳ್ಳುವರು. ॥ ೧೩ ॥

ಸಕಾಮ-ನಿಷ್ಕಾಮರೆಂಬ ವಿಭಿನ್ನಮಾರ್ಗದ ಉಪಾಸಕರು ತಮ್ಮ ಅಭ್ಯಾಸಕ್ಕೆ ಅನುರೂಪವಾಗಿ ಪ್ರವೃತ್ತಿ ಅಥವಾ ನಿವೃತ್ತಿ ಮಾರ್ಗಗಳಲ್ಲಿ ಪ್ರವರ್ತಿಸುವುದಕ್ಕೆ ಕಾರಣವಾದ ಚಿತ್‌ಶಕ್ತಿ ಅಥವಾ ತ್ರಿಪುರಾದೇವಿಯೂ, ಷಡ್ಗುಣೈಶ್ವರ್ಯಗಳಿಂದ ಕೂಡಿದ ಕಾಮೇಶನೂ ಇಬ್ಬರೂ ಕೂಡ ಚೈತನ್ಯವೆಂಬ ಸಾಮಾನ್ಯ ರೂಪದಿಂದ ಪ್ರಾಧಾನ್ಯ, ಶಕ್ತಿ, ಬಲಗಳೆಂಬ ಗುಣಗಳಲ್ಲಿ ತುಲ್ಯಾಕಾರರಾಗಿ ಒಂದೇ ಜನ್ಮದಲ್ಲಿ ಬ್ರಹ್ಮಾತ್ಮಭಾವವನ್ನು ಹೊಂದುವ ಯೋಗ್ಯತೆಯುಳ್ಳ ಮಹಾಭಾಗರಿಗೆ ತತ್ವಜ್ಞಾನ ವನ್ನು ಕೊಟ್ಟು ಪರಬ್ರಹ್ಮಪ್ರಾಪಕರಾಗುವರು. ಈ ವಾಕ್ಯದಲ್ಲಿ "ತಯೋಃಶಕ್ತಿಃ" ಎಂಬ ಕಡೆಯಭಾಗವನ್ನು ಮುಂದಿನ ಮಂತ್ರ ವ್ಯಾಖ್ಯಾನದಲ್ಲಿ ಸೇರಿಸಿರುತ್ತದೆ. ॥ ೧೪ ॥

ಹೀಗೆ ತ್ರಿಪುರಾದೇವೀ - ಕಾಮೇಶರೀರ್ವರಲ್ಲಿ ಜರಾದಿವಿಕಾರಗಳಿಲ್ಲದ ವಿಶ್ವ ಮಾತೆಯಾದ ಆದಿಶಕ್ತಿಯು ಉಪಾಸಕನ ಅನುಸಂಧಾನಾತ್ಮಕವಾದ (ಭಾವನಾರೂಪ ವಾದ) ತತ್ವಜ್ಞಾನವೆಂಬ ಹವಿಸ್ಸಿನಿಂದ ಸೇವಿಸಲ್ಪಟ್ಟು ಪರಮದಯಾಮಯವಾದ ಮೂರ್ತಿಯುಳ್ಳವಳಂತೆ ಆಗಿ ಸ್ವಾಭಾವಿಕವಾಗಿ ಉಪಾಸಕನಲ್ಲಿ ಅದುವರೆಗೂ ಅಂಟಿ ಕೊಂಡಿದ್ದ ಆವರಣ, ವಿಕ್ಷೇಪಗಳೆಂಬ ಅಜ್ಞಾನ ಕಾರ್ಯಗಳನ್ನೂ ತತ್ಪ್ರಯುಕ್ತವಾದ ವಿವಿಧ ಪರಿಚ್ಛೇದ ಅಥವಾ ಅಲ್ಪತ್ವವನ್ನೂ ದೂರ ತೊಲಗಿಸಿ ವಿಶ್ವರೂಪತ್ವವನ್ನು ಅನುಗ್ರಹಿಸುವಳು. ಹೀಗೆ ಸರ್ವಾತ್ಮಭಾವವನ್ನು ಹೊಂದಿರುವುದರಿಂದ ಉಪಾಸಕನು ತಾನೇ ಸರ್ವಜಗತ್ತಿನ ಸೃಷ್ಟಿಸ್ಥಿತಿ ಸಂಹಾರ ಕಾರ್ಯಗಳನ್ನು ಮಾಡುವ ಬ್ರಹ್ಮವಿಷ್ಣು ರುದ್ರರೆಂಬ ತ್ರಿಮೂರ್ತಿ ರೂಪವನ್ನೂ ಸಕಲ ಪ್ರಪಂಚದ ನಿಷೇಧಕ್ಕೆ ಅವಧಿಯೂ ಸಾಕ್ಷಿಯೂ ಆದ ಪರಬ್ರಹ್ಮ ರೂಪವನ್ನೂ ಹೊಂದುವನು. ಹೀಗೆ ಕಾಮೇಶ-ಕಾಮೇ ಶ್ವರಿಯರಲ್ಲಿ ಅನುಗತವಾದ ಚಿತ್ ಶಕ್ತಿಯನ್ನು ಸಮಪ್ರಧಾನ ದೃಷ್ಟಿಯನ್ನಿಟ್ಟು ನಿಷ್ಕಾಮ ಚಿತ್ತದಿಂದ ಸೇವಿಸಿದ ಉಪಾಸಕನು ಪುನರ್ಜನ್ಮಪ್ರಾಪಕವಾದ ಕಾಮ್ಯ ಮಾರ್ಗವನ್ನು ದೂರಬಿಟ್ಟಿರುವುದರಿಂದ ಕೃತಕೃತ್ಯನಾಗುವನು. ॥ ೧೫ ॥

ಇಯಂ ಮಹೋಪನಿಷತ್ತ್ರೈಪುರ್ಯಾ ಯಾಮಕ್ಷಯಂ ಪರಮಾ ಗೀರ್ಭಿರೀಟ್ಟೇ । ಏಷರ್ಗ್ಯಜುಃ ಪರಮೇತಚ್ಚ ಸಾಮಾ ಯಮಥರ್ವೇಯಮನ್ಯಾ ಚ ವಿದ್ಯಾ ॥ ೧೬ ॥

ಓಂ ಹ್ರೀಮೋಂಹ್ರೀ ಮಿತ್ಯುಪನಿಷತ್ ॥ ೧೭ ॥



ಋಗ್ವೇದ–ಯಜುರ್ವೇದ–ಸಾಮವೇದ ಅಥರ್ವವೇದಗಳೆಂದು ಕ್ರಮವಾಗಿ ಪ್ರಸಿದ್ಧವಾಗಿರುವ ವೇದಗಳೂ ಮತ್ತು ಚತುಷ್ಷಷ್ಟಿ ಕಲಾತ್ಮಕವಾದ ವಿದ್ಯೆಯೂ ಅಮೃತಸ್ವರೂಪವಾದ ಯಾವ ಚಿತ್ ಶಕ್ತಿಯನ್ನು ಪ್ರಣವಗಳಿಂದಲೂ ಮಹಾ ವಾಕ್ಯಗಳಿಂದಲೂ ಸ್ತುತಿಸುವುವೋ ಅಂತಹ ಚಿಚ್ಛಕ್ತಿಯು ತ್ರಿಪುರೋಪನಿಷತ್ತೆಂಬ ಈ ಗ್ರಂಥದಲ್ಲಿ ಪ್ರತಿಪಾದ್ಯಳಾದ್ದರಿಂದ ಈ ಗ್ರಂಥವೂ ಚಿಚ್ಛಕ್ತಿಯೆಂಬ ಬ್ರಹ್ಮಾತ್ಮ ವಸ್ತುವಿನ ಜ್ಞಾನವನ್ನು ಹುಟ್ಟಿಸುವುದರ ಮೂಲಕ ಬ್ರಹ್ಮೈಕ್ಯವನ್ನು ಹೊಂದಿ ಉತ್ಕೃಷ್ಟವೆನಿಸಿಕೊಂಡಿದ್ದಾಗಿದೆ. ಈ ತ್ರೈಪುರೀ ಉಪನಿಷತ್ತು ಬ್ರಹ್ಮ ಸ್ವರೂಪವೇ ಎಂದು ಅಭಿಪ್ರಾಯವು. ॥ ೧೬ ॥

ದೇವಿಯ ಸ್ವರೂಪವನ್ನು ಆಯಾಯ ವಾಚಕಶಬ್ದಗಳಿಂದ ಈ ಕಡೆಯ ವಾಕ್ಯವು ಸ್ಪಷ್ಟಪಡಿಸುತ್ತದೆ. ಓಂಕಾರವು ಚೈತನ್ಯ ಅಂಶವನ್ನೂ, ಹ್ರೀಂ ಕಾರವು ಶಕ್ತಿಅಂಶವನ್ನೂ ಬೋಧಿಸುವುದಾದ್ದರಿಂದ ಎರಡು ವರ್ಣಗಳಿಂದ ಪ್ರತಿಪಾದ್ಯವಾದ ದೇವೀಸ್ವರೂಪವು ಚಿಚ್ಛಕ್ತಿರೂಪವೆಂದೆನಿಸುವುದು. ಇಲ್ಲಿಗೆ ಪ್ರಾರಂಭಮಾಡಿದ ತ್ರಿಪುರೋಪನಿಷತ್ತು ಮುಗಿದುದು. ॥ ೧೭ ॥

ತ್ರಿಪುರೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

## ॥ ಬಹ್ವೃಚೋಪನಿಷತ್ ॥

---

ಓಂ:— ವಾಙ್ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಮ್ । ಆವಿರಾವೀರ್ಮ ಏಧಿ । ವೇದಸ್ಯ ಮ ಆಣೀಸ್ಥಃ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನ । ಅಹೋರಾತ್ರಾನ್ಸಂದ ಧಾಮ್ಯೃತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ । ತನ್ಮಾಮವತು ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಮ್ ॥

ಓಂ ಶಾಂತಿಃ ಶಾಂತಿಃ ಶಾಂತಿಃ ॥

॥ ಶ್ರೀ ॥

# ಬಹ್ವೃಚೋಪನಿಷತ್ತಿನ ಕನ್ನಡ ಅನುವಾದವು.

---

ಈ ಬಹ್ವೃಚೋಪನಿಷತ್ತು ಋಕ್‌ಶಾಖೆಗೆ ಸೇರಿದುದಾಗಿದೆ. ಋಗ್ವೇದ ಉಪನಿಷತ್ತುಗಳ ಪಠನ ಪ್ರಾರಂಭದಲ್ಲಿ ಮೇಲ್ಕಂಡ ವಾಙ್ಮೇಮನಸಿ ಎಂಬ ಶಾಂತಿ ಮಂತ್ರವನ್ನು ಪಠಿಸುವುದು ಸಂಪ್ರದಾಯವು. ಅದರಂತೆ ಇಲ್ಲಿಯೂ ಪಠಿಸಲ್ಪಟ್ಟಿದೆ. ಅದಕ್ಕೆ ಈ ರೀತಿ ಅರ್ಥವು:—ತತ್ತ್ವವನ್ನು ಪ್ರಕಾಶಿಸಲು ಹೊರಟಿರುವ ಈ ಉಪನಿಷತ್ತಿನ ಪಾಠದಲ್ಲಿ ಪ್ರಸಕ್ತವಾದ ನನ್ನ ವಾಣಿಯು ಮನಸ್ಸಿನ ಅಧೀನತೆಯನ್ನು ಹೊಂದಿದೆ. ಮನಸ್ಸು ವಾಕ್ಕಿನ ಅಧೀನತೆಯನ್ನು ಹೊಂದಿರುತ್ತೆ. ಎಂದರೆ ವಿವಕ್ಷಿತ ಅರ್ಥವನ್ನು ಬೋಧಿಸಲು ಮನಸ್ಸು ಚಿಂತಿಸಿರುವ ಅರ್ಥವನ್ನೇ ವಾಕ್ ಉಚ್ಚರಿಸುವುದು. ತತ್ತ್ವ ಪ್ರಕಾಶನಕ್ಕೆ ಹೊರಟ ವಾಕ್ ಯಾವ ಶಬ್ದವನ್ನು ಉಚ್ಚರಿಸಬಹುದೋ ಅದನ್ನೇ ಮನಸ್ಸು ಚಿಂತಿಸುವುದು. ಹೀಗೆ ವಾಙ್ಮನಸಗಳು ಅನ್ಯೋನ್ಯ ಸಹಕಾರಿಗಳಾಗಿದ್ದು ವಿದ್ಯಾರ್ಥವನ್ನು ಸ್ಥಿರಪಡಿಸಲಿ, ಮನಸ್ಸಿನಲ್ಲಿ ಏಕಾಗ್ರತೆ ಇಲ್ಲದಿದ್ದರೆ ಉನ್ಮತ್ತ ಪ್ರಲಾಪದಂತೆ ಆಡಿದ ಮಾತು ಅಸಂಗತವಾಗುವುದು. ವಾಕ್ಕಿನ ಪಾಟವವಿಲ್ಲದಿದ್ದರೆ ವಾಗಿಂದ್ರಿಯವು ವಿವಕ್ಷಿತ ಅರ್ಥವನ್ನು ಬೋಧಿಸುವ ಶಕ್ತಿಯಿಲ್ಲದ ಅಪಶಬ್ದ ಮುಂತಾದದ್ದನ್ನು ಗದ್ಗದಾದಿ ರೂಪದಿಂದ ಉಚ್ಚರಿಸಬಹುದು. ಆದ್ದರಿಂದ ಇವೆರಡರ ಪರಸ್ಪರ ಸಹಕಾರವು ಅತ್ಯಾವಶ್ಯಕವು. ಆದ್ದರಿಂದ ಇವುಗಳ ಆನುಕೂಲ್ಯವು ಮೊದಲು ಪ್ರಾರ್ಥಿಸಲ್ಪಟ್ಟಿದೆ. ಎಲೇ ಬ್ರಹ್ಮ ಚೈತನ್ಯವೇ, ಅವಿದ್ಯಾದಿ ಆವರಣವನ್ನು ತೆಗೆದು ಹಾಕಿ ನನಗೆ ಪ್ರಕಾಶವಾಗು. ಎಲೇ ವಾಙ್ಮನಸಗಳೇ, ತತ್ತ್ವ ವಿದ್ಯೆಯನ್ನು ಚಿಂತನ ಪಠನಗಳಿಂದ ನನ್ನಲ್ಲಿ ಶಾಶ್ವತವಾಗಿ ನಿಲ್ಲುವಂತೆ ಮಾಡಿರಿ. ಶ್ರೋತ್ರೇಂದ್ರಿಯದಿಂದ ಶ್ರವಣಮಾಡಿದ ಗ್ರಂಥವು ವಿಸ್ಮೃತವಾಗಿ ನನ್ನನ್ನು ದೂರ ಮಾಡದಿರಲಿ. ಈ ವಿದ್ಯೆಯ ಅಧ್ಯಯನವನ್ನು ಹಗಲು ಮತ್ತು ರಾತ್ರಿ ಸರ್ವಕಾಲದಲ್ಲಿಯೂ ಸಂತತವಾಗಿ ಮಾಡುವೆನು. ಈ ಗ್ರಂಥ ಪಾಠಾನುಸಾರವಾಗಿ ಪರಮಾರ್ಥ ವಸ್ತುವನ್ನು ವಾಗಿಂದ್ರಿಯದಿಂದ ಉಚ್ಚರಿಸುತ್ತೇನೆ. ಅದನ್ನೇ ಮನಸ್ಸಿನಿಂದಲೂ ವಿಚಾರಮಾಡುತ್ತೇನೆ. ಆ ಪರಮಾರ್ಥ ವಸ್ತುವು ತತ್ತ್ವಜ್ಞಾನವನ್ನು ಕೊಟ್ಟು ಶಿಷ್ಯನಾದ ನನ್ನನ್ನೂ ವಿದ್ಯೋಪದೇಶ ಸಾಮರ್ಥ್ಯವನ್ನು ಕೊಟ್ಟು ಆಚಾರ್ಯರನ್ನೂ ಕಾಪಾಡಲಿ, ಎಂದು ವಿದ್ಯಾಪ್ರಾರಂಭದಲ್ಲಿ ಮುಂದೆ ಒದಗಬಹುದಾದ ಸಕಲ ವಿಧವಾದ ವಿಘ್ನಗಳನ್ನು ಪರಿಹರಿಸಲು ಮಾಡುವ ಪ್ರಾರ್ಥನೆಯು. ಕಡೆಯಲ್ಲಿ ಆಧ್ಯಾತ್ಮಿಕ - ಆಧಿಭೌತಿಕ - ಆಧಿದೈವಿಕವೆಂಬ ವಿಘ್ನಗಳು ಶಮನವಾಗಲೆಂಬ ಅಭಿಪ್ರಾಯದಿಂದ ಪ್ರತ್ಯೇಕವಾಗಿ ಮೂರು ಸಲ ಶಾಂತಿಃ ಎಂದು ಪಠಿಸಲ್ಪಟ್ಟಿದೆ.

ಓಂ ದೇವೀ ಹ್ಯೇಕಾಽಗ್ರ ಆಸೀತ್ । ಸೈವ ಜಗದಣ್ಡಮಸೃಜತ । ಕಾಮಕಲೇತಿ ವಿಜ್ಞಾಯತೇ । ಶೃಙ್ಗಾರಕಲೇತಿ ವಿಜ್ಞಾಯತೇ ॥ ೧ ॥

ತಸ್ಯಾ ಏವ ಬ್ರಹ್ಮಾಽಜೀಜನತ್ । ವಿಷ್ಣುರಜೀಜನತ್ । ರುದ್ರೋಽಜೀಜನತ್ । ಸರ್ವೇ ಮರುದ್ಗಣಾ ಅಜೀಜನನ್ । ಗಂಧರ್ವಾಪ್ಸರಸಃ ಕಿನ್ನರಾ ವಾದಿತ್ರವಾದಿನಃ ಸಮಂತಾದಜೀಜನನ್ । ಭೋಗ್ಯಮಜೀಜನತ್ । ಸರ್ವಮಜೀಜನತ್ । ಸರ್ವಂ ಶಾಕ್ತಮಜೀಜನತ್ । ಅಂಡಜಸ್ವೇದಜಮುದ್ಭಿಜ್ಜಂ ಜರಾಯುಜಂ ಯತ್ಕಿಂಚೈತತ್ ಪ್ರಾಣಿಸ್ಥಾವರಜಂಗಮಂ ಮನುಷ್ಯಮಜೀಜನತ್ ॥ ೨ ॥

ಈ ಉಪನಿಷತ್ತು ಚಿಚ್ಛಕ್ತಿಯಲ್ಲಿ ನಿಖಿಲ ಜಗತ್ಕಾರಣತ್ವವನ್ನೂ ಸರ್ವಾತ್ಮ ಭಾವವನ್ನೂ ತೋರಿಸಿ ತದಪವಾದದ ಮೂಲಕ ನಿರ್ವಿಶೇಷ ಚೈತನ್ಯ ಮಾತ್ರ ಪ್ರಕಾಶ ನದಲ್ಲಿ ತಾತ್ಪರ್ಯವನ್ನು ಹೊಂದಿರುತ್ತದೆ. ಆದುದರಿಂದ ನಿಮಿತ್ತ - ಉಪಾದಾನ ಕಾರಣವಾದ ಚಿಚ್ಛಕ್ತಿ ಸ್ವರೂಪವನ್ನು ಮೊದಲನೆಯ ವಾಕ್ಯವು ಪ್ರಕಟಿಸುತ್ತಿದೆ.

ಉಪಾಸಕನಿಗೆ ಆತ್ಮಸ್ವರೂಪಳಾಗಿ ಪ್ರಕಾಶಿಸುವ ಚಿಚ್ಛಕ್ತಿಯೆಂಬ ದೇವಿಯೊಬ್ಬಳೇ ಈ ಜಗತ್ತಿನ ಸೃಷ್ಟಿಗೆ ಮೊದಲು ಇದ್ದಳು. ಆಗ ನಾಮ - ರೂಪಗಳು ಯಾವುವೂ ಅಭಿವ್ಯಕ್ತಿಯನ್ನು ಹೊಂದಿರಲಿಲ್ಲ. ಆ ದೇವಿಯೇ, ಅವಿದ್ಯಾಕಾರ್ಯವಾದ ಈ ನಾಮರೂಪ ಪ್ರಪಂಚವನ್ನು ಸೃಷ್ಟಿಸಿದಳು. ಹೀಗೆ ಜಗತ್ತಿಗೆ ಕಾರಣಳಾಗಿರುವ ಚಿಚ್ಛಕ್ತಿಯು ಕಾಮಕಲೆಯೆಂದೂ ಶೃಂಗಾರ ಕಲೆಯೆಂದೂ ಕರೆಯಲ್ಪಡುತ್ತದೆ. "ಕಾಮೋಯೋನಿಃ ಕಾಮಕಲಾ" ಮುಂತಾದ ಶ್ರುತಿಯ ಅನುಸಾರವಾಗಿ ಈ ಕಾರಕ್ಕೆ ಕಾಮಕಲಾ ಶಬ್ದವು ಇರುವುದರಿಂದ ಈಂಕಾರರೂಪಿಣಿಯಾದ ಚಿಚ್ಛಕ್ತಿಗೂ ಕಾಮಕಲಾ ಎಂಬ ಹೆಸರುಬರುವುದು. ಹೀಗೆ ಅ + ಉ + ಮಕಾರಗಳು ಸೇರಿ ಓಂಕಾರವಾಗಿರು ವುದರಿಂದ ಆವರ್ಣಗಳನ್ನು ಶೃಂಗಗಳೆಂದು ಕಲ್ಪಿಸಿದರೆ ತತ್ಸಮಷ್ಟಿಯಾದ ಓಂಕಾರ ರೂಪಿಣಿಯಾದ ಚಿತ್‌ಶಕ್ತಿಗೆ ಶೃಂಗಾರಕಲೆಯೆಂದೂ ಪ್ರಸಿದ್ಧಿಯು ಬಂದಿರುತ್ತದೆ. ॥ ೧ ॥

ಹಿಂದಿನ ವಾಕ್ಯದಲ್ಲಿ ಚಿಚ್ಛಕ್ತಿಯು ಹುಟ್ಟುವ ವಸ್ತುಗಳಿಗೆಲ್ಲ ಅಭಿನ್ನ ನಿಮಿತ್ತೋ ಪಾದಾನವೆಂದು ಹೇಳಲ್ಪಟ್ಟಿದೆ. ಬ್ರಹ್ಮಾದಿಸ್ಥಾವರಾಂತಸೃಷ್ಟಿಯು ಶಕ್ತಿಯಿಂದಲೇ ಆಗಿರುವ ಬಗೆಯನ್ನು ಇಲ್ಲಿ ವಿವರಿಸುತ್ತಿದೆ. ಈಶ್ವರೇಚ್ಛೆಯಿಂದ ಪ್ರಕೃತಿ ರೂಪಿಣಿ ಯಾದ ಶಕ್ತಿಯು ಚೈತನ್ಯಾಭಾಸದ ಅನುಪ್ರವೇಶದಿಂದ ಅನೇಕ ವಿಧ ಪರಿಣಾಮ ಗಳನ್ನು ಪಡೆಯುವ ಸಮಯದಲ್ಲಿ ಉಚ್ಚಾವಚ (ತರತಮ) ಭಾವದಿಂದಿರುವ ವಿವಿಧ ಉಪಾಧಿ ಸಂಬಂಧದಿಂದ ಉಚ್ಚ ನೀಚ ಭಾವವನ್ನು ತಾನೂ ಅನುಕರಿಸುವುದಾಗಿ ಬ್ರಹ್ಮ - ವಿಷ್ಣು - ರುದ್ರರೆಂಬ ತ್ರಿಮೂರ್ತಿಗಳು ಆದಿಯಾಗಿ ಸ್ಥಾವರಾಂತ ಪರಿಣಾಮ ಗಳನ್ನು ಹೊಂದುವುದು. ಹೀಗೆ ಹುಟ್ಟಿರುವ ಕಾರ್ಯವರ್ಗದಲ್ಲಿ ಬ್ರಹ್ಮ, ವಿಷ್ಣು, ರುದ್ರ, ಮರುದ್ಗಣ, ಗಂಧರ್ವರು, ಅಪ್ಸರ ಸ್ತ್ರೀಯರು, ವೀಣಾವೇಣುವಾದನದಲ್ಲಿ ತತ್ಪರರಾದ ಕಿನ್ನರರು, ಮುಂತಾದ ಉತ್ತಮ ವರ್ಗವು ಸೇರಿದೆ, ಮತ್ತು ಭೋಗ್ಯವಸ್ತು, ವಿಭೂತಿ ಶಕ್ತಿಯುಳ್ಳ ವಸ್ತು, ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜ ಪ್ರಾಣಿ ಗಳು, ಪ್ರಾಣವ್ಯಾಪಾರವುಳ್ಳ ಸ್ಥಾವರ ಜಂಗಮ ಸಾಮಾನ್ಯವೂ, ತತ್ವ ವಿದ್ಯೆಯಲ್ಲಿ ಅಧಿ ಕಾರಿಗಳಾದ ಮನುಷ್ಯರು, ಎಲ್ಲವೂ ಹುಟ್ಟಿರುತ್ತದೆ. ಉಪಾಧಿಗಳ ಉತ್ಪತ್ತಿ-ನಾಶ ಗಳನ್ನು ಪ್ರಕೃತಿಯಲ್ಲಿ ಉಪಚರಿಸುವುದರಿಂದ ಚಿಚ್ಛಕ್ತಿಗೆ ಬಹುಭವನ ( ಬಹು ವಿಧ ವಾದ ಪರಿಣಾಮ ) ವೆಂಬ ಸೃಷ್ಟಿಯಾದಂತೆ ವ್ಯವಹಾರವು ಬಂದಿರುತ್ತದೆ. ॥ ೨ ॥

ಸೈಷಾ ಪರಾ ಶಕ್ತಿಃ । ಸೈಷಾ ಶಾಂಭವೀ ವಿದ್ಯಾ ಕಾದಿವಿದ್ಯೇತಿ ವಾ ಹಾದಿವಿದ್ಯೇತಿ ವಾ ಸಾದಿವಿದ್ಯೇತಿ ವಾ ರಹಸ್ಯಮೋಮೋಂ ವಾಚಿಪ್ರತಿಷ್ಠಾ ॥ ೩ ॥

ಸೈವ ಪುರತ್ರಯಂ ಶರೀರತ್ರಯಂ ವ್ಯಾಪ್ಯ ಬಹಿರಂತರವಭಾಸಯಂತೀ ದೇಶಕಾಲವಸ್ತ್ವಂತರಾಸಂಗಾನ್ಮಹಾ ತ್ರಿಪುರಸುಂದರೀ ವೈ ಪ್ರತ್ಯಕ್ಚಿತಿಃ ॥ ೪ ॥

ಸೈವಾತ್ಮಾ ತತೋಽನ್ಯದಸತ್ಯಮನಾತ್ಮಾ । ಅತ ಏಷಾ ಬ್ರಹ್ಮಸಂವಿತ್ತಿರ್ಭಾವಾಭಾವಕಲಾವಿನಿರ್ಮುಕ್ತಾ ಚಿದ್ವಿದ್ಯಾಽದ್ವಿತೀಯಾ ಬ್ರಹ್ಮಸಂವಿತ್ತಿಃ । ಸಚ್ಚಿದಾನಂದಲಹರೀ ಮಹಾತ್ರಿಪುರಸುಂದರೀ ಬಹಿರಂತರನುಪ್ರವಿಶ್ಯ ಸ್ವಯಮೇಕೈವ ವಿಭಾತಿ । ಯದಸ್ತಿ ಸನ್ಮಾತ್ರಮ್ । ಯದ್ಭಾತಿ ಚಿನ್ಮಾತ್ರಮ್ । ಪ್ರಿಯಮಾನಂದಮ್ । ತದೇತತ್ ಸರ್ವಾಕಾರಾ ಮಹಾತ್ರಿಪುರಸುಂದರೀ । ತ್ವಂ ಚಾಹಂ ಚ ಸರ್ವಂ ವಿಶ್ವಂ ಸರ್ವದೇವತಾ । ಇತರತ್ ಸರ್ವಂ ಮಹಾತ್ರಿಪುರಸುಂದರೀ । ಸತ್ಯಮೇಕಂ ಲಲಿತಾಖ್ಯಂ ವಸ್ತು ತದದ್ವಿತೀಯಮಖಂಡಾರ್ಥಂ ಪರಂ ಬ್ರಹ್ಮ ॥ ೫ ॥

ಬ್ರಹ್ಮವು ನಿರ್ವಿಶೇಷ ಚಿನ್ಮಾತ್ರರೂಪವಾದರೂ ಅಜ್ಞರಿಂದ ಕಲ್ಪಿತವಾದ ಮಾಯಾ ಶಕ್ತಿ - ಶಕ್ತಿಮತ್ ಎಂಬದ್ವೈತ ಅವಲಂಬನದಿಂದ ಅನೇಕ ಶಬ್ದ - ಅರ್ಥ ರೂಪವಾದ ಪರಿಣಾಮಗಳು ಉಂಟಾಗಿವೆ. ಅಂತಹ ಶಕ್ತಿಯು ಚೈತನ್ಯಕ್ಕಿಂತ ಅತಿ ರಿಕ್ತವಲ್ಲದ್ದರಿಂದ ಪರಾಶಕ್ತಿ ಸ್ವರೂಪವು. ಸರ್ವರಿಗೂ ಸುಖಲಾಭಕ್ಕೆ ಕಾರಣನಾದ ಶಂಭು (ಈಶ್ವರ) ವಿಂದ ಅಧಿಷ್ಠಿತವಾದ್ದರಿಂದ ಶಾಂಭವೀ ವಿದ್ಯಾ ರೂಪವೂ ಆಗಿದೆ. ಈ ಪರತತ್ವವನ್ನು ಪ್ರಕಾಶಿಸುವ ಮಹಾ ವಿದ್ಯೆಯು ದೇವತಾ ರೂಪವಾಗಿರುವುದರಿಂದ ದೇವತೆಯು ಮಹಾ ವಿದ್ಯೆಯ "ಕ - ಏ - ಈ - ಲ - ಹ್ರೀಂ" ಎಂಬ ಪ್ರಥಮ ಖಂಡದ ರೂಪವಾಗಿ ಕಾದಿ ವಿದ್ಯೆಯೂ "ಹ - ಸ - ಕ - ಹ - ಲ - ಹ್ರೀಂ" ಎಂಬ ದ್ವಿತೀಯ ಖಂಡರೂಪವಾಗಿ ಹಾದಿ ವಿದ್ಯೆಯೂ "ಸ - ಕ - ಲ - ಹ್ರೀಂ" ಎಂಬ ತೃತೀಯ ಖಂಡದ ರೂಪವಾಗಿ ಸಾದಿ ವಿದ್ಯೆಯೂ ಆಗಿದೆ. ಅನಧಿಕಾರಿಗೆ ಉಪದೇಶ ದೊರೆಯದೇ ರಹಸ್ಯವಾಗಿರುವ ಪರಬ್ರಹ್ಮರೂಪವೂ ಓಂಕಾರ ರೂಪವೂ ಆಗಿ ಓಂಕಾರದಿಂದ ಉದ್ಭವಿಸಿದ ನಿಖಿಲವರ್ಣ ಸಮೂಹ ರೂಪವಾದ ಶಬ್ದಗಳಲ್ಲಿ ಆಯಾಯ ಶಬ್ದ ಪ್ರತಿಪಾದ್ಯ ಅರ್ಥರೂಪವಾಗಿ ಪ್ರತಿಷ್ಠಿತವಾಗಿರುತ್ತದೆ. ‖ ೩ ‖

ಆ ದೇವಿಯೇ ಸ್ಥೂಲ-ಸೂಕ್ಷ್ಮ-ಬೀಜಾತ್ಮಕಗಳೆಂಬ ಮೂರುಶರೀರಗಳನ್ನು ಸಮಷ್ಟಿಅಭಿಮಾನದಿಂದ ವಿರಾಟ್-ಹಿರಣ್ಯಗರ್ಭ-ಅವ್ಯಾಕೃತ ತತ್ವರೂಪವಾಗಿಯೂ ವ್ಯಷ್ಟಿ ಅಭಿಮಾನದಿಂದ ವಿಶ್ವ – ತೈಜಸ – ಪ್ರಾಜ್ಞ ರೂಪವಾಗಿಯೂ ವ್ಯಾಪಿಸಿ ನಾಮ, ರೂಪಗಳೆಂಬ ಬಾಹ್ಯ ವಸ್ತುಗಳನ್ನೂ ಕಾಮಾದಿ ಅಂತರವೃತ್ತಿಗಳನ್ನೂ ಪ್ರಕಾಶಿಸುತ್ತಾ ದೇಶಕಾಲ ವಸ್ತ್ವಂತರಗಳಿಂದ ಉಂಟಾಗುವ ಸಂಕೋಚ (ಪರಿಚ್ಛೇದ) ವನ್ನು ಅನುಭವಿಸುತ್ತದೆ. ಆದರೂ ಸ್ವಸ್ವರೂಪ ತತ್ವವನ್ನು ಅರಿತ ಜ್ಞಾನಿಗಳಿಗೆ ಶರೀರತ್ರಯವೆಂಬ ತ್ರಿಪುರಗಳನ್ನು ಸಂಪೂರ್ಣವಾಗಿ ನಾಶಮಾಡಿ ಕೈವಲ್ಯ ಸಾಮ್ರಾಜ್ಯವನ್ನು ಕೊಡುವವಳಾದ್ದರಿಂದ ಮಹಾ ತ್ರಿಪುರ ಸುಂದರೀ ದೇವಿಯೆಂದು ಮಂತ್ರಗಳಲ್ಲಿ ಪ್ರಸಿದ್ಧಿಯು ಬಂದಿರುತ್ತದೆ. ಪ್ರಪಂಚ ಧರ್ಮವಾದ ಅಸತ್ತಾ - ಜಡತಾ ದುಃಖಿತಾ ಮುಂತಾದ ಧರ್ಮಕ್ಕೆ ವಿರುದ್ಧವಾದ ಸತ್ತಾ - ಚೈತನ್ಯ - ಆನಂದ ಧರ್ಮಗಳು ಸ್ವಸ್ವರೂಪದಲ್ಲಿ ಅಡಗಿರುವುದರಿಂದ ಪ್ರತ್ಯಕ್ ಚಿತಿ ರೂಪಳೂ ಆಗಿರುವಳು. ‖ ೪ ‖

ಸೃಷ್ಟಿ ಪ್ರಕ್ರಿಯೆಯನ್ನು ವಿವರಿಸುವಾಗ ಶಕ್ತಿ - ಶಕ್ತಿಮತ್ ಎಂಬ ದ್ವೈತ ವಸ್ತುಗಳನ್ನು ಒಪ್ಪಿದಂತೆ ಕಂಡುಬರುತ್ತದೆ. ಆದರೆ ಅದರ ತತ್ತ್ವವನ್ನು ಈ ರೀತಿ ಅರಿಯಬೇಕು. ಮಿಥ್ಯಾಭೂತವಾದ ಶಕ್ಯ ವಸ್ತುಗಳಿಗೆ ಸಮಾನವಾದ ಶಕ್ತ್ಯಂಶವೂ ಮಿಥ್ಯಾಭೂತವಾದುದು. ಆದ್ಧರಿಂದ ಮಿಥ್ಯಾಂಶ ವಿನಿರ್ಮುಕ್ತನಾದ ಆತ್ಮನು ಸತ್ಯನೂ ತದ್ಗತವಾದ ಶಕ್ತ್ಯಂಶವು ಮಿಥ್ಯಾ ವಸ್ತುವಾದ್ದರಿಂದ ಅನಾತ್ಮವೂ ಆಗಿದೆ. ಆದುದರಿಂದ ಈ ವಿಧದ ನಿರ್ವಿಶೇಷ ಸಂವಿನ್ಮಾತ್ರ ರೂಪವಾದ ಪರಮಾತ್ಮ ತತ್ವವು ಬಾಹ್ಯೇಂದ್ರಿಯಗಳಿಗೆ ವೇದ್ಯವಾಗುವ ವಸ್ತುಗಳೆಂಬ ಭಾವಕಲೆ ಅಂತರಿಂದ್ರಿಯ ಮಾತ್ರಕ್ಕೆ

ಪಂಚರೂಪಪರಿತ್ಯಾಗಾ ದರ್ವರೂಪಪ್ರಹಾಣತಃ । ಅಧಿಷ್ಠಾನ ಏಕಂ ಸಚ್ಛಿಷ್ಯತೇ ಮಹತ್ ॥ ೬ ॥

ಪ್ರಜ್ಞಾನಂ ಬ್ರಹ್ಮೇತಿ ವಾ ಅಹಂ ಬ್ರಹ್ಮಾಸ್ಮೀತಿ ವಾ ಭಾಷ್ಯತೇ ತ್ಯೈವ ಸಂಭಾಷ್ಯತೇ । ಅಯಮಾತ್ಮಾ ಬ್ರಹ್ಮೇತಿ ವಾ ಅಹಂ ವಾ ಬ್ರಹ್ಮೈವಾಹಮಸ್ಮೀತಿ ವಾ ॥ ೭ ॥

ವೇದ್ಯವಾಗುವ ವಸ್ತುಗಳೆಂಬ ಅಭಾವ ಕಲೆ ಇವೆರಡರಿಂದಲೂ ರಹಿತವಾದುದು. ಸಂವಿತ್ಪ್ರಕಾಶ ರೂಪವಾದ್ದರಿಂದ ಚಿತ್ಸ್ವರೂಪವೂ ಆಗಿದೆ. ಮಹಾ ತ್ರಿಪುರಸುಂದರೀ ದೇವಿಯೆಂದೂ ವ್ಯವಹರಿಸಲ್ಪಡುವ ಬ್ರಹ್ಮಚೈತನ್ಯವು ಅಜ್ಞಾನ ಕಲ್ಪಿತವಾದ ದ್ವೈತ ಪ್ರಪಂಚದಲ್ಲಿ ಅಸತ್ತ್ವ - ಜಡತ್ವ ದುಃಖ ಧರ್ಮಗಳಿದ್ದರೂ ಅವೆಲ್ಲವೂ ಉಪಾಧಿ ಧರ್ಮ ವಾದ್ದರಿಂದ ತದ್ವಿರುದ್ಧವಾದ ಸಚ್ಚಿದಾನಂದ ಧರ್ಮಗಳಿಗೆ ಸಮುದ್ರದಂತಿರುವ ಸ್ವಸ್ವರೂಪದಿಂದ ಸಮಸ್ತ ಪ್ರಪಂಚವನ್ನೂ ಪ್ರವೇಶಿಸಿ ಅಂತರ್ಯಾಮಿಯಾಗಿ ಅದ್ವಿ ತೀಯವಾಗಿ ಪ್ರಕಾಶಿಸುವುದು. ದ್ವೈತ ಪ್ರಪಂಚದಲ್ಲಿ ಕಂಡುಬರುವ ನಾಮ - ರೂಪ ಕ್ರಿಯೆಗಳು ಕಲ್ಪಿತವಾದುವುಗಳು. ಉಳಿದ ಸತ್ಯತಾದಿಗಳು ಅಧಿಷ್ಠಾನವಾದ ಚೈತನ್ಯ ಧರ್ಮಗಳೇ ಆದ್ದರಿಂದ ಕಲ್ಪಿತ ವಸ್ತುಗಳ ಅಪಾಯ (ಅಪೋಹ) ದಿಂದ ಅಧಿಷ್ಠಾನ ವಸ್ತುವೊಂದೇ ಪರಮಾರ್ಥವಾಗಿ ನಿಲ್ಲುವುದು. ಸಕಲ ವಸ್ತುಲಯಕ್ಕೆ ಅಧಿಷ್ಠಾನ ವಾದ್ದರಿಂದ ಲಲಿತ ಎಂಬ ನಾಮಾಂಕನವೂ ಬಂದಿರುತ್ತದೆ. ನೀನು ತಾನೆಂಬ ವ್ಯವ ಹಾರಕ್ಕೆ ವಿಷಯವಾಗುವ ತತ್ತ್ವ, ಇತರ ಸರ್ವವಸ್ತು, ಎಲ್ಲವೂ ಸರ್ವದೇವತಾ ರೂಪಿ ಣಿಯಾದ ಮಹಾ ತ್ರಿಪುರಸುಂದರೀ ದೇವಿಯ ಸತ್ಯಾಂಶದಿಂದ ಸತ್ಯವಾಗಿ ತೋರಿವೆ ಯಾದ್ದರಿಂದ ಆ ದೇವತಾರೂಪವಾದ ಬ್ರಹ್ಮಚೈತನ್ಯವೇ ಸತ್ಯವೂ ಅಖಂಡಾರ್ಥ ರೂಪವೂ ಆಗಿರುತ್ತದೆ. ॥ ೫ ॥

ಹಿಂದೆ ವಿವರಿಸಿರುವ ಅರ್ಥವನ್ನು ಸಂಗ್ರಹವಾಗಿ ಈ ಶ್ಲೋಕವು ನಿರೂಪಣೆ ಮಾಡುತ್ತಿದೆ. ಬ್ರಹ್ಮವಸ್ತುವಿನಲ್ಲಿಯೇ ತದಂಶವಾಗಿ ಕಲ್ಪಿಸಲ್ಪಟ್ಟ ಸದಾಶಿವ ಮೊದಲಾದ ಐದು ರೂಪಗಳನ್ನೂ, ಅರ್ವಾಚೀನವಾದ ಭೂತಭೌತಿಕಗಳ ನಾಮರೂಪ ಮೊದಲಾದ ಅಂಶಗಳನ್ನೂ ತತ್ವಜ್ಞಾನದಿಂದ ಅನೃತವೆಂದು ತಿಳಿದು ದೂರಮಾಡಿ ದಲ್ಲಿ ಅವಕ್ಕೆಲ್ಲ ಅಧಿಷ್ಠಾನ (ಆಧಾರ) ವಾದ ಪರತತ್ವವೊಂದೇ ಅಪರಿಚ್ಛಿನ್ನವೂ ಅದ್ವಿ ತೀಯವೂ ಆದ ತತ್ವವು ಉಳಿಯುವುದು. ಇದನ್ನು ಉಪನಿಷತ್ತುಗಳಲ್ಲಿ ಭೂಮ ವಸ್ತುವೆಂದು ವ್ಯವಹರಿಸುವುದುಂಟು. ॥ ೬ ॥

ಮೇಲೆ ಹೇಳಿದ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಉಪಾಯವಾದ ಭಾವನೆ ಗಳ ಸ್ವರೂಪವನ್ನು ಈ ವಾಕ್ಯವು ತೋರಿಸುತ್ತಿದೆ. ಐತರೇಯ ಉಪನಿಷತ್ತಿನಲ್ಲಿ ಹೇಳಿರುವ "ಪ್ರಜ್ಞಾನಂಬ್ರಹ್ಮ" ಎಂಬ ಮಹಾವಾಕ್ಯಾನುಸಾರವಾಗಿ ಸಕಲ ವಸ್ತುಗಳು ಪ್ರಜ್ಞಾ (ಚೈತನ್ಯ) ಅಧೀನವಾಗಿ ಪ್ರಜ್ಞಾನವೇ ಪರಮಾರ್ಥವಾಗಿರುವುದರಿಂದ ಪ್ರಜ್ಞಪ್ತಿ ಮಾತ್ರವೇ ಬ್ರಹ್ಮಸ್ವರೂಪವು ಎಂದು ಭಾವಿಸಬಹುದು. ಅಥವಾ "ಅಹಂ ಬ್ರಹ್ಮಾಸ್ಮಿ" ಎಂಬ ಶಿಷ್ಯಾನುಭವದ ಭಾವನೆಯನ್ನಾಗಲಿ, "ತತ್ತ್ವಮಸಿ" ಎಂಬ ಆಚಾರ್ಯಾನುಭವದ ಭಾವನೆಯನ್ನಾಗಲಿ "ಅಯಮಾತ್ಮಾ ಬ್ರಹ್ಮ" ಎಂಬ ಶೋಧಿ ತವಾದ ಜೀವ–ಬ್ರಹ್ಮ ಚೈತನ್ಯಗಳ ಐಕ್ಯಾನುಭವ ಭಾವನೆಯನ್ನಾಗಲಿ ಅನಾತ್ಮ ಧರ್ಮಗಳಾದ ಕರ್ತೃತ್ವಾದಿ ಅನಾತ್ಮ ಧರ್ಮಗಳನ್ನು ಆತ್ಮನಲ್ಲಿಯೂ ಆನಂದ ಸತ್ಯತಾದಿ

ಯೋಽಹಮಸ್ಮೀತಿ ವಾ ಸೋಽಹಮಸ್ಮೀತಿ ವಾ ಯೋಽಸೌ ಸೋಽಹಮಸ್ಮೀತಿ ವಾ ಯಾ ಭಾವ್ಯತೇ ಸೈಷಾ ಷೋಡಶೀ ಶ್ರೀವಿದ್ಯಾ ಪಂಚದಶಾಕ್ಷರೀ ಶ್ರೀ ಮಹಾತ್ರಿಪುರಸುಂದರೀ ಬಾಲಾಂಬಿಕೇತಿ ಬಗಲೇತಿ ವಾ ಮಾತಂಗೀ ಸ್ವಯಂವರಕಲ್ಯಾಣೀತಿ ಭುವನೇಶ್ವರೀತಿ ಚಾಮುಂಡೇತಿ ಚಂಡೇತಿ ವಾರಾಹೀತಿ ತಿರಸ್ಕರಿಣೀತಿ ರಾಜಮಾತಂಗೀತಿ ವಾ ಶುಕಶ್ಯಾಮಲೇತಿ ವಾ ಲಘುಶ್ಯಾಮಲೇತಿ ವಾ ಅಶ್ವಾರೂಢೇತಿ ವಾ ಪ್ರತ್ಯಂಗಿರಾ ಧೂಮಾವತೀ ಸಾವಿತ್ರೀ ಸರಸ್ವತೀ ಗಾಯತ್ರೀ ಬ್ರಹ್ಮಾನಂದ ಕಲೇತಿ ॥ ೮ ॥

ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ । ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥ ಇತ್ಯುಪನಿಷತ್ ॥ ೯ ॥

॥ ಬಹ್ವೃಚೋಪನಿಷತ್ ಸಮಾಪ್ತಾ ॥

ಆತ್ಮಧರ್ಮಗಳನ್ನು ಅನಾತ್ಮನಲ್ಲಿಯೂ ತೋರಿಸುವ ಭ್ರಾಂತಿಗಳನ್ನು ತೊಲಗಿಸುವದಕ್ಕೋಸ್ಕರ ವ್ಯತಿಹಾರ (ಅನ್ಯೋನ್ಯ) ವಾಗಿ "ಅಹಂಬ್ರಹ್ಮಾಸ್ಮಿ–ಬ್ರಹ್ಮೈವಾಹ ಮಸ್ಮಿ" ಎಂಬ ಭಾವನೆಯನ್ನಾಗಲಿ ಪುನಃ ಪುನಃ ಆಚರಿಸಿ ಬ್ರಹ್ಮ ಸಾಕ್ಷಾತ್ಕಾರ ವನ್ನು ಹೊಂದಬೇಕು. ಮೇಲೆ ಹೇಳಿದ ನಾಲ್ಕು ವೇದಗಳ ಮಹಾವಾಕ್ಯಗಳಿಗೆ ಜೀವ ಬ್ರಹ್ಮೈಕ್ಯವೇ ಪರಮಾರ್ಥವು. ॥ ೭ ॥

ಹಿಂದೆ ಹೇಳಿದ ಭಾವನಾಪ್ರಕಾರಗಳಿಂದ ಪರಮಾತ್ಮನನ್ನು ಅನುಸಂಧಾನ ಮಾಡಬೇಕು. ಉಪಾಸ್ಯವಾದ ವಸ್ತುವನ್ನು ಉಪಾಸಕರು ತಮ್ಮ ತಮ್ಮ ಜ್ಞಾನ ತಾರತಮ್ಯದಿಂದ ಷೋಡಶಾಕ್ಷರೀ ವಿದ್ಯಾಭ್ಯಾಸದಿಂದಲೋ ಪಂಚದಶಾಕ್ಷರೀ ಮಹಾ ವಿದ್ಯಾ ಪುರಶ್ಚರಣದಿಂದಲೋ ಚಿಂತಿಸುವರು. ಮತ್ತು ಉಪಾಸ್ಯದೇವತೆಯಲ್ಲಿ ಸ್ವವಾಸನಾನುರೂಪವಾಗಿ ಅನೇಕ ದಿವ್ಯನಾಮ–ರೂಪಗಳನ್ನು ಕಲ್ಪಿಸುವರು. ಮಹಾತ್ರಿಪುರ ಸುಂದರೀ, ಬಾಲಾ, ಅಂಬಿಕಾ, ಬಗಲಾ, ಮಾತಂಗೀ, ಸ್ವಯಂವರ ಕಲ್ಯಾಣೀ, ಭುವನೇಶ್ವರೀ, ಚಾಮುಂಡಾ, ಚಂಡಾ, ವಾರಾಹೀ ತಿರಸ್ಕರಿಣೀ, ರಾಜಮಾತಂಗೀ ಶುಕ್ಲ ಶ್ಯಾಮಲಾ, ಲಘುಶ್ಯಾಮಲಾ, ಅಶ್ವಾರೂಢಾ, ಪ್ರತ್ಯಂಗಿರಾ, ಧೂಮಾವತೀ, ಸಾವಿತ್ರೀ, ಸರಸ್ವತೀ, ಗಾಯತ್ರೀ ಮುಂತಾದ ದೇವಿಯ ದಿವ್ಯನಾಮಗಳನ್ನು ಅವುಗಳ ಅರ್ಥವಾದ ಶಕ್ತಿ–ವಿಭೂತಿ–ಮಹಿಮೆಗಳನ್ನು ಧ್ಯಾನಿಸುತ್ತಾ ಉಪಾಸನೆ ಮಾಡುವರು. ಈ ನಾಮರೂಪಗಳು ಸಕಾಮಾನುಷ್ಠಾನಕ್ಕೆ ವಿಷಯಗಳಾಗಿವೆ. ಈ ಉಪಾಸನೆಗಳಿಂದ ಯಥಾಕ್ರತು ನ್ಯಾಯಾನುಸಾರವಾಗಿ ಅಷ್ಟೈಶ್ವರ್ಯಾದಿ ವಿವಿಧ ಫಲಗಳನ್ನು ಅನುಭವಿಸುವರು. ಬ್ರಹ್ಮಜ್ಞಾನಾರ್ಥಿಗಳಾದರೋ ನಿಷ್ಕಾಮರೂ ನಿತ್ಯತೃಪ್ತರೂ ಆಗಿ ಬ್ರಹ್ಮಾನಂದಕಲೆಯೆಂದು ಧ್ಯಾನಿಸುವರು. ॥ ೮ ॥

"ಶಾಸ್ತ್ರಯೋನಿತ್ವಾತ್" ಎಂಬ ನ್ಯಾಯದಿಂದ ವೇದಾದಿ ಸಕಲ ವಿದ್ಯಾಸ್ಥಾನಗಳಿಗೂ ಪರಮಾತ್ಮನು ಕಾರಣನಾಗಿರುವುದರಿಂದಲೂ ನಿಖಿಲದೇವತೆಗಳಿಗೂ ಅವರವರ ಪೂರ್ವ ಸುಕೃತದ ಫಲವನ್ನಾಗಿ ಇಂದ್ರ ಚಂದ್ರಾದಿ ಪದವಿಗಳನ್ನು ಸಂವಿಭಾಗ ಮಾಡಿರುವುದರಿಂದಲೂ ಕೂಡ ಆ ಅಕ್ಷರನಾದ ಪರಮಾತ್ಮನಲ್ಲಿ ಸಮಸ್ತ ವಿದ್ಯಾಸ್ಥಾನಗಳೂ ನಿಖಿಲದೇವತೆಗಳೂ ಪ್ರತಿಷ್ಠೆಯನ್ನು ಹೊಂದಿರುತ್ತಾರೆ. ಅಂತಹ ಆತ್ಮನನ್ನು ತತ್ಪ್ರಾಪ್ತಿಸಾಧನಗಳಾದ ಉಪನಿಷದಾದಿಗಳಿಂದ ತಿಳಿಯದೇ ಇದ್ದರೆ ಅಂತಹ ಮನುಷ್ಯನು ಋಗ್ವೇದಾದಿ ಅಧ್ಯಯನದಿಂದ ಏನುತಾನೇ ಪ್ರಯೋಜನವನ್ನು ಗಳಿಸುವನು. ಜ್ಞೇಯವಸ್ತುವನ್ನು ತಿಳಿದು ಜನ್ಮಸಾಫಲ್ಯವನ್ನು ಹೊಂದಲಾರನಾದ್ದರಿಂದ ಅವನ ಇತರ ವಿದ್ಯಾರ್ಜನೆಯು ನಿಷ್ಫಲವು. "ತಮೇವೈಕಂ ಜಾನಥ ಅನ್ಯಾವಾಚೋವಿಮುಂಚಥಾಮೃತಸ್ಯೈಷಸೇತುಃ-ವಾಚೋವಿಗ್ಲಾಪನಂ ಹಿತತ್"ಎಂಬಂತೆ ವಾಗಿಂದ್ರಿಯ ಶ್ರಮಮಾತ್ರವೇ ಲಭಿಸುವುದು. ಯಾರು ಶ್ರವಣಾದ್ಯನುಷ್ಠಾನದಿಂದ ಆತ್ಮತತ್ವವನ್ನು ತಿಳಿದು ಮಹಾಜ್ಞಾನಿಗಳಾಗುವರೋ ಅವರು ಕೃತ ಕೃತ್ಯರಾಗುವರು. ॥೯॥

ಬಹ್ವೃಚೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವಾದುದು.

|| ಶ್ರೀರಸ್ತು ||

## || ಸೀತೋಪನಿಷತ್ ||

---

ಓಂ:—ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ | ಸ್ಥಿರೈರಂಗೈಸ್ತುಷ್ಟುವಾಂಸ ಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ || ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ| ಸ್ವಸ್ತಿ ನಃ ಪೂಷಾ ವಿಶ್ವವೇದಾಃ | ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ | ಸ್ವಸ್ತಿ ನೋ ಬೃಹಸ್ಪತಿರ್ದಧಾತು ||

ಓಂ ಶಾಂತಿಃ ಶಾಂತಿಃ ಶಾಂತಿಃ ||

ದೇವಾ ಹ ವೈ ಪ್ರಜಾಪತಿಮಬ್ರವನ್ ಕಾ ಸೀತಾ ಕಿಂ ರೂಪಮಿತಿ || ೧ ||

॥ ಶ್ರೀ ॥

# ಸೀತೋಪನಿಷತ್ತಿನ ಕನ್ನಡ ಅನುವಾದವು.

---

ಅಥರ್ವ ವೇದದ ಪ್ರಖ್ಯಾತ ಉಪನಿಷತ್ತುಗಳಲ್ಲಿ ಈ ಸೀತೋಪನಿಷತ್ತೂ ಒಂದಾಗಿದೆ. ಇದು ದೇವೀ ಪರವಾದದ್ದು, ಅಥರ್ವ ವೇದದ ಉಪನಿಷತ್ತುಗಳ ಪಠನೋಪಕ್ರಮದಲ್ಲಿ ಭದ್ರಂಕರ್ಣೇಭಿಃ ಎಂಬ ಶಾಂತಿಮಂತ್ರವನ್ನು ಪಠಿಸುವುದು ಸತ್ ಸಂಪ್ರದಾಯವಾದ್ದರಿಂದ ಅದನ್ನು ಇಲ್ಲಿ ಸೇರಿಸಿರುತ್ತೆ. ಆ ಶಾಂತಿ ಮಂತ್ರಗಳ ಅರ್ಥವು ಈ ರೀತಿಯಿದೆ:— ಎಲೆ ಇಂದ್ರಾದಿ ದೇವತೆಗಳಿರಾ, ಆಚಾರ್ಯ - ಶಿಷ್ಯ ಮುಂತಾದ ನಾವೆಲ್ಲರೂ ಅನೇಕ ಶ್ರವಣೇಂದ್ರಿಯಗಳಿಂದ ಶ್ರುತಿ - ಸ್ಮೃತಿ ಮುಂತಾದ ಶ್ರೇಯಸ್ಕರವಾದ ವಾಙ್ಮಯವನ್ನು ಶ್ರವಣಮಾಡುತ್ತೇವೆ. ಮತ್ತು ಶ್ರುತಿ ಸ್ಮೃತಿ ವಿಹಿತವಾದ ಯಾಗಾದಿ ಸತ್ಕರ್ಮದಕ್ಷರಾಗಿ ಅಂತಹ ಕರ್ಮಾನುಷ್ಠಾನವನ್ನು ಅನೇಕ ಕಣ್ಣುಗಳಿಂದ ನೋಡುತ್ತೇವೆ. ಯಾವ ವಿಧದ ನ್ಯೂನತೆಯೂ ಇಲ್ಲದೇ ಪಟುವಾದ ಸಕಲಾವಯವಗಳಿಂದ ಸ್ತೋತ್ರಾರ್ಹರಾದ ನಿಮ್ಮೆಲ್ಲರನ್ನೂ ಸ್ತುತಿಸುತ್ತಾ ಬ್ರಹ್ಮದತ್ತವಾದ ಮಾನವಾಯುಸ್ಸವನ್ನು ಪೂರ್ಣವಾಗಿ ಅನುಭವಿಸುತ್ತೇವೆ. ಅಂತಹ ಆಯುಷ್ಯಲಾಭದಿಂದ ಪುನಃಪುನಃ ಭದ್ರಕರವಾದ ವಿಷಯಗಳನ್ನು ಆಯಾಯ ಇಂದ್ರಿಯಗಳಿಂದ ಸಾಕ್ಷಾತ್ಕರಿಸುತ್ತೇವೆ.

ಪುರಾಣಾದಿಗಳಲ್ಲಿ ಮಹಾತ್ಮರಿಂದ ಸಂತತವಾಗಿ ಶ್ರವಣಮಾಡಲ್ಪಡುತ್ತಿರುವ ಇಂದ್ರನೂ, ಸರ್ವಜ್ಞನಾದ ಪೂಷದೇವನೂ ಸರ್ಪಾದಿಹಿಂಸೆಯನ್ನು ನಿವಾರಿಸಿ ನಮ್ಮನ್ನು ಪಾಲಿಸುತ್ತಿರುವ ಗರುಡನೂ ಬ್ರಹ್ಮವರ್ಚಸವನ್ನು ಅನುಗ್ರಹಿಸುವ ಬೃಹಸ್ಪತಿಯೂ ಕೂಡ ನಮಗೆ ಕ್ಷೇಮವನ್ನುಂಟುಮಾಡಲಿ. ಈ ದೇವತೆಗಳ ಪ್ರಸಾದದಿಂದ ಕ್ಷೇಮವಂತರಾಗಿ ಅಧ್ಯಯನ-ಶ್ರವಣ-ಅನುಷ್ಠಾನಗಳನ್ನು ನಿರ್ವಹಿಸಿ ಕೃತಕೃತ್ಯರಾಗುವೆವು ಎಂದು ಪ್ರಾರ್ಥನಾಪರವಾದ ಮಂತ್ರಗಳು. ಕಡೆಯಲ್ಲಿ ತಾಪತ್ರಯವು ಶಮನವಾಗಲೆಂದು ಪ್ರಾರ್ಥಿಸುತ್ತಾ ಓಂಕಾರವನ್ನು ಒಂದು ಸಲ ಹಿಂದೆ ಸೇರಿಸಿ ಶಾಂತಿಪದವನ್ನು ಮೂರುಸಲ ಆವೃತ್ತಿ ಮಾಡಬೇಕು. ಇದು ಶಾಂತಿಮಂತ್ರಗಳ ಅರ್ಥವು.

ದೇವತೆಗಳ ಸಮೂಹಕ್ಕೂ ಪ್ರಜಾಪತಿ ದೇವತೆಗೂ ಪ್ರಶ್ನೋತ್ತರರೂಪವಾಗಿ ಉಪಕ್ರಮವಾಗಿರುತ್ತದೆ. ಸೀತೆಯೆಂದರೆ ಯಾರು? ಯಾವ ಆಕೃತಿಯುಳ್ಳವಳು? ಎಂದು ಪ್ರಜಾಪತಿಯನ್ನು ದೇವತೆಗಳು ಪ್ರಶ್ನಿಸಿದರು. ॥ ೧ ॥

ಸಹೋವಾಚ ಪ್ರಜಾಪತಿಃ ಸಾ ಸೀತೇತಿ । ಮೂಲಪ್ರಕೃತಿರೂಪತ್ವಾತ್ ಸಾ ಸೀತಾ ಪ್ರಕೃತಿಃ ಸ್ಮೃತಾ । ಪ್ರಣವ ಪ್ರಕೃತಿ ರೂಪತ್ವಾತ್ ಸಾ ಸೀತಾ ಪ್ರಕೃತಿರುಚ್ಯತೇ ॥ ೨ ॥

ಸೀತಾ ಇತಿ ತ್ರಿವರ್ಣಾತ್ಮಾ ಸಾಕ್ಷಾನ್ಮಾಯಾಮಯಾ ಭವೇತ್ ।
ವಿಷ್ಣುಃ ಪ್ರಪಂಚಬೀಜಂ ಚ ಮಾಯಾ ಈಕಾರ ಉಚ್ಯತೇ ॥ ೩ ॥

ಸಕಾರಃ ಸತ್ಯಮಮೃತಂ ಪ್ರಾಪ್ತಿಃ ಸೋಮಶ್ಚ ಕೀರ್ತ್ಯತೇ ।
ತಕಾರಸ್ತಾರಲಕ್ಷ್ಮ್ಯಾ ಚ ವೈರಾಜಃ ಪ್ರಸ್ತರಃ ಸ್ಮೃತಃ ॥ ೪ ॥

ಈಕಾರರೂಪಿಣೀ ಸೋಮಾಽಮೃತಾವಯವದೇವ್ಯಲಂಕಾರ ಸ್ರಜ್ ಮೌಕ್ತಿಕಾದ್ಯಾಭರಣಾಲಂಕೃತಾ ಮಹಾಮಾಯಾಽವ್ಯಕ್ತರೂಪಿಣೀ ವ್ಯಕ್ತಾ ಭವತಿ ॥ ೫ ॥

ಪ್ರಥಮಾ ಶಬ್ದಬ್ರಹ್ಮಮಯೀ ಸ್ವಾಧ್ಯಾಯಕಾಲೇ ಪ್ರಸನ್ನಾ । ಉದ್ಭವಾ ನರಕಾತ್ಮಿಕಾ ದ್ವಿತೀಯಾ ಭೂತಲೇ ಹಲಾಗ್ರೇ ಸಮುತ್ಪನ್ನಾ । ತೃತೀಯಾ ಈಕಾರರೂಪಿಣೀ ಅವ್ಯಕ್ತಸ್ವರೂಪಾ ಭವತೀತಿ ಸೀತಾ ಇತ್ಯುದಾಹರಂತಿ ಶೌನಕೀಯೇ ॥ ೬ ॥

ಪ್ರಜಾಪತಿಯು ಸೀತೆಯೆಂದರೆ ಅಂಥವಳು ಎಂದು ಮುಂದೆ ವಿಶೇಷವಾಗಿ ವಿವರಿಸುತ್ತಾ ಸಂಗ್ರಹವಾಗಿ ಉತ್ತರವಿತ್ತನು. ಸೀತಾದೇವಿಯು ಜಗತ್ತಿನ ಮೂಲಪ್ರಕೃತಿ (ಆದಿಕಾರಣ) ಸ್ವರೂಪಳಾದ್ದರಿಂದ ಪ್ರಕೃತಿಯೆಂದು ಜ್ಞಾನಿಗಳಿಂದ ಅರಿಯಲ್ಪಟ್ಟಿರುತ್ತಾಳೆ. ಇಷ್ಟೇ ಅಲ್ಲದೇ ಪ್ರಣವ (ಓಂಕಾರದ) ಪ್ರಕೃತಿ ಸ್ವರೂಪಳೂ ಅವಳೇ ಆಗಿರುವುದರಿಂದಲೂ ಸೀತೆಯು ಪ್ರಕೃತಿ ರೂಪಳೆಂದು ದೃಢಪಡುತ್ತದೆ. ॥ ೨ ॥

ಸೀತಾ ಎಂಬ ಶಬ್ದದಲ್ಲಿ ಸೇರಿದ ಸ್ + ಈ + ತ್ ಕಾರಗಳ ಪ್ರತ್ಯೇಕಾರ್ಥಗಳನ್ನೂ ಸಮಷ್ಟಿ ಅರ್ಥವನ್ನೂ ಈ ಪದ್ಯಗಳು ವಿವರಿಸುತ್ತವೆ. ತ್ರಿವರ್ಣ ಸಮೂಹ ರೂಪವಾದ ಸೀತಾಶಬ್ದದ ಸಮಷ್ಟಿ ಅರ್ಥವು ಬ್ರಹ್ಮವಿದ್ಯೆ ಅಥವಾ ಮಾಯಾ ಎಂಬುದಾಗಿದೆ. ಯಾವದು ವ್ಯಾಕೃತಾ ವ್ಯಾಕೃತ ವ್ಯತಿರಿಕ್ತತತ್ವವನ್ನು ಗೋಚರಮಾಡುವುದೋ ಆ ವಸ್ತುವೆಂದರ್ಥ. ಅಲ್ಲಿ ಇರುವ ಈ ಕಾರಕ್ಕೆ ಪ್ರತ್ಯೇಕವಾಗಿ ಸರ್ವವ್ಯಾಪಕನೂ ಸರ್ವಸಾಕ್ಷಿಯೂ ಸರ್ವಾಂತರ್ಯಾಮಿಯೂ ಆದ ಪರಮಾತ್ಮನೂ, ಈಶ್ವರ ಚೈತನ್ಯಕ್ಕೆ ನಿಯಮ್ಯವಾಗಿ ಪ್ರಪಂಚಕ್ಕೆ ಬೀಜಭೂತವಾದ ಮಾಯೆಯೂ ಅರ್ಥ, ಸಕಾರಕ್ಕೆ ಸತ್ಯಸ್ವರೂಪವೂ ಮರಣಧರ್ಮ ಶೂನ್ಯವೂ ಆದ ತತ್ತ್ವವೂ ಕರ್ಮಜ್ಞಾನ ಭಕ್ತಿಯೋಗಗಳ ಫಲಪ್ರಾಪ್ತಿಯೂ ಉಮಾದೇವಿಯಿಂದ ಸಮೇತನಾದ ಈಶ್ವರನೂ ಅರ್ಥ, ತಕಾರಕ್ಕೆ ತಾರ (ಓಂಕಾರ) ವಿಭೂತಿಯಾದ ಶಬ್ದರಾಶಿಯೂ ತತ್ಸ್ವರೂಪಳಾದ ಸರಸ್ವತಿಯೂ ಅವಳೊಡನೆ ವಿರಾಜಿಸುವ ಬ್ರಹ್ಮದೇವನೂ ಅರ್ಥ, ಹೀಗೆ ಪ್ರತ್ಯೇಕಾರ್ಥಗಳನ್ನೂ, ಸಾಮೂಹಿಕಾರ್ಥವನ್ನೂ ಒಳಗೊಂಡಿರುತ್ತದೆ. ॥ ೩, ೪ ॥

ಕೇವಲ ಈಶ್ವರಾಧೀನವಾದ ಮಹಾಮಾಯೆಯು ತಾನು ಅವ್ಯಕ್ತರೂಪವುಳ್ಳದ್ದಾದರೂ ರಾಮರೂಪನಾದ ಪರಮಾತ್ಮನ ಸಂಕಲ್ಪಮಾತ್ರದಿಂದ ವ್ಯಕ್ತರೂಪದಿಂದ ತೋರುತ್ತಿದೆ. ಈ ಕಾರದಿಂದ ಬೋಧಿಸಲ್ಪಡುವ ವ್ಯಕ್ತಾವಸ್ಥೆಗೆ ಬಂದಾಗ ಚಂದ್ರನಂತೆ ಪ್ರಿಯವಾದ ದರ್ಶನವುಳ್ಳ, ಅಮೃತದಂತೆ ಮನೋಹರ, ನಿರ್ದೋಷಗಳಾದ ಅವಯವಗಳಿಂದ ಕೂಡಿದ, ಪರಮಾತ್ಮನ ಹಾರಾಲಂಕಾರ ಸಮಾನವಾದ ಮುತ್ತಿನ ಆಭರಣಗಳಂತೆ ಪ್ರಕಾಶಿಸುವ ತನ್ನ ವಿವಿಧ ಶಕ್ತಿಗಳಿಂದ ಕೂಡಿದ ರೂಪವುಳ್ಳ ನಾರೀ ರೂಪದಲ್ಲಿ ವ್ಯಕ್ತಳಾಗುವಳು. ॥ ೫ ॥

ಸೀತೆಯ ವ್ಯಕ್ತಾ ವ್ಯಕ್ತ ರೂಪಗಳನ್ನೂ ಪ್ರತ್ಯೇಕಾಕ್ಷರಾರ್ಥವನ್ನೂ ಈ ವಾಕ್ಯಗಳು ತೋರಿಸುತ್ತವೆ. ಶಿಷ್ಟರು ವೇದದ ಸ್ವಸ್ವಶಾಖೆಗಳ ಅಧ್ಯಯನವನ್ನು ಉಪಕ್ರಮಿಸುವಾಗ ಪಠಿಸುವ ಶಬ್ದಬ್ರಹ್ಮರೂಪವಾದ ಓಂಕಾರವೂ ತದಭಿಮಾನಿನಿಯಾದ ಸರಸ್ವತಿಯೂ ಮೊದಲನೆಯ ರೂಪವು. ಪರಮಾತ್ಮನ ಪ್ರಸಾದದಿಂದ ಜ್ಞಾನಿಗಳಿಗೆ ಪ್ರತ್ಯಕ್ಷವಾಗುವ ಬ್ರಹ್ಮಾನಂದ ಸುಖಾತ್ಮಕವಾದ ಕೈವಲ್ಯಲಕ್ಷ್ಮಿಯೂ ಭೂಲೋಕದಲ್ಲಿ ಜನಕನ ಯಜ್ಞಶಾಲಾ ನಿರ್ಮಾಣಕಾಲದಲ್ಲಿ ನೇಗಲಿನ ತುದಿಯಿಂದ ಹುಟ್ಟಿದ ಲಕ್ಷ್ಮೀ

ಶ್ರೀರಾಮಸಾನ್ನಿಧ್ಯವಶಾಜ್ಜಗದಾಧಾರ (ನನ್ದ) ಕಾರಿಣೀ ।
ಉತ್ಪತ್ತಿಸ್ಥಿತಿಸಂಹಾರಕಾರಿಣೀ ಸರ್ವದೇಹಿನಾಮ್ ॥ ೭ ॥
ಸೀತಾ ಭವತಿ ಜ್ಞೇಯಾ ಮೂಲಪ್ರಕೃತಿಸಂಜ್ಞಿತಾ ।
ಪ್ರಣವತ್ವಾತ್ ಪ್ರಕೃತಿರಿತಿ ವದಂತಿ ಬ್ರಹ್ಮವಾದಿನಃ ಇತಿ ॥ ೮ ॥

ಅಥಾತೋ ಬ್ರಹ್ಮಜಿಜ್ಞಾಸೇತಿ ಚ ॥ ೯ ॥

ಸೇಯಂ ಸರ್ವವೇದಮಯೀ ಸರ್ವದೇವಮಯೀ ಸರ್ವಲೋಕಮಯೀ ಸರ್ವಕೀರ್ತಿಮಯೀ ಸರ್ವಧರ್ಮಮಯೀ ಸರ್ವಾಧಾರಕಾರ್ಯಕಾರಣಮಯೀ ಮಹಾಲಕ್ಷ್ಮೀರ್ದೇವೇಶಸ್ಯ ಭಿನ್ನಾಭಿನ್ನರೂಪಾ ಚೇತನಾಚೇತನಾತ್ಮಿಕಾ ಬ್ರಹ್ಮಸ್ಥಾವರಾತ್ಮಾ ತದ್ಗುಣಕರ್ಮವಿಭಾಗ ಭೇದಾಚ್ಛರೀರರೂಪಾ ದೇವರ್ಷಿಮನುಷ್ಯಗಂಧರ್ವರೂಪಾ ಅಸುರರಾಕ್ಷಸ ಭೂತಪ್ರೇತ ಪಿಶಾಚಭೂತಾದಿ ಭೂತಶರೀರರೂಪಾ ಭೂತೇಂದ್ರಿಯಮನಃ ಪ್ರಾಣರೂಪೇತಿ ವಿಜ್ಞಾಯತೇ ॥ ೧೦ ॥

ದೇವಿಯ ಅವತಾರವಾದ ಸೀತಾಸ್ವರೂಪವೂ ಎರಡನೆಯ ರೂಪವು. ಈಕಾರದಿಂದ ಬೋಧ್ಯವಾದ ಅವ್ಯಕ್ತರೂಪವುಳ್ಳ ಗೌರೀಶಕ್ತಿಯು ಮೂರನೇ ರೂಪವು. ಹೀಗೆ ಸರಸ್ವತೀ–ಲಕ್ಷ್ಮೀ–ಗೌರೀ ರೂಪವಾದ ಶಕ್ತಿತ್ರಯಸ್ವರೂಪಳೂ ಕೈವಲ್ಯ ಲಕ್ಷ್ಮೀ ಸ್ವರೂಪಳೂ ಆಗಿರುವಳೆಂದು ಶೌನಕೀಯ ಶಾಖೆಯ ಮಂತ್ರಗಳು ಪ್ರತಿಪಾದಿಸುತ್ತಿವೆ. ॥ ೬ ॥

ಕೈವಲ್ಯ ಶ್ರೀ ರೂಪದಿಂದ ರಾಜಿಸುವ ಪರಮಾತ್ಮನೇ ರಾಮನು. ಪರಮಾತ್ಮನ ಸಾನ್ನಿಧ್ಯದಿಂದ ಪರಮಾತ್ಮನನ್ನೇ ಅಧಿಷ್ಠಾನವಾಗಿಟ್ಟುಕೊಂಡು ಸರ್ವಪ್ರಾಣಿಗಳ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುತ್ತಿರುವ ಮೂಲಪ್ರಕೃತಿಯೇ ಸೀತೆಯು. ಬ್ರಹ್ಮ ವಾದಿಗಳು ಪ್ರಣವ ಪ್ರಕೃತಿರೂಪವನ್ನಾಗಿಯೂ ಇದನ್ನು ಕರೆಯುವರು. ॥ ೭, ೮ ॥

ಬ್ರಹ್ಮಜ್ಞಾನಿಗಳು ಮೇಲೆ ಹೇಳಿದಂತೆ ಉಪದೇಶಿಸುವರಾದ್ದರಿಂದ ಶ್ರುತ್ಯಾ ಚಾರ್ಯೋಪದೇಶದಿಂದ ಬ್ರಹ್ಮಾತಿರಿಕ್ತ ವಸ್ತುವೆಲ್ಲವೂ ಮಿಥ್ಯಾಭೂತವೆಂದು ತಿಳಿದರೂ ಅಜ್ಞಾನಾನುವೃತ್ತಿಯಿಂದ ಸತ್ಯಭೂತವಾಗಿಯೇ ಜಗತ್ತಿನ ಅವಭಾಸವು ತಲೆದೋರುತ್ತಿರುವುದರಿಂದ ಉಪಾಸಕನು ಅದ್ವಿತೀಯ ಬ್ರಹ್ಮಸಾಕ್ಷಾತ್ಕಾರ ಪರ್ಯಂತವೂ ವೇದ ಲೋಕಾದಿ ನಿಖಿಲ ವಸ್ತುಗಳಲ್ಲಿಯೂ ಬ್ರಹ್ಮದೃಷ್ಟಿಯಿಂದ ಧ್ಯಾನವನ್ನಾಚರಿಸಬೇಕು. ॥ ೯ ॥

ಬ್ರಹ್ಮಸಾಕ್ಷಾತ್ಕಾರವಾದ ತರುವಾಯ ಮಿಥ್ಯಾ ಅವಭಾಸಕ್ಕೆ ಬೀಜವಾದ ಮಾಯೆಯು ನಶಿಸುವುದರಿಂದ ಧ್ಯಾನಾದಿ ತ್ರಿಪುಟಿಯೇ ಇಲ್ಲದಂತಾಗಿ ಮುಂದೆ ಯಾವ ಕರ್ತವ್ಯವೂ ಇಲ್ಲವಾದ್ದರಿಂದ ಕೃತ ಕೃತ್ಯನಾಗುವನು. ವೇದ ಲೋಕಾದಿಗಳಿಗೆಲ್ಲ ಬೇರೆ ಬೇರೆಯಾದ ನಾಮರೂಪಗಳಿರುವುದರಿಂದ ಅವುಗಳು ಬ್ರಹ್ಮಾತಿರಿಕ್ತ ವಸ್ತುಗಳಾದರೆ ಅವುಗಳಲ್ಲಿ ಬ್ರಹ್ಮೈಕ್ಯದೃಷ್ಟಿಗೆ ಅವಕಾಶವೆಲ್ಲಿಯದು? ಎಂದು ಶಂಕಿಸಬಾರದು. ವೇದ ಲೋಕಾದಿಗಳೆಲ್ಲವೂ ಕಲ್ಪನಾಮಾತ್ರ ಸಿದ್ಧವಾದ್ದರಿಂದ ಅವುಗಳ ಕಲ್ಪನೆಗೆ ಆಧಾರವಾದ ಬ್ರಹ್ಮಚೈತನ್ಯದ ಸತ್ತಾ–ಸ್ಫೂರ್ತಿಗಳೇ ವಸ್ತುಗಳಲ್ಲಿ ತೋರುತ್ತವೆಯೇ ಹೊರತು ಅವು ಸ್ವತಂತ್ರ ಸತ್ತೆಯನ್ನು ಹೊಂದಿಕೊಂಡಿಲ್ಲ. ಪ್ರಕೃತಿಯೇ ವೇದ, ಲೋಕ, ಕೀರ್ತಿ, ಧರ್ಮ, ಆಧಾರ, ಕಾರ್ಯ, ಕಾರಣ, ಮಹಾಲಕ್ಷ್ಮೀ, ಚೇತನ, ಅಚೇತನ, ಬ್ರಹ್ಮ, ಸ್ಥಾವರ, ದೇವ, ಋಷಿ, ಮನುಷ್ಯ, ಗಂಧರ್ವ, ಅಸುರ, ರಾಕ್ಷಸ, ಭೂತ, ಪ್ರೇತ, ಪಿಶಾಚ, ಭೂತಾದಿ, (ಅಹಂಕಾರ) ಭೂತಶರೀರ, ಇಂದ್ರಿಯ, ಮನಸ್ಸು, ಪ್ರಾಣ ಎಲ್ಲ ರೂಪಗಳನ್ನೂ ಹೊಂದಿದೆ. ಈ ವಿವಿಧವಾದ ನಿರ್ಮಾಣಕ್ಕೆ ಸೃಜ್ಯವಸ್ತುಗಳ ಪೂರ್ವಜನ್ಮಾರ್ಜಿತ ಕರ್ಮಗಳೂ, ಸತ್ವ–ರಜಃ ತಮೋಗುಣಗಳೂ ತಾರತಮ್ಯದಿಂದಿರುವುದೇ ಕಾರಣವು. ಇದರಿಂದ ಶರೀರಭೇದವನ್ನು ಹೊಂದಿ ಪರಮಾತ್ಮನ ಭೇದಾ ಭೇದಾಂಶಗಳಿಂದ ತೋರುತ್ತಿದೆ ಎಂದು ಉಪನಿಷತ್ತಿನ ಸಿದ್ಧಾಂತವು. ॥ ೧೦ ॥

ಸಾ ದೇವೀ ತ್ರಿವಿಧಾ ಭವತಿ ಶಕ್ತ್ಯಾತ್ಮನಾ ಇಚ್ಛಾಶಕ್ತಿಃ ಕ್ರಿಯಾಶಕ್ತಿಃ ಸಾಕ್ಷಾಚ್ಛಕ್ತಿರಿತಿ ॥ ೧೦ ॥

ಇಚ್ಛಾಶಕ್ತಿಸ್ತ್ರಿವಿಧಾ ಭವತಿ ಶ್ರೀ ಭೂಮಿನೀಲಾಽಽತ್ಮಿಕಾ ಭದ್ರರೂಪಿಣೀ ಪ್ರಭಾವರೂಪಿಣೀ ಸೋಮಸೂರ್ಯಾಗ್ನಿರೂಪಾ ಭವತಿ ॥ ೧೨ ॥

ಸೋಮಾತ್ಮಿಕಾ ಓಷಧೀನಾಂ ಪ್ರಭವತಿ ಕಲ್ಪವೃಕ್ಷಪುಷ್ಪ ಫಲಲತಾ ಗುಲ್ಮಾತ್ಮಿಕಾ ಔಷಧಭೇಷಜಾತ್ಮಿಕಾ ಅಮೃತರೂಪಾ ದೇವಾನಾಂ ಮಹಃ ಸ್ತೋಮಫಲಪ್ರದಾ ಅಮೃತೇನ ತೃಪ್ತಿಂಜನಯಂತೀ ದೇವನಾಮನ್ನೇನ ಪಶೂನಾಂ ತೃಣೇನ ತತ್ತಜ್ಜೀವಾನಾಮ್ ॥ ೧೩ ॥

ಸೂರ್ಯಾದಿಸಕಲಭುವನಪ್ರಕಾಶಿನೀ ದಿವಾ ರಾತ್ರಿಃ ಕಾಲಕಲಾ ನಿಮೇಷಮಾರಭ್ಯ ಘಟಿಕಾಽಷ್ಟಯಾಮದಿವಸ ವಾರರಾತ್ರಿ ಭೇದೇನ ಪಕ್ಷ ಮಾಸರ್ತ್ವಯನ ಸಂವತ್ಸರಭೇದೇನ ಮನುಷ್ಯಾಣಾಂ ಶತಾಯುಃ ಕಲ್ಪ ನಯಾ ಪ್ರಕಾಶಮಾನಾ ಚಿರಕ್ಷಿಪ್ರವ್ಯಪದೇಶಾ ನಿಮೇಷಮಾರಭ್ಯ ಪರಾರ್ಧ ಪರ್ಯಂತಂ ಕಾಲಚಕ್ರಂ ಜಗಚ್ಚಕ್ರಮಿತ್ಯಾದಿ ಪ್ರಕಾರೇಣ ಚಕ್ರವತ್ ಪರಿವರ್ತಮಾನಾ ಸರ್ವಸ್ಯೈತಸ್ಯೈವ ಕಾಲಸ್ಯವಿಭಾಗವಿಶೇಷಾಃ ಪ್ರಕಾಶ ರೂಪಾಃ ಕಾಲರೂಪಾ ಭವಂತಿ ॥ ೧೪ ॥

ದೇವಿಯು ತತ್ತ್ವಜ್ಞಾನಿಗಳ ದೃಷ್ಟಿಗೆ ಸರ್ವಾತ್ಮಕಳಾಗಿ ಗೋಚರಿಸುವಳು. ತತ್ತ್ವಜ್ಞಾನ ಶೂನ್ಯರಾದ ಪರಿಚ್ಛಿನ್ನಾಲ್ಪವಸ್ತುಜ್ಞರ ದೃಷ್ಟಿಗೆ ಅನೇಕ ಶಕ್ತಿರೂಪ ಗಳಿಂದ ವಿವಿಧವಾಗಿ ಕಾಣಿಸುವಳು. ಆದ್ದರಿಂದಲೇ ಶಕ್ತಿರೂಪದಿಂದ ಮೂರು ವಿಧ ಳಾಗಿರುವಳು. ಆ ಶಕ್ತಿಗಳು ಇಚ್ಛಾಶಕ್ತಿ, ಕ್ರಿಯಾಶಕ್ತಿ, ಸಾಕ್ಷಾಚ್ಛಕ್ತಿ-ಅಥವಾ ಜ್ಞಾನಶಕ್ತಿ ಎಂದು ಮೂರು ಬಗೆಗಳಾಗಿವೆ. ‖ ೧೧ ‖

ಇವುಗಳಲ್ಲಿ ಇಚ್ಛಾಶಕ್ತಿಯು ವಿಷ್ಣುಪತ್ನಿಯರಾದ ಶ್ರೀ ದೇವಿ, ಭೂಮಿದೇವಿ, ನೀಲಾದೇವಿಯರ ಸ್ವರೂಪಗಳಿಂದ ಮೂರು ವಿಧವಾಗಿ ಶ್ರೀ ದೇವಿಯ ರೂಪದಿಂದ ಭದ್ರ ರೂಪಿಣಿಯೆಂದೂ ಭೂಮಿದೇವಿಯ ರೂಪದಿಂದ ಪ್ರಭಾವರೂಪಿಣಿಯೆಂದೂ, ನೀಲಾ ದೇವಿಯ ರೂಪದಿಂದ ಸೋಮಸೂರ್ಯ ಅಗ್ನಿಯೆಂಬ ತೇಜಸ್ತ್ರಯ ರೂಪಿಣಿ ಯೆಂದೂ ಪ್ರಕಾಶಿಸುವಳು, ಒಂದೇ ಶಕ್ತಿಯ ಅನೇಕಾಂಶಗಳು ಸ್ಥೂಲಾಕಾರವನ್ನು ಧರಿಸಿ ವಿಷ್ಣುಪತ್ನಿಯರೆನಿಸಿಕೊಂಡಿದ್ದರೂ ಸೂಕ್ಷ್ಮರೂಪದಿಂದ ವಿಭೂತಿಯುಳ್ಳ ದಿವ್ಯ ವಸ್ತುಗಳನ್ನು ಆಶ್ರಯಿಸಿ ಕಲ್ಯಾಣ-ಪ್ರಭಾವ-ತೇಜಃ ಕರಸ್ವರೂಪವುಳ್ಳವುಗಳೂ ಆಗಿವೆ. ‖ ೧೨ ‖

ನೀಲಾ ದೇವಿಯ ಸೋಮರೂಪವು ಪ್ರಪಂಚದಲ್ಲಿ ಹುಟ್ಟಿ ಬೆಳೆಯುವ ಕಲ್ಪ ವೃಕ್ಷ–ಲತಾ–ವೃಕ್ಷಾದಿ ನಾನಾವಿಧ ಸ್ಥಾವರಗಳಿಗೆ ಮತ್ತು ಓಷಧಿಗಳಿಗೆ ಪುಷ್ಟಿಯನ್ನು ಕೊಟ್ಟು, ಆರೋಗ್ಯಕರವಾದ ಔಷಧಗಳನ್ನು ನಿರ್ಮಿಸಿ ತನ್ಮೂಲಕವಾಗಿ ಚಿಕಿತ್ಸಕರ ಉಪಕಾರವನ್ನು ಲೋಕಕ್ಕೆ ದೊರಕಿಸಿ, ಪರಾಪರ (ಸಗುಣ ನಿರ್ಗುಣ) ವಿದ್ಯಾಧ್ಯಾನಾ ಸಕ್ತರಿಗೆ ತತ್ತದುಪಾಸನಾ ಫಲಗಳನ್ನು ಕೊಟ್ಟು ದೇವ–ಪಶು–ಇತರ ಜೀವರಿಗೆಲ್ಲ ಉಚಿತವಾದ ಅಮೃತ, ಹುಲ್ಲು, ಅನ್ನ ಆದಿಯಾದ ಆಹಾರವನ್ನು ಕೊಡುತ್ತಾ ಲೋಕ ಯಾತ್ರಾನಿರ್ವಾಹಕವಾಗಿರುತ್ತದೆ. ‖ ೧೩ ‖

ಇನ್ನೊಂದು ನೀಲಾದೇವಿಯ ರೂಪವಾದ ಸೂರ್ಯನು ಎಲ್ಲ ಪ್ರಪಂಚವನ್ನು ಬೆಳಗುವ ತೇಜೋಮಂಡಲದಲ್ಲಿದ್ದವನಾಗಿ ಹಗಲು, ರಾತ್ರಿ ಕಲಾ ಕಾಷ್ಠಾ ನಿಮೇಷ ಮುಂತಾದ ಸೂಕ್ಷ್ಮಕಾಲಗಳು ಘಳಿಗೆ ಎಂಟು ಯಾಮಗಳಿಂದ ಕೂಡಿದ ದಿವಸ ವಾರ ಪಕ್ಷ ಮಾಸ, ಋತು, ಅಯನ ಸಂವತ್ಸರ ಮುಂತಾದ ಉತ್ತರೋತ್ತರ ಸ್ಥೂಲ ವಾದ ಮಾನವುಳ್ಳ ಕಾಲಗಳ ಪರಿಣಾಮವನ್ನು ಮಾಡುತ್ತಾ ಮನುಷ್ಯರ ಶತಾಯುಃ ಪರಿಮಾಣವನ್ನು ಸೂಚಿಸುತ್ತಾ ಪ್ರಕಾಶಿಸುವನು, ಮತ್ತು ನಿಮಿಷ ವೊದಲಾಗಿ ಪರಾರ್ಧಪರ್ಯಂತವಾದ ಉಪಾಧಿಯಿಂದ ಕಾಲಚಕ್ರವೆನಿಸುವನು. ಚಕ್ರದಂತೆ ಸಂತತವಾಗಿ ಭ್ರಮಿಸುತ್ತಿರುವುದರಿಂದ ಕಾಲಚಕ್ರವೆಂಬ ಹೆಸರು, ವಸ್ತುತಃ ಪ್ರತಿ ಯೊಂದು ವಸ್ತುವನ್ನೂ ಒಂದವಸ್ಥೆಯಿಂದ ಮತ್ತೊಂದು ಅವಸ್ಥೆಗೆ ಒಯ್ಯುತ್ತಿರು ವುದರಿಂದ ಈಶ್ವರತತ್ತ್ವವೇ ಕಲನಾತ್ಕಾಲಃ ಎಂದು ಕರೆಯಲ್ಪಡುವುದು. ಆದ್ದರಿಂದ

ಅಗ್ನಿರೂಪಾ ಅನ್ನಪಾನಾದಿ ಪ್ರಾಣಿನಾಂ ಕ್ಷುತ್ತೃಷ್ಣಾಽಽತ್ಮಿಕಾ ದೇವಾನಾಂ ಮುಖರೂಪಾ ವನೌಷಧೀನಾಂ ಶೀತೋಷ್ಣರೂಪಾ ಕಾಷ್ಠೇಷ್ವಂತರ್ಬಹಿಶ್ಚ ನಿತ್ಯಾನಿತ್ಯರೂಪಾ ಭವತಿ ॥ ೧೫ ॥

ಶ್ರೀದೇವೀ ತ್ರಿವಿಧಂ ರೂಪಂ ಕೃತ್ವಾ ಭಗವತ್ಸಂಕಲ್ಪಾನುಗುಣ್ಯೇನ ಲೋಕರಕ್ಷಣಾರ್ಥಂ ರೂಪಂ ಧಾರಯತಿ ಶ್ರೀರಿತಿ ಲಕ್ಷ್ಮೀರಿತಿ ಲಕ್ಷ್ಯಮಾಣಾ ಭವತೀತಿ ವಿಜ್ಞಾಯತೇ ॥ ೧೬ ॥

ಭೂದೇವೀ ಸಸಾಗರಾಂಭಃಸಪ್ತದ್ವೀಪಾ ವಸುಂಧರಾ ಭೂರಾದಿಚತುರ್ದಶಭುವನಾನಾಂ ಆಧಾರಾಧೇಯಾ ಪ್ರಣವಾತ್ಮಿಕಾ ಭವತಿ ॥ ೧೭ ॥

ನೀಲಾಚ ವಿದ್ಯುನ್ಮಾಲಿನೀ ಸರ್ವೌಷಧೀನಾಂ ಸರ್ವಪ್ರಾಣಿನಾಂ ಪೋಷಣಾರ್ಥಂ ಸರ್ವರೂಪಾ ಭವತಿ ॥ ೧೮ ॥

ಸಮಸ್ತಭುವನಸ್ಯಾಧೋಭಾಗೇ ಜಲಾಕಾರಾತ್ಮಿಕಾ ಮಂಡೂಕಮಯೇತಿ ಭುವನಾಧಾರೇತಿ ವಿಜ್ಞಾಯತೇ ॥ ೧೯ ॥

ಜಗತ್ತೆಲ್ಲವೂ ಕಾಲಾಧೀನವಾಗಿ ನಡೆಯುತ್ತಿರುವುದರಿಂದ ಸೂರ್ಯನಿಯಮ್ಯವಾದ ಕಾಲಕ್ಕೆ ಜಗಚ್ಚಕ್ರವೆಂದೂ ಹೆಸರಿದೆ. ಕಾಲಗತಿಯಿಂದಲೇ ಚಿರವೆಂದರೆ ಬಹುಕಾಲ ವೆಂದೂ ಕ್ಷಿಪ್ರವೆಂದರೆ ಶೀಘ್ರಕಾಲವೆಂದೂ ವ್ಯವಹಾರವು. ಚಿರಕ್ಷಿಪ್ರವ್ಯವಹಾರವು ಚಿರಂ+ರಕ್ಷತಿ ಎಂದರೆ ಕಲ್ಪಿತವಾದ ದ್ವೈತಜಾಲವನ್ನು ಸಚ್ಚಿದಾನಂದಾಂಶಗಳಿಂದ ವ್ಯಾಪಿಸಿ ಸತ್ತಾಸ್ಫೂರ್ತಿಗಳನ್ನು ಕೊಟ್ಟು ರಕ್ಷಿಸುವಂತಹ ಬ್ರಹ್ಮಚೈತನ್ಯ ವಸ್ತುವನ್ನೂ ಸೂಕ್ಷ್ಮವಾಗಿ ಸೂಚಿಸುತ್ತಿದೆ, ಈ ರೀತಿಯಾಗಿ ಕಾಲಾತ್ಮಕನಾದ ಈಶ್ವರನ ಶಕ್ತಿ ವಿಶೇಷಗಳೇ ಸ್ವಯಂಪ್ರಕಾಶರೂಪವಾಗಿಯೂ ಅಜ್ಞರಿಂದ ಜಡತ್ವ-ನಾನಾತ್ವ ವುಳ್ಳದ್ದೆಂದು ಕಲ್ಪಿಸಲ್ಪಟ್ಟಿರುವುದರಿಂದ ಕಾಲರೂಪಗಳಾಗಿಯೂ ಇರುತ್ತವೆ. ॥ ೧೪॥

ಮೂರನೆಯದಾದ ನೀಲಾದೇವಿಯ ಅಗ್ನಿರೂಪವು ಪ್ರಾಣಿಗಳಿಗೆ ಹಸಿವು ನೀರಡಿಕೆ ಎಂಬ ವಿಕಾರಗಳು ಹುಟ್ಟುವಂತೆ ಅತ್ತೃ-ಮತ್ತು ಅಧ್ಯ ಅಥವಾ ಭೋಕ್ತೃ ಭೋಜ್ಯಗಳ ರೂಪವಾಗಿಯೂ, ದೇವತೆಗಳಿಗೆ ಸಲ್ಲಬೇಕಾದ ಯಜ್ಞಾದಿ ಕರ್ಮಗಳಲ್ಲಿ ಕರ್ಮಯೋಗಿಗಳಿಂದ ಅಗ್ನಿಯಲ್ಲಿ ಹೋಮಮಾಡಲ್ಪಟ್ಟ ಹವಿಸ್ಸನ್ನು ಒಯ್ಯುವುದ ರಿಂದ ಮುಖರೂಪವಾಗಿಯೂ, ವನ, ಔಷಧಿಗಳ ಪುಷ್ಟಿಗೆ ಬೇಕಾದ ಶೀತ ಉಷ್ಣರೂಪ ವಾಗಿಯೂ, ಕಾಷ್ಠಗಳಲ್ಲಿ ಸೂಕ್ಷ್ಮರೂಪದಿಂದ ಒಳಭಾಗದಲ್ಲಿಯೂ ವ್ಯಕ್ತರೂಪದಿಂದ ಜ್ವಾಲಾಕಾರವಾಗಿ ಹೊರಭಾಗದಲ್ಲಿಯೂ ಪ್ರವೇಶಿಸಿರುವುದಾಗಿಯೂ ಚೈತನ್ಯ ಜಡರೂಪಗಳಿಂದ ನಿತ್ಯವೂ ಅನಿತ್ಯವೂ ಆಗಿರುವುದು. ॥ ೧೫ ॥

ಪರಮಾತ್ಮನ ಪಾರಮಾರ್ಥಿಕವಾದ ಚಿಚ್ಛಕ್ತಿಯು ಲೋಕರಕ್ಷಣೆಗೋಸ್ಕರ ಶ್ರೀ-ಭೂ-ನೀಲಾ ಎಂಬ ತ್ರಿವಿಧರೂಪವನ್ನು ಆಶ್ರಯಿಸುವುದರಿಂದ ಶ್ರೀದೇವಿಯೆಂದೂ ಆ ರೀತಿಯೇ ಜ್ಞಾನಿಗಳ ದೃಷ್ಟಿಗೆ ಲಕ್ಷ್ಯಳಾಗುವುದರಿಂದ ಲಕ್ಷ್ಮೀದೇವಿಯೆಂದೂ ಅರಿಯಲ್ಪಡುತ್ತಾಳೆ. ॥ ೧೬ ॥

ಭೂದೇವಿಯು ಸಪ್ತಸಮುದ್ರ-ದ್ವೀಪಗಳಿಂದ ಕೂಡಿದ, ನಾವೆಲ್ಲರೂ ವಾಸಿಸುವ ಭೂಮಿರೂಪಳಾಗಿಯೂ "ಭೂಃ-ಭುವಃ" ಮುಂತಾದ ಊರ್ಧ್ವ ಭಾಗದ ಸಪ್ತ ಲೋಕಗಳಿಗೂ "ಅತಲ-ವಿತಲಾ" ದಿ ಅಧೋಭಾಗದ ಸಪ್ತಲೋಕಗಳಿಗೂ ಚಿಚ್ಛಕ್ತಿ ರೂಪದಿಂದ ಆಧಾರ ಆಧೇಯ ಉಭಯ ರೂಪಳಾಗಿಯೂ ಸ್ವಸ್ವರೂಪದಿಂದ ಪ್ರಣವ ರೂಪಿಣಿಯೂ ಆಗಿರುವಳು. ॥ ೧೭ ॥

ನೀಲಾದೇವಿಯು ಸರ್ವತೋಮುಖಳಾಗಿ ವಿದ್ಯುನ್ಮಾಲಿನೀ ರೂಪಳಾಗಿದ್ದು ಸರ್ವ ಔಷಧಿಗಳ ಮತ್ತು ಪ್ರಾಣಿಗಳ ರಕ್ಷಣಕ್ಕೋಸ್ಕರ ಸರ್ವರೂಪಳಾಗಿರುವಳು. ॥ ೧೮ ॥

ಸಕಲ ಭುವನಗಳ ಅಧೋಭಾಗದಲ್ಲಿ ಜಲಾಕಾರದ ಮಂಡೂಕ ರೂಪವುಳ್ಳವ ಳಾಗಿ ಭುವನಾಧಾರ ರೂಪಳಾಗಿರುವಳೆಂದು ತಿಳಿಯುತ್ತದೆ. ॥ ೧೯ ॥

ಕ್ರಿಯಾಶಕ್ತಿಸ್ವರೂಪಂ ಹರೇರ್ಮುಖಾನ್ನಾದಃ ತನ್ನಾದಾದ್ಬಿಂದೋರೋಙ್ಕಾರಃ ಓಂಕಾರಾತ್ಪರತೋ ರಾಮವೈಖಾನಸಪರ್ವತಃ ತೇಕರ್ಮಜ್ಞಾನಮಯೀಭಿರ್ಬಹುಶಾಖಾ ಭವಂತಿ ॥ ೨೦ ॥

ತತ್ರ ತ್ರಯೀಮಯಂ ಶಾಸ್ತ್ರಮಾದ್ಯಂ ಸರ್ವಾರ್ಥದರ್ಶನಮ್ ।
ಋಗ್ಯಜುಃಸಾಮರೂಪತ್ವಾತ್ ತ್ರಯೀತಿ ಪರಿಕೀರ್ತಿತಾ ॥ ೨೧ ॥

ಹೇತುನಾ ಕಾರ್ಯಸಿದ್ಧೇನ ಚತುರ್ಧಾ ಪರಿಕೀರ್ತಿತಾ ।
ಋಚೋ ಯಜೂಂಷಿ ಸಾಮಾನಿ ಅಥರ್ವಾಂಗಿರಸಸ್ತಥಾ ॥ ೨೨

ಇಚ್ಛಾಶಕ್ತಿಯ ಸ್ವರೂಪವನ್ನು ವಿವರಿಸಿದ ತರುವಾಯ ಕ್ರಿಯಾಶಕ್ತಿಯ ಸ್ವರೂಪವನ್ನು ಈ ವಾಕ್ಯವು ವಿವರಿಸುವದು. ಯಾವ ಶಕ್ತಿಯು ಎಲ್ಲವನ್ನೂ ಮಾಡುವುದೋ ಅದೇ ಕ್ರಿಯಾಶಕ್ತಿಯು. ಅದು ಪರಮಾತ್ಮ ಸ್ವರೂಪವೇ ಆಗಿರುವುದು. ಸೃಷ್ಟಿಯ ಆದಿಯಲ್ಲಿ ಸ್ವಾತ್ಮರೂಪದಲ್ಲಿ ಶಕ್ತಿಯನ್ನು ಅಡಗಿಸಿಕೊಂಡು, ಸಕಲವನ್ನೂ ತನ್ನಲ್ಲಿ ಲಯಪಡಿಸಿ ಅದ್ವಿತೀಯನಾಗಿರುವ ಆತ್ಮನೇ ದ್ವಿತೀಯ ವಸ್ತುವನ್ನು ಹರಣ ಮಾಡಿದ್ದರಿಂದ ಹರಿ ಎಂದೆನಿಸುವನು. ಅಂತಹ ಹರಿಯ ಮುಖದಿಂದ ವೈಖರೀ ರೂಪವಾದ ಸ್ಥೂಲಶಬ್ದೋತ್ಪತ್ತಿಗೆ ಕಾರಣವಾದ ಅವ್ಯಕ್ತನಾದವೂ, ಅದರಿಂದ ಮಹತ್ತತ್ವ ಅಥವಾ ಬಿಂದುತತ್ವವೂ, ಬಿಂದುವಿನಿಂದ ಅಹಂಕಾರ ಅಥವಾ ಓಂಕಾರವೂ ಅದರಿಂದ ಭೂತಭೌತಿಕಾದಿ ಸೃಷ್ಟಿಯೂ ಆಗುವುದು. ಈ ಭೂತಭೌತಿಕಗಳೆಂಬ ಸೃಜ್ಯವಸ್ತುಗಳಿಗೆ ವಿಲಕ್ಷಣವಾದ ಪರಮಾತ್ಮ ತತ್ವವು ವೈಖಾನಸಾದಿ ಆಶ್ರಮಿಗಳಿಗೆ ಅವಲಂಬನವಾದ್ದರಿಂದ ಪರ್ವತರೂಪವಾಗಿಯೂ ರಾಮ ಮುಂತಾದ ದಿವ್ಯನಾಮಧೇಯಾಲಂಕೃತವಾಗಿಯೂ ಇರುವುದು. ಅಂತಹ ಪರಮಾತ್ಮನಲ್ಲಿ ಕರ್ಮ-ಉಪಾಸನಾ-ಭಕ್ತಿ-ಜ್ಞಾನಗಳೆಂಬ ವಿವಿಧ ಮಾರ್ಗಗಳನ್ನು ಉಪಾಸಕರಿಗೆ ಪ್ರತಿಪಾದಿಸುವ ಋಕ್, ಯಜುಃ, ಸಾಮ, ಅಥರ್ವಗಳೆಂಬ ಚತುರ್ವೇದಗಳೂ ಒಂದೊಂದೂ ಅನೇಕ ಶಾಖೆಗಳಿಂದೆ ವಿಭಕ್ತಗಳಾಗಿ ಪ್ರಕಾಶಿಸುತ್ತವೆ. "ಅಸ್ಯಮಹತೋಭೂತಸ್ಯ ನಿಶ್ವಸಿತಮೇತದ್ಯ ದೃಗ್ವೇದಃ" ಇತ್ಯಾದಿ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಹೇಳಿರುವಂತೆ ಕಾರಣಭೂತನಾದ ಪರಮಾತ್ಮನಲ್ಲಿ ಸಕಲ ಪರಾಪರವಿದ್ಯೆಗಳೂ ಅಡಗಿಕೊಂಡಿರುತ್ತವೆ. || ೨೦ ||

ಪರಾಪರ ವಿಭಾಗವನ್ನೊಳಗೊಂಡ ಸಕಲ ವಿದ್ಯೆಗಳನ್ನೂ ಕೆಲವು ಪದ್ಯಗಳು ವಿವರಿಸುತ್ತವೆ. ಈ ವಿದ್ಯೆಗಳಲ್ಲಿ ಕರ್ಮ ಮುಂತಾದ ಸಕಲ ಯೋಗಗಳನ್ನೂ ಪ್ರಕಾಶಪಡಿಸುವ ಋಗ್ವೇದ-ಯಜುರ್ವೇದ ಸಾಮವೇದಗಳು ಮೊದಲನೆಯ ಶಾಸ್ತ್ರವು. ಇದು ಋಗ್ವೇದಾದಿ ವೇದತ್ರಯ ರೂಪವಾದ್ದರಿಂದ ತ್ರಯೀ ಎಂಬದಾಗಿ ಹೇಳಲ್ಪಟ್ಟಿರುತ್ತದೆ. || ೨೧ ||

ಋಗ್ವೇದಾದಿಗಳಿಗೆ ತ್ರಯೀ ಎಂಬ ಹೆಸರು ಹಿಂದೆ ಹೇಳಲ್ಪಟ್ಟಿದೆ. ಅಥರ್ವವೇದದ ಮಂತ್ರಭಾಗಗಳೆಲ್ಲವೂ ಅವುಗಳಲ್ಲಿಯೇ ಸೇರಿವೆ. ಆದರೂ ಅಥರ್ವವೇದದ ಪ್ರತಿಪಾದ್ಯ ವಿಷಯಗಳು ಸಾಮಾನ್ಯವಾಗಿ ಇತರ ವೇದಗಳಲ್ಲಿರುವಂತೆ ಇಲ್ಲದೆ ಅಭಿಚಾರಾದಿ ರೂಪವಾಗಿ ವಿಲಕ್ಷಣಗಳಾಗಿರುತ್ತವೆ. ಆದ್ದರಿಂದಲೇ ಹೋತಾ-ಅಧ್ವರ್ಯು-ಉದ್ಗಾತಾ ಎಂಬ ಋಗ್ವೇದ ಯಜುರ್ವೇದ ಸಾಮವೇದಗಳನ್ನು ಬಲ್ಲ ಋತ್ವಿಜರು ಯಾಗಗಳಲ್ಲಿ ಇದ್ದರೂ ಅಥರ್ವವೇದಾಭಿಜ್ಞನ ಆವಶ್ಯಕತೆಯಿಲ್ಲ. ಅದು ವಿಲಕ್ಷಣವಾಗಿರುವುದರಿಂದ ಅದನ್ನು ಬೇರೆಯಾಗಿ ಗಣನೆಮಾಡಿ ನಾಲ್ಕಾಗಿಯೂ ವೇದಗಳನ್ನು ಹಠಿಸುವರು. || ೨೨ ||

ಚಾತುರ್ಹೋತ್ರಪ್ರಧಾನತ್ವಾಲ್ಲಿಂಗಾದಿತ್ರಿತಯಂ ತ್ರಯೀ।
ಅಥರ್ವಾಂಗಿರಸಂ ರೂಪಂ ಸಾಮಋಗ್ಯಜುರಾತ್ಮಕಮ್ ॥ ೨೩ ॥
ತಥಾದಿಶಂತ್ಯಾಭಿಚಾರಸಾಮಾನ್ಯೇನ ಪೃಥಕ್ ಪೃಥಕ್ ।
ಏಕವಿಶಂತಿಶಾಖಾಯಾಮೃಗ್ವೇದಃ ಪರಿಕೀರ್ತಿತಃ ॥ ೨೪ ॥
ಶತಂ ಚ ನವ ಶಾಖಾಸು ಯಜುಷಾಮೇವ ಜನ್ಮನಾಮ್ ।
ಸಾಮ್ನಃ ಸಹಸ್ರಶಾಖಾಃ ಸ್ಯುಃ ಪಂಚ ಶಾಖಾ ಅಥರ್ವಣಃ ॥ ೨೫ ॥

ವೈಖಾನಸಮತಂ ತಸ್ಮಿನ್ನಾದೌ ಪ್ರತ್ಯಕ್ಷದರ್ಶನಮ್ ।
ಸ್ಮರ್ಯತೇ ಮುನಿಭಿರ್ನಿತ್ಯಂ ವೈಖಾನಸಮತಃ ಪರಮ್ ॥ ೨೬ ॥

ಕಲ್ಪೋ ವ್ಯಾಕರಣಂ ಶಿಕ್ಷಾ ನಿರುಕ್ತಂ ಜ್ಯೋತಿಷಂ ಛಂದಃ ಏತಾನಿ
ಗಾನಿ ॥ ೨೭ ॥

ಉಪಾಂಗಮಯನಂ ಚೈವ ಮೀಮಾಂಸಾ ನ್ಯಾಯವಿಸ್ತರಃ ।
ಧರ್ಮಜ್ಞಸೇವಿತಾರ್ಥಂ ಚ ವೇದವೇದೋಽಧಿಕಂ ತಥಾ ॥ ೨೮ ॥
ನಿಬಂಧಾಃ ಸರ್ವಶಾಖಾ ಚ ಸಮಯಾಚಾರಸಂಗತಿಃ ।
ಧರ್ಮಶಾಸ್ತ್ರಂ ಮಹರ್ಷೀಣಾಮಂತಃಕರಣಸಂಭೃತಮ್ ।
ಇತಿಹಾಸಪುರಾಣಾಖ್ಯಮುಪಾಂಗಶ್ಚ ಪ್ರಕೀರ್ತಿತಃ ॥ ೨೯ ॥

ವಾಸ್ತುವೇದೋ ಧನುರ್ವೇದೊ ಗಾಂಧರ್ವೋ ದೈವಿಕಸ್ತಥಾ ।
ಆಯುರ್ವೇದಶ್ಚ ಪಂಚೈತೇ ಉಪವೇದಾಃ ಪ್ರಕೀರ್ತಿತಾಃ ॥ ೩೦ ॥

ಋಗ್ವೇದ-ಯಜುರ್ವೇದ-ಸಾಮವೇದಗಳನ್ನು ಪ್ರತ್ಯೇಕವಾಗಿ ಅರಿತಿರುವ ಮೂರು ಜನ ಋತ್ವಿಜರೂ ಮತ್ತು ಸರ್ವವಿದ್ಯಾ ಅಭಿಜ್ಞನಾದ ಬ್ರಹ್ಮಾ ಎಂಬ ಋತ್ವಿಜನೂ ಸೇರಿ ಚಾತುರ್ಹೋತ್ರ ಪ್ರಾಧಾನ್ಯದಿಂದ ಆ ವೇದತ್ರಯಕ್ಕೆ ತ್ರಯೀ ಎಂಬ ಹೆಸರು ಬಂದಿದೆ. ಶಾಂತಿ, ಪುಷ್ಟಿ, ಅಭಿಚಾರಗಳನ್ನು ಉಂಟುಮಾಡುವ ಕರ್ಮಗಳನ್ನು ವಿಧಿಸುವುದರಿಂದ ಅಥರ್ವ ವೇದವನ್ನು ಪ್ರತ್ಯೇಕಿಸಿ ಲೆಕ್ಕಿಸುತ್ತಾರೆ. ಆದರೆ ಕರ್ಮ ಕಾಂಡ ಜ್ಞಾನಕಾಂಡಗಳನ್ನು ಪ್ರಕಾಶಗೊಳಿಸುವ ಸಾಮಾನ್ಯ ರೂಪವು ಎಲ್ಲ ವೇದ ಗಳಲ್ಲಿಯೂ ಇದೆ. ಚತುರ್ವೇದಗಳಲ್ಲಿ ಒಂದೊಂದರಲ್ಲಿಯೂ ಅನೇಕ ಶಾಖೆಗಳು ಸೇರಿವೆ. ಋಗ್ವೇದದಲ್ಲಿ ಇಪ್ಪತ್ತೊಂದು, ಯಜುರ್ವೇದದಲ್ಲಿ ಒಂದುನೂರ ಒಂಭತ್ತು, ಸಾಮವೇದದಲ್ಲಿ ಸಾವಿರ, ಅಥರ್ವವೇದದಲ್ಲಿ ಐದು, ಈ ರೀತಿ ಶಾಖೆಗಳು ಇವೆ. || ೨೩, ೨೪, ೨೫ ||

ಈ ವೇದಗಳ ಅರ್ಥವನ್ನು ವಿವರಿಸಲು ವೈಖಾನಸ ಮುನಿಯಿಂದ ನಿರ್ಮಿಸ ಲ್ಪಟ್ಟು, ವೇದಾರ್ಥಗಳುನ್ನ ಪ್ರತ್ಯಕ್ಷವಾದಂತೆ ಸ್ಪಷ್ಟಪಡಿಸುವ ಸೂತ್ರಜಾಲವು ಇರು ವುದು. ಇದರ ಆಧಾರದಿಂದ ಇತರಾನೇಕ ಮಹರ್ಷಿಗಳು ಸೂತ್ರಸ್ಮೃತಿ ರೂಪವಾಗಿ ವೈಖಾನಸಮತವನ್ನು ವಿಶದಪಡಿಸಿರುತ್ತಾರೆ. || ೨೬ ||

ಈ ವೇದಗಳಿಗೆ ಕಲ್ಪ, ವ್ಯಾಕರಣ, ಶಿಕ್ಷಾ, ನಿರುಕ್ತಾ, ಜ್ಯೋತಿಷ, ಛಂದಸ್ಸು ಎಂಬ ಷಡಂಗಗಳು ಅರ್ಥಪ್ರಕಾಶನದಲ್ಲಿ ಅತ್ಯಂತೋಪಕಾರಕಗಳಾಗಿವೆ. || ೨೭ ||

ಅಯನಂ ಎಂದರೆ ಸರ್ವ ವಿದ್ಯೆಗಳ ಪರ್ಯವಸಾನ ಭೂಮಿಯಾದ ವೇದಾಂತ ಶಾಸ್ತ್ರವೂ, ಜೈಮಿನಿ ಋಷಿ ಪ್ರಣೀತ ಮೀಮಾಂಸಾ ಶಾಸ್ತ್ರವೂ ಕಣಾದ-ಗೌತಮ ಮುನಿಗಳ ತರ್ಕ ಶಾಸ್ತ್ರವೂ, ಧರ್ಮಜ್ಞರಾದ ಮನ್ವಾದಿಗಳಿಂದ ರಚಿಸಲ್ಪಟ್ಟ ಕರ್ಮಕಾಂಡ, ಅದಕ್ಕೂ ಹೆಚ್ಚಾದ ಉಪಾಸನಾಕಾಂಡ ಗ್ರಂಥವೂ ನಿಬಂಧಗ್ರಂಥ ವೆಂಬ ನೀತಿಶಾಸ್ತ್ರವೂ, ಸರ್ವಶಾಖೆಗಳೂ, ಸಮಯಾಚಾರ ಅಥವಾ ವೃದ್ಧಸಂಪ್ರ ದಾಯಾನುಸಾರಿಯಾದ ಗ್ರಂಥಗಳೂ, ಮಹಾಮುನಿಗಳ ಪವಿತ್ರಾಂತಃಕರಣಕ್ಕೆ ಒಪ್ಪಿದ ಆಚಾರವನ್ನು ಪ್ರತಿಪಾದಿಸುವ ಧರ್ಮಶಾಸ್ತ್ರವೂ, ಭಾರತ ಮೊದಲಾದ ಇತಿಹಾಸ ಪುರಾಣ ಗ್ರಂಥಗಳೂ ಉಪಾಂಗವೆನಿಸಿಕೊಂಡಿವೆ. || ೨೮, ೨೯ ||

ವಾಸ್ತುಶಿಲ್ಪ ವಿದ್ಯೆಯನ್ನು ಬೋಧಿಸುವ ವಾಸ್ತುವೇದ, ಶಸ್ತ್ರಾಸ್ತ್ರವಿದ್ಯೆಯ ಧನುರ್ವೇದ, ಸಂಗೀತವಿದ್ಯೆಯ ಗಾಂಧರ್ವವೇದ, ದೈವಸಾಮುದ್ರಿಕಾದಿಗಳಿಗೆ ಸಂಬಂಧಿಸಿದ ದೈವಿಕವೇದ, ಚಿಕಿತ್ಸಾದಿಗಳಿಗೆ ಸಂಬಂಧಪಟ್ಟ ಆಯುರ್ವೇದಗಳೆಂಬ ಇವು ಐದು ಉಪವೇದಗಳೆಂದು ಗಣಿಸಲ್ಪಟ್ಟಿರುತ್ತವೆ. || ೩೦ ||

ದಂಡೋ ನೀತಿಶ್ಚ ವಾರ್ತಾ ಚ ವಿದ್ಯಾ ವಾಯುಜಯಃ ಪರಃ ।
ಏಕವಿಂಶತಿಭೇದೋಽಯಂ ಸ್ವಪ್ರಕಾಶಃ ಪ್ರಕೀರ್ತಿತಃ ॥ ೩೧ ॥

ವೈಖಾನಸಋಷೇಃ ಪೂರ್ವಂ ವಿಷ್ಣೋರ್ವಾಣೀ ಸಮುದ್ಭವೇತ್ ।
ತ್ರಯೀರೂಪೇಣ ಸಂಕಲ್ಪ್ಯ ಇತ್ಥಂ ದೇಹೀ ವಿಜೃಂಭತೇ ॥ ೩೨ ॥
ಸಂಖ್ಯಾರೂಪೇಣ ಸಂಕಲ್ಪ್ಯ ವೈಖಾನಸಋಷೇಃ ಪುರಾ ।
ಉದಿತೋ ಯಾದೃಶಃ ಪೂರ್ವಂ ತಾದೃಶಂ ಶೃಣು ಮೇಽಖಿಲಮ್ ।
ಶಶ್ವದ್ಬ್ರಹ್ಮಮಯಂ ರೂಪಂ ಕ್ರಿಯಾಶಕ್ತಿರುದಾಹೃತಾ ॥ ೩೩ ॥

ಸಾಕ್ಷಾಚ್ಛಕ್ತಿರ್ಭಗವತಃ ಸ್ಮರಣಮಾತ್ರರೂಪಾಽಽವಿರ್ಭಾವಪ್ರಾದುರ್ಭಾವಾತ್ಮಿಕಾ ನಿಗ್ರಹಾನುಗ್ರಹರೂಪಾ ಶಾಂತಿತೇಜೋರೂಪಾ ವ್ಯಕ್ತಾವ್ಯಕ್ತಕಾರಣಚರಣಸಮಗ್ರಾವಯವಮುಖವರ್ಣಭೇದಾಭೇದರೂಪಾ ಭಗವತ್ಸಹಚಾರಿಣೀ ಅನಪಾಯಿನೀ ಅನವರತಸಹಾಶ್ರಯಿಣೀ ಉದಿತಾನುದಿತಾಕಾರಾ ನಿಮೇಷೋನ್ಮೇಷಸೃಷ್ಟಿಸ್ಥಿತಿಸಂಹಾರತಿರೋಧಾನಾನುಗ್ರಹಾದಿಸರ್ವಶಕ್ತಿಸಾಮರ್ಥ್ಯಾತ್ ಸಾಕ್ಷಾಚ್ಛಕ್ತಿರಿತಿ ಗೀಯತೇ ॥ ೩೪ ॥

ದಂಡವನ್ನು ವಿಧಿಸುವ ಶಾಸ್ತ್ರ, ನೀತಿಶಾಸ್ತ್ರ, ಕೃಷಿವಾಣಿಜ್ಯಾದಿವೃತ್ತಿಗಳನ್ನು ತೋರಿಸುವ ವಾರ್ತಾಶಾಸ್ತ್ರ, ಲೋಕವ್ಯವಹಾರಶಾಸ್ತ್ರ, ವ್ಯಾಯಾಮಾದಿಗಳನ್ನು ಪ್ರಕಾಶಗೊಳಿಸುವ ವಾಯುಜಯಶಾಸ್ತ್ರ ಇವುಗಳೆಲ್ಲವೂ ಕೂಡ ವಿದ್ಯೆಗಳಲ್ಲಿ ಸೇರ ತಕ್ಕದ್ದಾಗಿದೆ. ಹೀಗೆ ಈ ಎಲ್ಲ ವಿದ್ಯೆಗಳೂ ಪರಮಾತ್ಮನಿಂದಲೇ ಹುಟ್ಟಿ ಪರಮಾತ್ಮ ಜ್ಞಾನವನ್ನು ಉಂಟುಮಾಡಲು ಸಹಾಯಕವಾಗಿದ್ದು ಸ್ವಪ್ರಕಾಶವಸ್ತುವಿನಲ್ಲಿ ಪರಮ ತಾತ್ಪರ್ಯವನ್ನು ಹೊಂದಿರುವುದರಿಂದ ಸ್ವಪ್ರಕಾಶಗಳಾಗಿವೆ. ಮೇಲೆ ಹೇಳಿರುವಂತೆ ಇವು ಇಪ್ಪತ್ತೊಂದು ಪ್ರಸ್ಥಾನ ಬೇಧಗಳನ್ನೊಳಗೊಂಡಿವೆ. ॥ ೩೧ ॥

ವೈಖಾನಸ ಮುನಿಯಲ್ಲಿ ಅನನ್ಯಭಾವವನ್ನು ಹೊಂದಿದ ಪರಮಾತ್ಮನಿಂದ ಮೊದಲು ಹುಟ್ಟಿದ ನಾದವೆಂಬ ಅವ್ಯಕ್ತದಿಂದ ವ್ಯಕ್ತವಾದ ವೇದತ್ರಯಾದಿ ನಿಖಿಲ ಶಬ್ದರಾಶಿಯೂ ಬಿಂದು, ಓಂಕಾರ-ಅಥವಾ ಮಹತ್-ಅಹಂಕಾರತತ್ತ್ವಗಳ ಮೂಲಕ ಹುಟ್ಟಿದೆ. ಪರಮಾತ್ಮನ ಸಂಕಲ್ಪಮಾತ್ರದಿಂದ ಈ ರೀತಿಯ ಉತ್ಪತ್ತಿಯನ್ನು ಹೊಂದಿದಂತೆ ಈ ಎಲ್ಲ ತತ್ತ್ವಗಳೂ ಸಂಕಲ್ಪಮಾತ್ರದಿಂದಲೇ ಲಯವನ್ನೂ ಹೊಂದುವುವು. ಶಬ್ದರಾಶಿಯು ಓಂಕಾರದಲ್ಲಿಯೂ ಅದು ಬಿಂದುವಿನಲ್ಲಿಯೂ ಬಿಂದುವು ನಾದದಲ್ಲಿಯೂ ಲಯಹೊಂದಿ ಅದ್ವಿತೀಯ ಪರಮಾತ್ಮ ಮಾತ್ರವೇ ಶೇಷವಾಗಿ ಇರುವುದು. ಈ ವಿಧವಾದ ಆವಿರ್ಭಾವ ತಿರೋಭಾವ-ಕಲನೆಗೆ ಆಸ್ಪದವಾದ ಶಕ್ತಿಯನ್ನು ಕ್ರಿಯಾಶಕ್ತಿಯೆಂದು ತತ್ತ್ವಜ್ಞಾನಿಗಳು ಪ್ರತಿಪಾದಿಸುವರು. ॥೩೨, ೩೩॥

ಸಾಕ್ಷಾಚ್ಛಕ್ತಿಯನ್ನು ಜ್ಞಾನಶಕ್ತಿಯೆಂದು ಹಿಂದೆ ಹೇಳಿದೆ. ಅದು ನಿರ್ವಿಶೇಷ ಬ್ರಹ್ಮಗೋಚರವಾದ ವೃತ್ತಿಯಲ್ಲಿ ಸ್ಫುರಣ ಮಾತ್ರವೇ ಆಕಾರವುಳ್ಳದ್ದು. ಆದರೂ ಅಜ್ಞಾನಿಗಳು ತಮ್ಮ ತಮ್ಮ ಜ್ಞಾನ ತಾರತಮ್ಯಾನುಗುಣವಾಗಿ ಆವಿರ್ಭಾವ-ಇದಕೂ ಹೆಚ್ಚಿನ ಸ್ಪಷ್ಟತೆಯೆಂಬ ಪ್ರಾದುರ್ಭಾವಗಳನ್ನೂ, ನಿಗ್ರಹ, ಅನುಗ್ರಹ ರೂಪಗಳನ್ನೂ ನಿರ್ವಿಕಾರತ್ವ ತೇಜಃಪುಂಜಗಳನ್ನೂ ವ್ಯಕ್ತ-ಅವ್ಯಕ್ತ ಪ್ರಪಂಚಕ್ಕೆ ಕಾರಣವಾದ ಪಾದಾದಿಕೇಶಾಂತ ಅವಯವ ಮುಖಕಾಂತಿ ಲಾವಣ್ಯಾದಿಗಳಿಂದ ಕೂಡಿರುವ ಶರೀರ ವನ್ನೂ ಪ್ರಪಂಚದೊಡನೆ ಭೇದಾಭೇದಾಂಶಗಳನ್ನೂ ಹೊಂದಿದ ಆಕಾರವನ್ನೂ ಕಲ್ಪಿಸುವರು. ಅಂತಹ ಆಕೃತಿಯು ಭಗವಂತನ ಜೊತೆಯಲ್ಲಿ ಎಡೆಬಿಡದೇ ಇರು ವುದಾಗಿ ಪ್ರಕಾಶಾಪ್ರಕಾಶ ರೂಪವುಳ್ಳದ್ದಾಗಿ ಕಣ್ಣಿನ ನಿಮೇಷ-ಉನ್ಮೇಷಗಳೆಂಬ ವ್ಯಾಪಾರ ಮೊದಲಾಗಿ ಪ್ರಪಂಚದ ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗಹ್ರ ಗಳೆಂಬ ಪಂಚಕೃತ್ಯಗಳನ್ನು ನಿರ್ವಹಿಸುವ ಅನೇಕ ಶಕ್ತಿಯ ಅಂಶಗಳನ್ನುಳ್ಳ ದ್ದಾಗಿಯೂ ಇರುವುದು. ಅಜ್ಞಾನಿ ದೃಷ್ಟಿಯಿಂದ ಈ ವಿಧದ ಕಲ್ಪಿತ ರೂಪವುಳ್ಳ ದ್ದಾಗಿಯೂ ಸ್ವತಃ ಬ್ರಹ್ಮ ಮಾತ್ರ ರೂಪವಾಗಿಯೂ ಇರುವ ಜ್ಞಾನಶಕ್ತಿಯನ್ನು ಸಾಕ್ಷಾಚ್ಛಕ್ತಿಯೆಂದು ಹೇಳುವರು. ॥ ೩೪ ॥

ಇಚ್ಛಾಶಕ್ತಿಸ್ತ್ರಿವಿಧಾ। ಪ್ರಲಯಾವಸ್ಥಾಯಾಂ ವಿಶ್ರಮಣಾರ್ಥಂ ಭಗವತೋ ದಕ್ಷಿಣವಕ್ಷಃಸ್ಥಲೇ ಶ್ರೀವತ್ಸಾಕೃತಿರ್ಭೂತ್ವಾ ವಿಶ್ರಾಮ್ಯತೀತಿ ಸಾ ಯೋಗಶಕ್ತಿಃ ॥ ೩೫ ॥

ಭೋಗಶಕ್ತಿರ್ಭೋಗರೂಪಾ ಕಲ್ಪವೃಕ್ಷಕಾಮಧೇನುಚಿಂತಾಮಣಿಶಂಖಪದ್ಮನಿಧ್ಯಾದಿನವನಿಧಿಸಮಾಶ್ರಿತಾ ಭಗವದುಪಾಸಕಾನಾಂಕಾಮನಯಾ ಅಕಾಮನಯಾ ವಾ ಭಕ್ತಿಯುಕ್ತಾನರಂ ನಿತ್ಯನೈಮಿತ್ತಿಕಕರ್ಮಭಿರಗ್ನಿಹೋತ್ರಾದಿಭಿರ್ವಾ ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧಾರಣಾಧ್ಯಾನಸಮಾಧಿಭಿರ್ವಾ ಗೋಪುರಪ್ರಾಕಾರಾದಿಭಿರ್ವಿಮಾನಾದಿಭಿಃಸಹಭಗವದ್ವಿಗ್ರಹಾರ್ಚಾಪೂಜೋಪಕರಣೈರರ್ಚನೈಃ ಸ್ನಾನಾದಿಭಿರ್ವಾ ಪಿತೃಪೂಜಾದಿಭಿರನ್ನಪಾನಾದಿಭಿರ್ವಾ ಭಗವತ್ಪ್ರೀತ್ಯರ್ಥಮುಕ್ತ್ವಾ ಸರ್ವಂ ಕ್ರಿಯತೇ ॥ ೩೬ ॥

ಅಥಾತೋ ವೀರಶಕ್ತಿಶ್ಚತುರ್ಭುಜಾಽಭಯವರದಪದ್ಮಧರಾ ಕಿರೀಟಾಭರಣಯುತಾ ಸರ್ವದೇವೈಃ ಪರಿವೃತಾ ಕಲ್ಪತರುಮೂಲೇ ಚತುರ್ಭಿರ್ಗಜೈ ರತ್ನಘಟೈರಮೃತಜಲೈರಭಿಷಿಚ್ಯಮಾನಾ ಸರ್ವದೇವತೈರ್ಬ್ರಹ್ಮಾದಿಭಿರ್ವಂದ್ಯಮಾನಾ ಅಣಿಮಾದ್ಯಷ್ಟೈಶ್ವರ್ಯಯುತಾ ಸಂಮುಖೇ ಕಾಮಧೇನುನಾ ಸ್ತೂಯಮಾನಾ ವೇದಶಾಸ್ತ್ರಾದಿಭಿಃ ಸ್ತೂಯಮಾನಾ ಜಯಾದ್ಯಪ್ಸರಃಸ್ತ್ರೀಭಿಃ ಪರಿಚರ್ಯಮಾಣಾ ಆದಿತ್ಯಸೋಮಾಭ್ಯಾಂ ದೀಪಾಭಿಃ ಪ್ರಕಾಶ್ಯಮಾಣಾ ತುಂಬುರುನಾರದಾದಿಭಿರ್ಗೀಯಮಾನಾ ರಾಕಾಸಿನೀವಾಲೀಭ್ಯಾಂ ಛತ್ರೇಣ ಹ್ಲಾದಿನೀಮಾಯಾಭ್ಯಾಂ ಚಾಮರೇಣ ಸ್ವಾಹಾಸ್ವಧಾಭ್ಯಾಂ

ಹಿಂದೆ ಹೇಳಿರುವ ಇಚ್ಛಾಶಕ್ತಿಯು ಯೋಗ-ಭೋಗ-ವೀರಶಕ್ತಿಗಳೆಂಬ ಮತ್ತೊಂದು ಬಗೆಯ ಭೇದಗಳನ್ನು ಹೊಂದಿರುವುದು. ಅವುಗಳಲ್ಲಿ ಈ ಜಗತ್ತಿನ ಪ್ರಲಯಾವಸ್ಥೆಯಲ್ಲಿ ವಿಶ್ರಾಂತಿ ಸುಖವನ್ನು ಬಯಸಿ ಪರಮಾತ್ಮನ ಎದೆಯ ಬಲ ಭಾಗದಲ್ಲಿ ಶ್ರೀವತ್ಸಮಣಿಯ ಆಕಾರದಲ್ಲಿ ವಿಶ್ರಾಂತಿಯನ್ನು ಹೊಂದುತ್ತಿರುವುದೇ ಯೋಗ ಶಕ್ತಿಯು. ಇದನ್ನೇ ಯೋಗ ನಿದ್ರೆಯೆಂಬದಾಗಿಯೂ ತದಧೀನನಾಗಿ ಪರ ಮಾತ್ಮನು ಪ್ರಲಯಕಾಲದಲ್ಲಿರುವನೆಂದೂ ಪೌರಾಣಿಕರು ಹೇಳುವರು. ॥ ೩೫ ॥

ಭೋಗಶಕ್ತಿಯು ತ್ರೈಲೋಕ್ಯದಲ್ಲಿರುವ ಕಲ್ಪವೃಕ್ಷ-ಕಾಮಧೇನು ಚಿಂತಾಮಣಿ, ಶಂಖನಿಧಿ, ಪದ್ಮನಿಧಿ ಮೊದಲಾದ ನವನಿಧಿಗಳು ಇಂತಹ ಸಕಲ ಭೋಗ್ಯವಸ್ತುಗಳನ್ನು ಆಶ್ರಯಿಸಿಕೊಂಡಿರುವದು. ಇದರಿಂದ ಸಕಲ ಭೋಗಗಳನ್ನು ಅನುಭವಿಸುತ್ತಾ ಭಗವಂತನು ಆನಂದ ಪರಿಪೂರ್ಣನಾಗಿರುವನು. ಸಕಾಮರಾಗಿ ಅಥವಾ ನಿಷ್ಕಾಮ ರಾಗಿ ಭಕ್ತಿಯಿಂದ ಭಗವತ್ಪ್ರೀತಿಯನ್ನೇ ಮುಖ್ಯ ಧ್ಯೇಯವಾಗಿಟ್ಟುಕೊಂಡು ನಿತ್ಯ-ನೈಮಿತ್ತಿಕಗಳಾದ ಅಗ್ನಿಹೋತ್ರಾದಿ ಕರ್ಮಗಳನ್ನೂ ಯಮ–ನಿಯಮ–ಆಸನ–ಪ್ರಾಣಾಯಾಮ–ಪ್ರತ್ಯಾಹಾರ–ಧಾರಣಾ–ಧ್ಯಾನ– ಸಮಾಧಿಗಳೆಂಬ ಯೋಗಶಾಸ್ತ್ರ ಪ್ರತಿಪಾದಿತವಾದ ಅಷ್ಟಾಂಗ ಯೋಗಗಳನ್ನೂ ಭಗವಂತನ ವಿಗ್ರಹವನ್ನು ಕಲ್ಪಿಸಿ ತಕ್ಕ ಉಪಕರಣಗಳಿಂದ ಮಾನಸ-ಬಾಹ್ಯ ಅರ್ಚನೆಗಳನ್ನೂ ಸ್ನಾನ-ತರ್ಪಣಾದಿ ಗಳನ್ನೂ, ಪಿತೃಯಜ್ಞವನ್ನೂ, ಅನ್ನಪಾನಗಳನ್ನೂ ಕೊಟ್ಟು ಅತಿಥಿ ಸತ್ಕಾರವನ್ನೂ ಅನುಷ್ಠಾನಮಾಡಿದ ಉಪಾಸಕರೂ ಕೂಡ ತಮ್ಮ ಸುಕೃತಗಳಿಗೆ ಫಲವಾಗಿ ಗೋಪುರ-ಪ್ರಾಸಾದ-ವಿಮಾನಾದಿ ದುರ್ಲಭೋಪಕರಣಗಳನ್ನೂ ಹೊಂದಿ ಅವುಗಳ ಭೋಗವನ್ನು ಅನುಭವಿಸುವರು. ಈ ಭೋಗಪ್ರದವಾದ ಶಕ್ತಿಯನ್ನು ಭೋಗಶಕ್ತಿಯೆಂದು ಅರಿಯಬೇಕು. ॥ ೩೬ ॥

ಈಗ ವೀರಲಕ್ಷ್ಮೀ ಸ್ವರೂಪವು ವರ್ಣಿಸಲ್ಪಡುವುದು. ವೀರಲಕ್ಷ್ಮಿಯು ಚತು ರ್ಭುಜಗಳಿಂದ ಅಭಯ ವರದ ಮುದ್ರೆಗಳನ್ನೂ ಪದ್ಮವನ್ನೂ ಧರಿಸಿದವಳೂ ಶಿರಸ್ಸಿ ನಲ್ಲಿ-ಕಿರೀಟ ಮತ್ತು ಇತರಾವಯವಗಳಲ್ಲಿ ಅನುರೂಪವಾದ ಅನೇಕ ಆಭರಣಗಳಿಂದ ಕೂಡಿದವಳೂ, ಎಲ್ಲ ದೇವತೆಗಳಿಂದ ಪ್ರಸಾದಾರ್ಥಿಗಳಾಗಿ ಸುತ್ತಲ್ಪಟ್ಟವಳೂ ಕಲ್ಪ ವೃಕ್ಷದ ಛಾಯೆಯಲ್ಲಿ ನಾಲ್ಕು ದಿಗ್ಗಜಗಳಿಂದ ಅಮೃತರಸದಿಂದ ಪರಿಪೂರ್ಣವಾದ ರತ್ನಕಲಶಗಳನ್ನು ಸೊಂಡಲುಗಳಿಂದ ಎತ್ತಿ ಅಭಿಷೇಕ ಮಾಡಲ್ಪಟ್ಟವಳೂ ಬ್ರಹ್ಮಾದಿ ನಿಖಿಲ ದೇವತೆಗಳಿಂದ ವಂದಿಸಲ್ಪಟ್ಟವಳೂ ಅಣಿಮಾದಿ ಅಷ್ಟೈಶ್ವರ್ಯ ಸಂಪನ್ನಳೂ, ಮುಂದುಗಡೆಯಲ್ಲಿ ಕಾಮಧೇನುವಿನಿಂದ ಸ್ತುತಿಸಲ್ಪಟ್ಟವಳೂ, ವೇದಶಾಸ್ತ್ರಗಳಿಂದ

ವ್ಯಜನೇನ ಭೃಗುಪುಣ್ಯಾದಿಭಿರಭ್ಯರ್ಚ್ಯಮಾನಾ ದೇವೀ ದಿವ್ಯಸಿಂಹಾಸನೇ ಪದ್ಮಾಸನಾರೂಢಾ ಸಕಲಕಾರಣಕಾರ್ಯಕರೀ ಲಕ್ಷ್ಮೀರ್ದೇವಸ್ಯ ಪಥೃಗ್ಭವನ ಕಲ್ಪನಾಲಂಚಕಾರ ಸ್ಥಿರಾ ಪ್ರಸನ್ನಲೋಚನಾ ಸರ್ವದೇವತೈಃ ಪೂಜ್ಯಮಾನಾ ವೀರಲಕ್ಷ್ಮೀರಿತಿ ವಿಜ್ಞಾಯತ ಇತ್ಯುಪನಿಷತ್. ॥ ೩೭ ॥

ಇತಿ ಸೀತೋಪನಿಷತ್ ಸಮಾಪ್ತಾ



ಸ್ತೋತ್ರ ಮಾಡಲ್ಪಟ್ಟವಳೂ ಅಪ್ಸರಃ ಸ್ತ್ರೀಯರಿಂದ ಜಯಧ್ವನಿಗಳಿಂದ ಸೇವಿಸಲ್ಪಟ್ಟವಳೂ ಚಂದ್ರ ಸೂರ್ಯರಿಂದ ದೀಪಜ್ಯೋತಿಯಿಂದ ಪ್ರಕಾಶಿಸಲ್ಪಟ್ಟವಳೂ, ತುಂಬುರು ನಾರದಾದಿ ಮುನಿಗಳಿಂದ ಗಾನಮಾಡಲ್ಪಟ್ಟವಳೂ ರಾಕಾಸಿನೀವಾಲೀ ಎಂಬ ಪೂರ್ಣಿಮಾಽಮಾವಾಸ್ಯಾತಿಥಿ ಅಭಿಮಾನಿ ದೇವತೆಗಳಿಂದ ಛತ್ರಧಾರಣಾ ಸೇವೆ ಮಾಡಲ್ಪಟ್ಟವಳೂ, ಹ್ಲಾದಿನೀಮಯಾ ಎಂಬ ದೇವತೆಗಳಿಂದ ಚಾಮರಧಾರಣ ಸೇವೆಯಿಂದ ಪೂಜಿಸಲ್ಪಟ್ಟವಳೂ ಸ್ವಾಹಾ-ಸ್ವಧಾ ದೇವಿಗಳಿಂದ ಬೀಸಣಿಗೆಗಳಿಂದ ಬೀಸಲ್ಪಟ್ಟವಳೂ ಭೃಗು ಮುಂತಾದ ಮಹರ್ಷಿಗಳಿಂದ ಸುಕೃತ ಕರ್ಮಗಳಿಂದ ಸೇವಿಸಲ್ಪಟ್ಟವಳೂ ದಿವ್ಯ ಸಿಂಹಾಸನದಲ್ಲಿ ಪದ್ಮಾಸನ ಸಮಾರೂಢಳೂ ಸಕಲ ಕಾರ್ಯಕಾರಣ ನಿರ್ಮಾಣಶಕ್ತಿ ಸಮನ್ವಿತಳೂ ಪರಮಾತ್ಮನ ಪೃಥಗ್ಭಾವ (ದ್ವಿತೀಯ ವ್ಯಕ್ತಿ) ಸಂಕಲ್ಪವಶದಿಂದ ದ್ವಿತೀಯ ರೂಪಳಾದವಳೂ ಸ್ಥಿರಸ್ವಭಾವವುಳ್ಳವಳೂ ಪ್ರಸನ್ನವಾದ ನೇತ್ರಗಳಿಂದ ಕೂಡಿದವಳೂ ಸಮಸ್ತ ದೇವತೆಗಳಿಂದ ಸರ್ವಕಾಲಗಳಲ್ಲಿಯೂ ಪೂಜಿಸಲ್ಪಡುವವಳೂ ಆಗಿ ವೀರಲಕ್ಷ್ಮಿಯೆಂದೆನಿಸಲ್ಪಟ್ಟವಳಾಗಿರುವಳು. ಮುಖ್ಯವಾಗಿ ಈ ಸೀತೋಪನಿಷತ್ತಿನಲ್ಲಿ ಪರಮಾತ್ಮನಲ್ಲಿ ಸೃಷ್ಟ್ಯಾದಿ ಕಾರ್ಯಗಳನ್ನು ನಿರ್ವಹಿಸಲು ಸಹಾಯವಾದ ಆತ್ಮನ ಅಪೃಥಗ್ಭೂತ ಶಕ್ತಿಯೇ ಪೃಥಗ್ಭೂತವಾಗಿಯೂ ಪರಮಾತ್ಮನಿಗೆವಶ್ಯವಾಗಿಯೂ ತೋರಿಬರುವುದು. ಲೋಕದಲ್ಲಿ ಸಂಖ್ಯಾತೀತವಾದ ಶಕ್ತಿಗಳೆಲ್ಲವೂ ಇದರ ಅಂಶಗಳೇ ಆಗಿವೆ. ಇದರಿಂದಲೆ ನಾದ-ಬಿಂದು ಓಂಕಾರ ಮೊದಲಾದ ತತ್ತ್ವಗಳು ಹುಟ್ಟಿವೆ. ಈ ತತ್ವಗಳಿಗೆ ಸಮ್ಯಕ್ ಜ್ಞಾನದಿಂದ ಲಯ ಬಂದಾಗ ಎಲ್ಲವೂ ಶಕ್ತಿಯಲ್ಲಿ ಲಯವಾಗುವುದಲ್ಲದೇ ಶಕ್ತಿಯೂ ಸಹ ಅದ್ವಿತೀಯ ಚಿನ್ಮಾತ್ರದಲ್ಲಿ ಐಕ್ಯವನ್ನು ಹೊಂದುವುದು ಎಂಬ ಪರಮಾರ್ಥವನ್ನು ವಿಸ್ತಾರವಾಗಿ ವರ್ಣಿಸಿದೆ. ॥ ೩೭ ॥

ಸೀತೋಪನಿಷತ್ತಿನ ಕನ್ನಡ ಅನುವಾದವು ಮುಗಿದುದು.



|| ಶ್ರೀರಸ್ತು ||

# || ತ್ರಿ ಪು ರಾ ತಾ ಪಿ ನ್ಯು ಪ ನಿ ಷ ತ್ ||

---

ಹರಿಃ ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ ।
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ ।
ವ್ಯಶೇಮ ದೇವಹಿತಂ ಯದಾಯುಃ ॥

ಸ್ವಸ್ತಿನ ಇಂದ್ರೋವೃದ್ಧ ಶ್ರವಾಃ ।
ಸ್ವಸ್ತಿನಃ ಪೂಷಾ ವಿಶ್ವವೇದಾಃ ।
ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ।
ಸ್ವಸ್ತಿನೋ ಬೃಹಸ್ಪತಿರ್ದಧಾತು ॥

ಓಂ ಶಾಂತಿಃ ಶಾಂತಿಃ ಶಾಂತಿಃ ॥

## ಪ್ರಥಮೋಪನಿಷತ್

ಅಥೈತಸ್ಮಿನ್ನಂತರೇ ಭಗವಾನ್ ಪ್ರಾಜಾಪತ್ಯಂ ವೈಷ್ಣವಂ ವಿಲಯಕಾರಣಂ ರೂಪಮಾಶ್ರಿತ್ಯ ತ್ರಿಪುರಾಭಿಧಾ ಭಗವತೀತ್ಯೇವಮಾದಿಶಕ್ತ್ಯಾ ಭೂರ್ಭುವಃಸ್ವಸ್ತ್ರೀಣಿ ಸ್ವರ್ಗಭೂಪಾತಾಲಾನಿ ತ್ರಿಪುರಾಣಿ ಹರಮಾಯಾತ್ಮಕೇನ ಹ್ರೀಂಕಾರೇಣ ಹೃಲ್ಲೇಖಾಖ್ಯಾ ಭಗವತೀ ತ್ರಿಕೂಟಾವಸಾನೇ ವಿಲಯೇ ವಿಲಯೇ ಧಾಮ್ನಿ ಮಹಸಾ ಘೋರೇಣ ವ್ಯಾಪ್ನೋತಿ । ಸೈವೇಯಂ ಭಗವತೀ ತ್ರಿಪುರೇತಿ ವ್ಯಾಪಠ್ಯತೇ ॥ ೧ ॥

॥ ಶ್ರೀ ॥

# ತ್ರಿಪುರಾತಾಪಿನ್ಯುಪನಿಷತ್ತಿನ ಕನ್ನಡ ಅನುವಾದವು.

---

ಅಥರ್ವ ವೇದಕ್ಕೆ ಸೇರಿದ ಉಪನಿಷತ್ತುಗಳಲ್ಲಿ ಒಂದಾದ ಈ ತ್ರಿಪುರಾತಾಪಿನ್ಯುಪನಿಷತ್ತಿನ ಪ್ರಾರಂಭದಲ್ಲಿ "ಭದ್ರಂಕರ್ಣೇಭಿಃ" ಎಂಬ ಶಾಂತಿಮಂತ್ರವನ್ನು ಪಠಿಸಿ ಶಾಂತಿಯನ್ನು ಪ್ರಾರ್ಥಿಸಬೇಕು.

ತ್ರಿಪುರಾದೇವಿಯ ಸ್ವರೂಪವನ್ನು ಈ ವಾಕ್ಯಗಳು ವಿವರಿಸುತ್ತವೆ. ಜನಿಸುವ ಪ್ರತಿಯೊಂದು ಪ್ರಾಣಿಯ ಅದೃಷ್ಟಪರಿಪಾಕಕ್ಕೆ ಅನುಗುಣವಾಗಿ, ಈ ಆವಿದ್ಯಕವಾದ (ಅವಿದ್ಯಾಮೂಲಕವಾದ) ವ್ಯವಹಾರದಶೆಯಲ್ಲಿ ಸೃಷ್ಟಿಸ್ಥಿತ್ಯಾದಿ ಸಕಲ ಭಾವಗಳನ್ನೂ ಅರಿತು ಸಾಕ್ಷಿಸ್ವರೂಪನಾಗಿರುವ, ಸದಾಶಿವನು ಕ್ರಮವಾಗಿ ಪ್ರಪಂಚವನ್ನು ಸೃಜಿಸುವ ಅಧಿಕಾರವನ್ನು ಹೊಂದಿದ ಬ್ರಹ್ಮ, ಪಾಲನಾಧಿಕಾರವನ್ನು ವಹಿಸಿದ ವಿಷ್ಣು, ಸಂಹಾರಾಧಿಕಾರವನ್ನು ನಡೆಸುವ ರುದ್ರ ಎಂಬ ತ್ರಿಮೂರ್ತಿಗಳ ಸ್ವರೂಪವನ್ನು ಹೊಂದಿ ಸತ್ಯ-ವೈಕುಂಠ-ಕೈಲಾಸಗಳೆಂಬ ಮೂರುಲೋಕಗಳ ಅಥವಾ ಪುರತ್ರಯದ ಆಧಿಪತ್ಯದಿಂದ ಭಗವತಿಯಾದ ತ್ರಿಪುರಾದೇವಿಯೆಂಬ ಹೆಸರಿನಿಂದ ಪ್ರಸಿದ್ಧಳಾಗಿ, ತನ್ನ ಆದಿಶಕ್ತಿ ರೂಪದಿಂದ, ಭೂರ್ಲೋಕ, ಭುವರ್ಲೋಕ, ಸ್ವರ್ಲೋಕಗಳೆಂಬ ಅಥವಾ ಸ್ವರ್ಗ ಮರ್ತ್ಯ ಪಾತಾಲಗಳೆಂಬ ಲೋಕತ್ರಯಗಳನ್ನೂ ವ್ಯಾಪಿಸಿ, ಹರಮಾಯಾ ಎಂಬ ನಾಮಾಂಕನವನ್ನು ಹೊಂದಿದ ಹ್ರೀಂಕಾರ ರೂಪದಿಂದ ಸರ್ವಪ್ರಾಣಿಗಳ ಹೃದಯ ಗುಹೆಯಲ್ಲಿ ಪ್ರತ್ಯಗಾತ್ಮರೂಪದಿಂದ ಪ್ರಕಾಶವಾಗುತ್ತಾ ಹೃಲ್ಲೇಖಾ ಎಂದು ಕರೆಯಲ್ಪಡುವವಳಾಗಿ, ಗುಣಸಾಮ್ಯಕ್ಕೆ ಆಧಾರವೂ, ಸಕಲ ದ್ವೈತ ಪ್ರಪಂಚ ನಿಷೇಧಕ್ಕೆ ಅವಧಿಯೂ ಚೈತನ್ಯಮಾತ್ರ ಸ್ವರೂಪವೂ ಆದ ವಾಗ್ಭವ-ಕಾಮ-ಶಕ್ತಿ ಕೂಟಗಳೆಂಬ ಮೂರು ಕೂಟಗಳ ಅಂತ್ಯ ಸ್ಥಾನವಾದ ಪರಮಪದದಲ್ಲಿ ಅತ್ಯುಜ್ವಲವಾದ ತೇಜೋ

ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ಪರೋರಜಸೇಸಾವದೋಮ್ ॥ ೨ ॥

ಜಾತವೇದಸೇ ಸುನವಾಮ ಸೋಮಮರಾತೀಯತೋ ನಿದಹಾತಿ ವೇದಃ ।
ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ॥ ೩ ॥

ತ್ರ್ಯಮ್ಬಕಂ ಯಜಾಮಹೇ ಸುಗನ್ಧಿಂ ಪುಷ್ಟಿವರ್ಧನಮ್ ।
ಉರ್ವಾರುಕಮಿವ ಬನ್ಧನಾನ್ಮೃತ್ಯೋರ್ಮುಕ್ಷೀಯ ಮಾಽಮೃತಾತ್ ॥ ೪ ॥

ಶತಾಕ್ಷರೀ ಪರಮಾ ವಿದ್ಯಾ ತ್ರಯೀಮಯೀ ಸಾಕ್ಷಾತ್ಪರಾ ತ್ರಿಪುರಾ ಪರಮೇಶ್ವರೀ । ಆದ್ಯಾನಿ ಚತ್ವಾರಿ ಪದಾನಿ ಪರಬ್ರಹ್ಮವಿಕಾಸೀನಿ ದ್ವಿತೀಯಾನಿ ಶಾಕ್ತಾನಿ । ತೃತೀಯಾನಿ ಶೈವಾನಿ ॥ ೫ ॥

ತತ್ರ ಲೋಕಾಃ ವೇದಾಃ ಶಾಸ್ತ್ರಾಣಿ ಪುರಾಣಾನಿ ಧರ್ಮಾಣಿ ವೈಚಿಕಿತ್ಸಿತಾನಿ ಜ್ಯೋತೀಂಷಿ ಶಿವಶಕ್ತಿಯೋಗಾದಿತ್ಯೇವಂ ಘಟನಾ ವ್ಯಾಪತ್ಯತೇ ॥ ೬ ॥

ರೂಪದಿಂದ ವ್ಯಾಪಿಸಿ ಇರುತ್ತಾಳೆ. ಅಂತಹ ಪೂಜ್ಯಳಾದ ದೇವಿಯನ್ನು ತ್ರಿಪುರಾದೇವಿಯೆಂದು ಕರೆಯುತ್ತಾರೆ. ಇದರಿಂದ ತ್ರಿಪುರಾದೇವಿಯ ನಿರ್ಗುಣಸ್ವರೂಪವನ್ನೂ ಸೃಷ್ಟಿಸ್ಥಿತಿ ಲಯಗಳಿಗೆ ನಿಯಾಮಕವಾದ ಉಪಾಧಿವಶದಿಂದ ಸಂಭವಿಸುವ ಸಗುಣ ಸ್ವರೂಪವನ್ನೂ ವ್ಯಕ್ತಗೊಳಿಸಿರುತ್ತದೆ. ಮಂತ್ರಶಾಸ್ತ್ರದ ಸಿದ್ಧಾಂತದಂತೆ ಸದಾಶಿವ ತತ್ವವು ನಿರ್ಗುಣ ಪರಮಾತ್ಮಸ್ವರೂಪವೂ, ಅಲ್ಲಿ ಐಕ್ಯದಿಂದಿರುವ ಶಕ್ತಿಯು ಜಗತ್ತಿಗೆ ಅಂತರ್ಯಾಮಿಯಾಗಿಯೂ ನಿಯಾಮಕಳಾಗಿಯೂ ಇರುವರು. || ೧ ||

ಸದಾಶಿವ ಶಕ್ತಿರೂಪಳಾದ ತ್ರಿಪುರಾದೇವಿಯನ್ನು ಪ್ರತಿಪಾದಿಸುವ ಒಂದುನೂರ ಎಂಟು ಅಕ್ಷರಗಳಿಂದ ಕೂಡಿರುವ ಮಹಾಮಂತ್ರವನ್ನು ಪಠಿಸಿದೆ. ಈ ಮಂತ್ರಕ್ಕೆ ಅಷ್ಟೋತ್ತರ ಶತಾಕ್ಷರೀ ಮಂತ್ರವೆಂದು ಪ್ರಸಿದ್ಧಿಯಿದೆ. ಮೇಲೆ ಹೇಳಿರುವ "ತತ್ಸವಿತುಃ, ಜಾತವೇದಸೇ, ತ್ರ್ಯಂಬಕಂ," ಮೂರು ಮಂತ್ರಗಳನ್ನೂ ಕ್ರಮವಾಗಿ ಜಪಿಸಬೇಕು. ಮೊದಲನೆಯ ಮಂತ್ರದಲ್ಲಿರುವ "ಣ್ಯಂ" ಎಂಬ ವರ್ಣವನ್ನು ಭೇದಿಸಿ ಅಂಶದ್ವಯದಿಂದ ಎರಡು ವರ್ಣಗಳಿರುವುದಾಗಿ ಭಾವಿಸುವುದರಿಂದ ಮೂರು ಮಂತ್ರಗಳ ಅಕ್ಷರಗಳ ಸಂಖ್ಯೆಯು ಒಟ್ಟಾಗಿ ಒಂದುನೂರ ಎಂಟು ಆಗುವುದು. ಉತ್ತಮವಾದ ಈ ಅಷ್ಟೋತ್ತರ ಶತಾಕ್ಷರೀ ಮಂತ್ರವು ವೇದಗಳಲ್ಲಿ ಸಾರಾಂಶವಾದ ಮಂತ್ರಗಳಿಂದ ಕೂಡಿ ತ್ರಿಪುರಾದೇವಿಯನ್ನು ಪ್ರತಿಪಾದಿಸುವುದರಿಂದ ಮಂತ್ರವೇ ಪರಮೇಶ್ವರಿಯಾದ ತ್ರಿಪುರಾದೇವೀ ಸ್ವರೂಪವು. ಇದರಲ್ಲಿ ಮೊದಲನೆಯ ಮಂತ್ರದ ನಾಲ್ಕು ಪಾದಗಳು ಪರಬ್ರಹ್ಮಸ್ವರೂಪವನ್ನೂ ಎರಡನೆಯ ಮಂತ್ರದ ನಾಲ್ಕು ಪಾದಗಳು ಶಕ್ತಿ ಅಂಶದ ಸ್ವರೂಪವನ್ನೂ ಮೂರನೆಯ ಮಂತ್ರದ ನಾಲ್ಕು ಪಾದಗಳು ಶಿವಾಂಶಸ್ವರೂಪನ್ನೂ ಬೋಧಿಸುತ್ತವೆ. ಈ ಮಂತ್ರದ ಅರ್ಥವನ್ನು ಉಪನಿಷತ್ತಿನ ಮೂಲವಾಕ್ಯವೇ ವ್ಯಾಖ್ಯಾನಮಾಡಿರುತ್ತದೆ. ಇಲ್ಲಿ ಪುನಃ ವಿವರಣೆ ಮಾಡುವುದು ಅವಶ್ಯಕವಲ್ಲ. || ೨, ೩, ೪, ೫ ||

ಹಿಂದೆ ನಿರೂಪಿಸಿದ ತ್ರಿಪುರಾಷ್ಟೋತ್ತರ ಶತಾಕ್ಷರೀ ಮಂತ್ರ ಪ್ರತಿಪಾದ್ಯರಾದ ಶಿವ ಮತ್ತು ಶಕ್ತಿಗಳ ಮೇಲನವು ಸಕಲ ಪ್ರಪಂಚದ ಸೃಷ್ಟಿಗೂ ಕಾರಣವಾಗುವುದು ಎಂಬ ಅಂಶವನ್ನು ಈ ವಾಕ್ಯವು ತೋರಿಸುವುದು. ಶಿವಶಕ್ತಿಗಳ ಮೇಲನ ಬಲದಿಂದ ಹದಿನಾಲ್ಕು ಲೋಕಗಳೂ, ನಾಲ್ಕು ವೇದಗಳೂ, ಆರು ಶಾಸ್ತ್ರಗಳೂ, ಪುರಾಣಗಳೂ, ಧರ್ಮಶಾಸ್ತ್ರಗಳೂ, ವೈದ್ಯಶಾಸ್ತ್ರಗಳೂ, ಜ್ಯೋತಿಃಶಾಸ್ತ್ರಗಳೂ, ಮತ್ತು ಇತರ ಎಲ್ಲ ಕಾರ್ಯ ವರ್ಗವೂ ಕೂಡ ಉತ್ಪತ್ತಿಯನ್ನು ಹೊಂದುವುವು ಎಂದು ವಿವರವಾಗಿ ಪಠಿಸಲ್ಪಟ್ಟಿದೆ. || ೬ ||

ಅಥೈತಸ್ಯ ಪರಂ ಗಹ್ವರಂ ವ್ಯಾಖ್ಯಾಸ್ಯಾಮಃ । ಮಹಾಮನುಸಮು ದ್ಭವಂ ತದಿತಿ ಬ್ರಹ್ಮ ಶಾಶ್ವತಂ ಪರೋ ಭಗವಾನ್ ನಿರ್ಲಕ್ಷಣಃ ನಿರಂಜನೋ ನಿರುಪಾಧಿರಾಧಿರಹಿತೋ ದೇವಃ ಉನ್ಮೀಲತೇ ಪಶ್ಯತಿ ವಿಕಾಸತೇ ಚೈತನ್ಯ ಭಾವಂ ಕಾಮಯತ ಇತಿ ಸ ಏಕೋ ದೇವಃ ಶಿವರೂಪೀ ದೃಶ್ಯತ್ವೇನ ವಿಕಾ ಸತೇ ಯತಿಷು ಯಜ್ಞೇಷು ಯೋಗಿಷು ಕಾಮಯತೇ ಕಾಮಂ ಜಾಯತೇ। ಸ ಏಷ ನಿರಂಜನೋಽಕಾಮತ್ವೇನೋಜ್ಜೃಂಭತೇ ಅಕಚಟತಪಯಶಾನ್ ಸೃಜತೇ। ತಸ್ಮಾದೀಶ್ವರಃ ಕಾಮೋಽಭಿಧೀಯತೇ। ತತ್ಪರಿಭಾಷಯಾ ಕಾಮಃ ಕಕಾರಂ ವ್ಯಾಪ್ನೋತಿ। ಕಾಮ ಏವೇದಂ ತತ್ತದಿತಿ ಕಕಾರೋ ಗೃಹ್ಯತೇ। ತಸ್ಮಾತ್ತತ್ಪದಾರ್ಥ ಇತಿ ಯ ಏವಂ ವೇದ ॥ ೭ ॥

ಈ ವಾಕ್ಯವು ಮೇಲೆಹೇಳಿರುವ ಅಷ್ಟೋತ್ತರ ಶತಾಕ್ಷರೀ ಮಹಾ ಮಂತ್ರದ ಆದಿಭಾಗವಾದ ಗಾಯತ್ರಿಯ ಅರ್ಥವನ್ನು ಪಂಚದಶಾಕ್ಷರೀಆದಿವಿದ್ಯಾ ಮಹಾ ಮಂತ್ರದ ಮೂರು ಖಂಡಗಳ ಅರ್ಥದೊಡನೆ ಸಮನ್ವಯಮಾಡಿ ವಿವರಿಸುವುದು. ತ್ರಿಪುರಾಸ್ವರೂಪವನ್ನೂ ಆ ದೇವಿಯ ಮಹಾಮಂತ್ರವನ್ನೂ ಶಿವಶಕ್ತಿಮೇಲನದಿಂದ ಸಕಲ ಜಗದುತ್ಪತ್ತಿಗಳನ್ನೂ ಹೇಳಿದನಂತರ ದೇವೀಮಹಾಮಂತ್ರದ ರಹಸ್ಯಾರ್ಥ ವನ್ನು ವ್ಯಾಖ್ಯಾನಮಾಡುವೆವು. ಗಾಯತ್ರಿಯಲ್ಲಿ ಮೊದಲನೆಯ ತತ್ ಎಂಬ ಪದವು ಪರಬ್ರಹ್ಮಸ್ವರೂಪವನ್ನು ಪ್ರಕಾಶಿಸುವುದು. ಮಹಾಮಂತ್ರದಲ್ಲಿ ಸೇರಿದ ತತ್ಪದದಿಂದ ಲಕ್ಷಣಾವೃತ್ತಿಯಿಂದ ಬೋಧ್ಯವಾದ ಬ್ರಹ್ಮವು ಸತ್ತಾಸಾಮಾನ್ಯರೂಪವಾದ್ದರಿಂದ ಶಾಶ್ವತವೂ ಇದಕ್ಕಿಂತ ಹೆಚ್ಚಿನ ಗಮ್ಯವಸ್ತುವಿಲ್ಲದ್ದರಿಂದ ಇದೇ ಉತ್ತಮವಾದ ಪೂಜ್ಯ ವಸ್ತುವೂ ನಿರ್ವಿಶೇಷವಾದ್ದರಿಂದ ಲಕ್ಷಣರಹಿತವೂ, ಮಾಯಿಕವಾದ ಸ್ವಾತಿರಿಕ್ತ ವಸ್ತುಗಳಲ್ಲಿ ಸಂಗವಿಲ್ಲದ್ದರಿಂದ ನಿರಂಜನವೂ, ವಾಸ್ತವವಾದ ಉಪಾಧಿಸಂಬಂಧ ವಿಲ್ಲದ್ದರಿಂದ ನಿರುಪಾಧಿಕವೂ, ಆದುದರಿಂದಲೇ ಔಪಾಧಿಕವೂ ಆಧಿರೂಪವೂ ಆದ ಕಾಮಾದಿ ಧರ್ಮಗಳಿಂದ ವರ್ಜಿತವೂ ಆಗಿರುವುದು. ಅಂತಹ ದೇವನು ಮಾಯೋ ಪಾಧಿ ಸಂಪರ್ಕದಿಂದ ಸೃಷ್ಟಿಮಾಡುವ ಉನ್ಮುಖತೆಯನ್ನು ಹೊಂದಿ ಸ್ರಷ್ಟವ್ಯ ವಸ್ತು ವಿನ ಅನುಸಂಧಾನಮಾಡಿ ತಾನೇ ಬಾಹ್ಯ ಸಕಲ ಪ್ರಪಂಚವೆಂಬ ದೃಶ್ಯವಸ್ತುಗಳ ಸ್ವರೂಪವನ್ನು ಸೃಷ್ಟಿಸಿ, ಅವುಗಳಲ್ಲಿ ತಾನೇ ಪ್ರವೇಶಿಸಿ ಸುಖ-ದುಃಖಾದಿಗಳನ್ನು ಅನುಭವಿಸುವ ಚೇತನನೂ ಆಗಿರಬೇಕೆಂದು ಕಾಮಿಸುತ್ತಾನೆ. ಅಂತಹ ಕಾಮನಾ ವಶದಿಂದ ಅದ್ವಿತೀಯನಾದ ಶಿವನು ನಿಖಿಲ ದೃಶ್ಯರೂಪದಿಂದಲೂ ಚೇತನರೂಪ ದಿಂದಲೂ ತೋರುತ್ತಾನೆ, ಮತ್ತು ಜ್ಞಾನಿಗಳು, ಕರ್ಮಿಗಳು, ಯೋಗಿಗಳು, ಇವರಲ್ಲಿ ಆತ್ಮರೂಪದಿಂದ ಪ್ರವೇಶಿಸಿ ಅವರವರ ಜ್ಞಾನ-ಕರ್ಮ-ಉಪಾಸನಾನಿಷ್ಠೆಗಳ ಫಲವನ್ನು ಆಕಾಂಕ್ಷಿಸುತ್ತಾನೆ. ಇದರ ಬಲದಿಂದ ತಾನು ಕಾಮುಫಲರೂಪನಾಗಿ ಪರಿಣಮಿಸಿ ದರೂ ಕೂಡ ಪರಿಣಾಮಗಳೆಲ್ಲವೂ ಮಿಥ್ಯಾತ್ಮಕವಾದುದರಿಂದ ಆತ್ಮನು ಸ್ವಸ್ವರೂಪ ವಾದ ನಿಷ್ಕಾಮತ್ವ, ನಿತ್ಯತೃಪ್ತತ್ವ, ನಿರಂಜನತ್ವ ಮುಂತಾದ ಗುಣಗಳನ್ನು ಬಿಡದೇ ಪ್ರಕಾಶಿಸುವನು. ಸೃಷ್ಟಿಯನ್ನು ಪ್ರಾರಂಭಿಸಿ "ಅ-ಕ-ಚ-ಟ-ತ-ಪ-ಯ-ಶ" ಈ ಎಂಟು ವರ್ಣಗಳಿಂದ ಪ್ರಾರಂಭವಾಗುವ ಎಂಟು ಅಕ್ಷರ ವರ್ಗಗಳನ್ನು ಸೃಷ್ಟಿಸು ತ್ತಾನೆ. ಕಾರಣ-ಕಾರ್ಯಗಳು ಭಿನ್ನರೂಪಗಳಲ್ಲದುದರಿಂದ ಈಶ್ವರನೇ ಕಾಮ ಎಂಬ ಹೆಸರನ್ನೂ ಹೊಂದುವನು. ಈ ಸಂಕೇತದಿಂದ ಪರಮಾತ್ಮ-ಬೋಧಕವಾದ ಕಾಮ ಪದವು ಕಕಾರ ಮಾತ್ರವನ್ನು ಅವಲಂಬಿಸಿದೆ. ನಮ್ಮ ಪ್ರಮಾಣ ಗೋಚರವಾಗುವ ಪ್ರತಿಯೊಂದು ವಸ್ತುವೂ ಕಾಮರೂಪವಾದುದು. ಆದ್ದರಿಂದ ಮಂತ್ರದಲ್ಲಿರುವ ಕಕಾರವು ಗಾಯತ್ರೀ ಮಂತ್ರದಲ್ಲಿರುವತತ್ಪದಕ್ಕೆ ಸಮಾನಾರ್ಥಕವಾಗುವುದು. ಹೀಗೆ ಕಕಾರ–ತತ್ಪದಾರ್ಥಗಳ ಐಕ್ಯವನ್ನು ತಿಳಿದ ಉಪಾಸಕನು ಈಶ್ವರಸ್ವರೂಪನಾಗುವನು. || ೭ ||

ಸವಿತುರ್ವರೇಣ್ಯಮಿತಿ ಷೂಙ್ ಪ್ರಾಣಿಪ್ರಸವೇ ಸವಿತಾ
ಪ್ರಾಣಿನಃ ಸೂತೇ ಪ್ರಸೂತೇ ಶಕ್ತಿಃ ಸೂತೇ ॥ ೮ ॥

ತ್ರಿಪುರಾ ಶಕ್ತಿರಾದ್ಯೇಯಂ ತ್ರಿಪುರಾ ಪರಮೇಶ್ವರೀ ।
ಮಹಾಕುಂಡಲಿನೀ ದೇವೀ ಜಾತವೇದಸಮುಣ್ಡಲಮ್ ॥ ೯ ॥

ಯೋಽಧೀತೇ ಸರ್ವಂ ವ್ಯಾಪ್ಯತೇ । ತ್ರಿಕೋಣಶಕ್ತಿರೇಕಾರೇಣ ಮಹಾ
ಭಾಗೇನ ಪ್ರಸೂತೇ । ತಸ್ಮಾದೇಕಾರ ಏವ ಗೃಹ್ಯತೇ ॥ ೧೦ ॥

ವರೇಣ್ಯಂ ಶ್ರೇಷ್ಠಂ ಭಜನೀಯಮಕ್ಷರಂ ನಮಸ್ಕಾರ್ಯಂ ।
ತಸ್ಮಾದ್ವರೇಣ್ಯಮೇಕಾರಾಕ್ಷರಂ ಗೃಹ್ಯತ ಇತಿ ಯ ಏವಂ ವೇದ ॥ ೧೧ ॥

ಭರ್ಗೋ ದೇವಸ್ಯ ಧೀಮಹೀತ್ಯೇವಂ ವ್ಯಾಖ್ಯಾಸ್ಯಾಮಃ । ಧಕಾರೋ ಧಾರಣಾ। ಧಿಯೈವ ಧಾರ್ಯತೇ ಭಗವಾನ್ ಪರಮೇಶ್ವರಃ । ಭರ್ಗೋ ದೇವೋ ಮಧ್ಯವರ್ತಿ ತುರೀಯಮಕ್ಷರಂ ಸಾಕ್ಷಾತ್ ತುರೀಯಂ ಸರ್ವಂ ಸರ್ವಾಂತರಭೂತಂ ತುರೀಯಾಕ್ಷರಮೀಕಾರಂ ಪದಾನಾಂ ಮಧ್ಯವರ್ತೀ ತ್ಯೇವಂ ವ್ಯಾಖ್ಯಾತಂ ಭರ್ಗೋರೂಪಂ ವ್ಯಾಚಕ್ಷತೇ । ತಸ್ಮಾದ್ಭರ್ಗೋ ದೇವಸ್ಯ ಧೀತ್ಯೇವಂ ಈ ಕಾರಾಕ್ಷರಂ ಗೃಹ್ಯತೇ ॥ ೧೨ ॥

ಗಾಯತ್ರೀ ಮಂತ್ರದ ಸವಿತುರ್ವರೇಣ್ಯಂ ಎಂಬ ಭಾಗದಲ್ಲಿರುವ ಸವಿತೃಪದ, ಆದಿಮೂಲವಿದ್ಯೆಯ ಎರಡನೆಯ ಏಕಾರ ಇವುಗಳ ಸಮನ್ವಯವನ್ನು ಈ ರೀತಿಯಾಗಿ ತಿಳಿಯಬೇಕು. ಪ್ರಾಣಿಪ್ರಸವ-ಪ್ರಾಣಿಯನ್ನು ಹೆರುವುದು ಅಥವಾ ಸೃಷ್ಟಿಸುವುದು, ಈ ಅರ್ಥವುಳ್ಳ "ಷೂಜ್" ಎಂಬ ಸಂಸ್ಕೃತ ಧಾತುವಿನಿಂದ ಸವಿತೃ ಎಂಬ ಪದವು ರೂಪಹೊಂದಿದೆ. ಪರಮಾತ್ಮನು ಜಗತ್ತನ್ನೆಲ್ಲ ಸೃಷ್ಟಿಸುತ್ತಾನೆ. ಪರಮಾತ್ಮನಿಗೆ ಅಭಿನ್ನಳಾದ ಸಾವಿತ್ರೀ ಎಂಬ ಶಕ್ತಿಯು ಸೃಷ್ಟಿಸುತ್ತದೆ. ಆದ್ದರಿಂದ ಶಕ್ತಿಯನ್ನೇ ಸವಿತೃ ಪದವು ಬೋಧಿಸುತ್ತಿದೆ. ನಿಖಿಲ ಜಗತ್ತಿಗೆ ಆದಿಭೂತವಾಗಿ ಪರಮೇಶ್ವರನ ಅಂಶವಾಗಿ ಸ್ಫುರಿಸುವ ತ್ರಿಪುರಾ ಶಕ್ತಿಯೆಂದು ಕರೆಯಲ್ಪಡುವ ಆ ಶಕ್ತಿಯು ತ್ರಿಪುರಾ ದೇವೀ ಸ್ವರೂಪವು. ದೇವಿಯು ಪ್ರತಿಯೊಂದು ಪ್ರಾಣಿಯ ಶರೀರವನ್ನು ವ್ಯಷ್ಟಿರೂಪವಾದ ಮಹಾ ಕುಂಡಲಿನೀ ಸ್ವರೂಪದಿಂದ ಪ್ರವೇಶಿಸಿ ಮೂಲಾಧಾರ ತ್ರಿಕೋಣವನ್ನು ವ್ಯಾಪಿಸಿ ಇರುತ್ತಾಳೆ. ಇದನ್ನು ತಿಳಿದ ಮುನಿಯು ಸರ್ವವ್ಯಾಪಕನಾಗುತ್ತಾನೆ. ಸವಿತೃಪದದ ಅರ್ಥ ವಿವರಣೆಯು ಮುಗಿಯಿತು. ಆದಿಮೂಲವಿದ್ಯೆಯಲ್ಲಿರುವ ಏಕಾರಪ್ರತಿಪಾದ್ಯಳಾದ ತ್ರಿಕೋಣಶಕ್ತಿಯೂ ಎಲ್ಲವನ್ನೂ ಸೃಷ್ಟಿಮಾಡುವುದು. ಪ್ರಪಂಚಸೃಷ್ಟಿ ಕಾರಕತ್ವ ಗುಣದಿಂದ ಸವಿತೃಪದ-ಏಕಾರಗಳ ಅರ್ಥಗಳು ಸಮನ್ವಯವನ್ನು ಹೊಂದಿವೆ. || ೮, ೯, ೧೦ ||

ವರೇಣ್ಯ=ಉತ್ತಮವೂ, ಸೇವ್ಯವೂ, ನಮಸ್ಕರಿಸಲು ಅರ್ಹವೂ ಎಂದು ಅರ್ಥ. ಸರ್ವರಿಗೂ ಉಪಾಸ್ಯವಾದ ಏಕಾರವು ವರೇಣ್ಯವು. ಆದ್ದರಿಂದ ವರೇಣ್ಯಪದ, ಏಕಾರಗಳು ಶ್ರೇಷ್ಠತ್ವಾದಿಗುಣಗಳ ಸಾಮ್ಯದಿಂದ ಒಂದೇ ಅರ್ಥದಲ್ಲಿ ಸಮನ್ವಯವನ್ನು ಹೊಂದಿವೆ. ಈ ರೀತಿ ತಿಳಿದು ಉಪಾಸನೆಮಾಡುವವನು ಸರ್ವ ಸೇವ್ಯನಾಗುವನು. ಹೀಗೆ ಸವಿತುರ್ವರೇಣ್ಯಂ ಎಂಬ ಅಂಶಕ್ಕೂ ಏಕಾರಕ್ಕೂ ಸಮನ್ವಯ ಹೇಳಿದಂತಾಯಿತು. || ೧೧ ||

"ಭರ್ಗೋ ದೇವಸ್ಯಧೀ" ಎಂಬ ಗಾಯತ್ರೀಮಂತ್ರ ಭಾಗಕ್ಕೂ ಈ ಕಾರಕ್ಕೂ ಈ ರೀತಿ ಸಮನ್ವಯವು :—ಧೃಧಾತುವಿಗೆ ಸಂಬಂಧಪಟ್ಟಂತೆ ಕಾಣುವ ಧಕಾರವು ಧಾರಣವೆಂಬ ಅರ್ಥವನ್ನು ಸೂಚಿಸುವುದು. ಇದರಿಂದ ಮನಸ್ಸಿನಿಂದಲೇ ಗ್ರಹಿಸಿ ಧರಿಸಲ್ಪಡುವ ಭಗವಂತನಾದ ಪರಮೇಶ್ವರನನ್ನು ಧಕಾರದಿಂದ ತಿಳಿದುಕೊಳ್ಳಬಹುದು. ಪರಮೇಶ್ವರನ ಸ್ವರೂಪವಾದ ಚೈತನ್ಯಜ್ಯೋತಿಯು ವಿಶ್ವ-ತೈಜಸ-ಪ್ರಾಜ್ಞತ್ರಯಾತೀತವಾಗಿಯೂ ಶಾಶ್ವತವಾಗಿಯೂ ಇರುವುದಲ್ಲದೇ ಅಂತರ್ಯಾಮಿ ರೂಪದಿಂದ ವಿಶ್ವಕ್ಕೆಲ್ಲ ಮಧ್ಯವರ್ತಿಯಾಗಿರುವುದು. ತುರೀಯ ಸ್ವರೂಪವು ಸರ್ವ ವಸ್ತುಗಳ ಬಾಹ್ಯಾಂತರಗಳನ್ನು ವ್ಯಾಪಿಸಿದೆಯೆಂಬುದು ಉಪನಿಷತ್ತಿನಲ್ಲೆಲ್ಲ ಪ್ರಸಿದ್ಧವಾದುದು. ವರ್ಣಮಾಲೆಯಲ್ಲಿ ಈ ಕಾರವೂ ಮಧ್ಯವರ್ತಿಯಾಗಿದೆಯಾದುದರಿಂದ

ಮಹೀತ್ಯಸ್ಯ ವ್ಯಾಖ್ಯಾನಂ ಮಹತ್ತ್ವಂ ಜಡತ್ವಂ ಕಾಠಿನ್ಯಂ ವಿದ್ಯತೇ ಯಸ್ಮಿನ್ನಕ್ಷರೇ ತನ್ಮಹಿ। ಲಕಾರಃ ಪರಂ ಧಾಮ। ಕಾಠಿನ್ಯಾಢ್ಯಂ ಸಸಾಗರಂ ಸಪರ್ವತಂ ಸಸಪ್ತದ್ವೀಪಂ ಸಕಾನನ ಮುಜ್ಜ್ವಲದ್ರೂಪಂ ಮಂಡಲಮೇವೋಕ್ತಂ ಲಕಾರೇಣ। ಪೃಥ್ವೀ ದೇವೀ ಮಹೀತ್ಯನೇನ ವ್ಯಾಚಕ್ಷತೇ ॥ ೧೩ ॥

ಧಿಯೋ ಯೋ ನಃ ಪ್ರಚೋದಯಾತ್। ಪರಮಾತ್ಮಾ ಸದಾಶಿವ ಆದಿಭೂತಃ ಪರಃ ಸ್ಥಾಣುಭೂತೇನ ಲಕಾರೇಣ ಜ್ಯೋತಿರ್ಲಿಂಗಮಾತ್ಮಾನಂ ಧಿಯೋ ಬುದ್ಧಯಃ ಪರೇ ವಸ್ತುನಿ ಧ್ಯಾನೇಚ್ಛಾರಹಿತೇ ನಿರ್ವಿಕಲ್ಪಕೇ ಪ್ರಚೋದಯಾತ್ ಪ್ರೇರಯೇದಿತ್ಯುಚ್ಚಾರರಹಿತಂ ಚೇತಸ್ಯೈವ ಚಿಂತಯಿತ್ವಾ ಭಾವಯೇದಿತಿ ॥ ೧೪ ॥

ಪರೋ ರಜಸೇಽಸಾವದೋಮಿತಿ ತದವಸಾನೇ ಪರಂ ಜ್ಯೋತಿರಮಲಂ ಹೃದಿ ದೈವತಂ ಚೈತನ್ಯಂ ಚಿಲ್ಲಿಂಗಂ ಹೃದಯಾಗಾರವಾಸಿನೀ ಹೃಲ್ಲೇಖೇತ್ಯಾದಿನಾ ಸ್ಪಷ್ಟಂ ವಾಗ್ಭವಕೂಟಂ ಪಂಚಾಕ್ಷರಂ ಪಂಚಭೂತಜನಕಂ ಪಂಚಕಲಾಮಯಂ ವ್ಯಾಪಶ್ಯತ ಇತಿ ಯ ಏವಂ ವೇದ ॥ ೧೫ ॥

"ಭರ್ಗೋದೇವಸ್ಯಧೀ" ಎಂಬ ಅಂಶದ ಅರ್ಥವನ್ನೇ ಅನುವಾದಮಾಡಬಹುದಾಗಿದೆ. ಎಂದು ಶ್ರುತಿಗಳು ಹೇಳುತ್ತಿವೆ. ಆದ್ದರಿಂದ, ಗಾಯತ್ರೀ ಮಂತ್ರದ ಭರ್ಗೋದೇವಸ್ಯಧೀ ಎಂಬ ಅಂಶವೂ ಆದಿಮೂಲವಿದ್ಯೆಯ ಈಕಾರದೊಡನೆ ಸಮನ್ವಯ ಹೊಂದಿದಂತೆ ಇದೆ. || ೧೨ ||

ಮಹೀ ಎಂಬ ಗಾಯತ್ರೀ ಮಂತ್ರದ ಭಾಗಕ್ಕೂ ಆದಿಮೂಲವಿದ್ಯೆಯ ಲಕಾರಕ್ಕೂ ಸಮನ್ವಯವನ್ನು ವಿವರಿಸುತ್ತದೆ. ಮಹೀ ಎಂಬುವುದನ್ನು ವಿವರಿಸಿದರೆ "ಮಹತ್ವ, (ಎಂದರೆ ಇತರ ವಸ್ತುಗಳಿಗಿಂತ ದೊಡ್ಡ ಪರಿಮಾಣ), ಜಡತ್ವ, ಕಠಿನತ್ವ ಎಂಬ ಗುಣಗಳು ಅತಿಶಯವಾಗಿ ಯಾವ ಅಕ್ಷರದಲ್ಲಿ ಅಡಕವಾಗಿವೆಯೋ ಆ ಅಕ್ಷರವು" ಎಂದು ಅರ್ಥವು ತೋರುವುದು. ಲಕಾರವು ಮೇಲೆ ಹೇಳಿದ ಸಕಲ ಗುಣಗಳಿಂದ ಪರಿಪೂರ್ಣವಾಗಿರುವುದರಿಂದ ಅದು ಪರಮ ಸ್ಥಾನವೂ, ಮಹೀ ಎಂಬ ಪದದಿಂದ ಕರೆಯಲ್ಪಡುವುದೂ ಆಗಿದೆ. ಅಂತಹ ಲಕಾರವು ತಾನು ಪೃಥ್ವಿಯ ಬೀಜಾಕ್ಷರವಾಗಿರುವುದರಿಂದ ಕಾಠಿನ್ಯ ಗುಣಕ್ಕೆ ಆಧಾರವಾಗಿರುವ, ಸಮುದ್ರ-ಪರ್ವತ-ಅರಣ್ಯ-ಸಪ್ತದ್ವೀಪಗಳೆಂಬ ನಾನಾಂಶಗಳಿಂದ ಕೂಡಿದ, ಉಜ್ಜ್ವಲರೂಪವಾದ ಭೂಮಂಡಲವನ್ನೇ ಬೋಧಿಸುವುದು. ಪೃಥ್ವಿಗೆ ಮಹೀಎಂಬ ಹೆಸರೂ ನಿಘಂಟುಗಳಲ್ಲಿ ಹೇಳಲ್ಪಟ್ಟಿದೆ. ಈ ಏಕಾರ್ಥಾನುಸಂಧಾನದಿಂದ ಮಹೀ ಎಂಬ ಮಂತ್ರ ಭಾಗ, ಲ ವರ್ಣಗಳು ಪರಸ್ಪರ ಸಮನ್ವಯವನ್ನು ಹೊಂದುವುವು. || ೧೩ ||

ಧಿಯೋಯೋನಃ ಪ್ರಚೋದಯಾತ್ ಎಂಬ ಗಾಯತ್ರೀ ಮಂತ್ರ ಭಾಗಕ್ಕೆ ಹಿಂದಿನ ಸಮನ್ವಯಕ್ಕೆ ಸೇರಿದಂತೆ ವ್ಯಾಖ್ಯಾನವನ್ನು ಅರಿಯಬೇಕು. ಆ ವ್ಯಾಖ್ಯಾನ ಕ್ರಮವು:—ಪೃಥಿವೀಮಂಡಲವನ್ನು ಲಕಾರವು ಬೋಧಿಸಿರುತ್ತೆ. ಆ ಪೃಥಿವಿಯಲ್ಲಿ ಕಾಣುವ ನಾಮ-ರೂಪಗಳಿಗೆ ವಿಲಕ್ಷಣವಾದ ಸ್ವಭಾವವನ್ನು ಆತ್ಮನು ಹೊಂದಿರುವನು. ಆದ್ದರಿಂದ ಪ್ರತೀಕದಂತಿರುವ ಲಕಾರದಿಂದ ಪೃಥಿವಿಯನ್ನು ತಿಳಿದುಕೊಳ್ಳುವುದರ ಮೂಲಕ ಕ್ರಮವಾಗಿ ನಾಮರೂಪ ವಿಲಕ್ಷಣನಾಗಿರುವ ಜ್ಯೋತಿರ್ಲಿಂಗ ರೂಪಿಯಾದ ಆತ್ಮನನ್ನೂ ಸರ್ವವಸ್ತುಗಳಿಗೆ ಆದಿಭೂತನಾಗಿರುವ ಪರಮಾತ್ಮ ಅಥವಾ ಸದಾಶಿವನನ್ನೂ ಏಕರೂಪದಿಂದ ಧ್ಯಾನಿಸಬೇಕು. ಯಾವ ಪರಮಾ (ಅ) ತ್ಮನು ನಮ್ಮ ಬುದ್ಧಿಗಳನ್ನು ಧ್ಯಾನೇಚ್ಛಾದಿ ವಿಕಾರಗಳಿಲ್ಲದ ಪರಮವಸ್ತುವಿನಲ್ಲಿ ಪ್ರೇರೇಪಿಸುವನೋ ಅಂತಹ ಪರಮಾ (ಅ) ತ್ಮನನ್ನು ಮನಸ್ಸಿನಿಂದ ಅಹಂ ಬ್ರಹ್ಮಾಸ್ಮಿ ಎಂದು ಧ್ಯಾನಿಸಬೇಕು. || ೧೪ ||

ಗಾಯತ್ರೀ ಮಂತ್ರದ ನಾಲ್ಕನೆಯಪಾದ-ಆದಿಮೂಲವಿದ್ಯೆಯ ಹ್ರೀಂಕಾರ ಇವುಗಳ ಸಮನ್ವಯವು:—ಸತ್ವ-ರಜಸ್-ತಮಸ್ ಎಂಬ ಗುಣತ್ರಯಾತೀತನಾದ ಪರಮಾತ್ಮನು ತಾನೇ, ಆತ್ಮವಿಲಕ್ಷಣಗಳಾದ ಅಥವಾ ಅನಾತ್ಮವೆಂದು ಕರೆಯಲ್ಪಡುವ ಮಿಕ್ಕ ಎಲ್ಲ ವಿಪ್ರಕೃಷ್ಟ ವಸ್ತುಗಳ ಅವಸಾನದಲ್ಲಿ ಲಯಾಧಿಷ್ಠಾನವಾಗಿ ನಿಲ್ಲುವನೂ

ಅಥ ತು ಪರಂ ಕಾಮಕಲಾಭೂತಂ ಕಾಮಕೂಟಮಾಹುಃ । ತತ್ಸವಿತುರ್ವರೇಣ್ಯಮಿತ್ಯಾದಿ ದ್ವಾತ್ರಿಂಶದಕ್ಷರೀಂ ಪಠಿತ್ವಾ ತದಿತಿ ಪರಮಾತ್ಮಾ ಸದಾಶಿವೋಽಕ್ಷರಂ ವಿಮಲಂ ನಿರುಪಾಧಿತಾದಾತ್ಮ್ಯಪ್ರತಿಪಾದನೇನ ಹಕಾರಾಕ್ಷರಂ ಶಿವರೂಪಂ ಅನಕ್ಷರಮಕ್ಷರಂ ವ್ಯಾಲಿಖ್ಯತ ಇತಿ ತತ್ಪರಾಗವ್ಯಾವೃತ್ತಿಮಾದಾಯ ಶಕ್ತಿಂ ದರ್ಶಯತಿ ॥ ೧೬ ॥

ತತ್‌ಸವಿತುರಿತಿಪೂರ್ವೇಣಾಧ್ವನಾ ಸೂರ್ಯಾಥಶ್ಚಂದ್ರಿಕಾಂ ವ್ಯಾಲಿಖ್ಯ ಮೂಲಾದಿಬ್ರಹ್ಮರಂಧ್ರಗಂ ಸಾಕ್ಷರಮದ್ವಿತೀಯಮಾಚಕ್ಷತ ಇತ್ಯಾಹ ಭಗವಂತಂ ದೇವಂ ಶಿವಶಕ್ತ್ಯಾತ್ಮಕಮೇವೋದಿತಮ್ ॥ ೧೭ ॥

ಪರಂಜ್ಯೋತಿ ರೂಪನೂ, ನಿರ್ಮಲನೂ, ಸರ್ವಪ್ರಾಣಿಗಳ ಹೃದಯಗುಹೆಯಲ್ಲಿ ಚಿಚ್ಛಕ್ತಿ ದೇವತಾರೂಪದಿಂದ ಇರುವವನೂ ಆದ್ದರಿಂದ ಹಾರ್ದಗುಹೆಯೆಂಬ ಗೃಹದಲ್ಲಿ ವಾಸಮಾಡುವ ಅಂತಹ ಆತ್ಮರೂಪವಾದ ಚಿಚ್ಛಕ್ತಿಯು ಹ್ರೀಂಕಾರದಿಂದ ಹೇಳಲ್ಪಡುತದೆ. ಪರೋರಜಸೇ ಮುಂತಾದ ಗಾಯತ್ರಿಯ ನಾಲ್ಕನೇ ಪಾದವೂ ಗುಣತ್ರಯಾತೀತತ್ವ ಮುಂತಾದ ಗುಣಗಳಿಂದ ಇದೇ ಶಕ್ತಿಯನ್ನೇ ಹೇಳಿರುವುದು. ಈ ರೀತಿಯಾಗಿ ತತ್ಸವಿತುಃ ಎಂದು ಪ್ರಾರಂಭಿಸುವ ಗಾಯತ್ರಿಯ ನಾಲ್ಕು ಪಾದಗಳಿಂದ ಆದಿಮೂಲ ವಿದ್ಯೆಯ ಮೊದಲನೆಯ ಐದು ಅಕ್ಷರಗಳಿಂದ ಕೂಡಿದ, ಪಂಚಭೂತಗಳ ಉತ್ಪತ್ತಿ ಕಾರಣವಾದ, ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತಕಲಾ ಎಂಬ ಐದು ಕಲೆಗಳಿಂದ ಕೂಡಿದ ವಾಗ್ಭವ ಕೂಟವುಸ್ಪಷ್ಟವಾಗಿ ಸಮನ್ವಯವಾಗುವಂತೆ ವ್ಯಾಖ್ಯಾನ ಮಾಡಲ್ಪಟ್ಟಿದೆ. ಈ ರೀತಿ ಸಮನ್ವಯವನ್ನು ತಿಳಿದು ಉಪಾಸಿಸುವ ಉಪಾಸಕನು ಅತಿಶಯವಾದ ಫಲವನ್ನು ಹೊಂದುವನು. ॥ ೧೫ ॥

ಮುಂದಿನ ಭಾಗವು ಗಾಯತ್ರೀ ಮಂತ್ರಕ್ಕೂ ಕಾಮಕೂಟಕ್ಕೂ ಸಮನ್ವಯವನ್ನು ತೋರಿಸುವುದು. ಕಾಮಕೂಟವನ್ನು ಕಾಮಕಲೆಯ ಪರಿಣಾಮವೆಂದು ಮಂತ್ರ ಶಾಸ್ತ್ರಜ್ಞರು ಹೇಳುತ್ತಾರೆ. "ತತ್ಸವಿತುಃ" ಎಂದು ಪ್ರಾರಂಭಿಸಲ್ಪಡುವ ಮೂವತ್ತೆರಡು ಅಕ್ಷರಗಳಿಂದ ಕೂಡಿದ ಗಾಯತ್ರೀ ಮಂತ್ರದ ಮೊದಲಿನಲ್ಲಿ "ತತ್" ಎಂಬ ಪದವು ಇದೆ. ಆ ಪದಕ್ಕೆ ಪರಮಾತ್ಮಾ ಎಂದು ಅರ್ಥವು. ಅಂತಹ ಪರಮಾತ್ಮನು ಸರ್ವಕಾಲದಲ್ಲಿಯೂ ಶಿವಸ್ವರೂಪನೂ, ನಾಶವಿಲ್ಲದವನೂ ಆಗಿರುವುದರಿಂದ ಸದಾ ಶಿವ-ಅಕ್ಷರ-ವಿಮಲ ಮುಂತಾದ ವಿಶೇಷಣಗಳಿಂದ ಕೂಡಿದವನು. ಆದಿಮೂಲ ವಿದ್ಯೆಯ ಎರಡನೇ ಭಾಗವು "ಕಾಮಕೂಟ" ವೆಂದು ಕರೆಯಲ್ಪಡುವುದು. ಅದರಲ್ಲಿ ಹ-ಸ-ಕ-ಹ-ಲ-ಹ್ರೀಂ ಎಂದು ಆರು ಅಕ್ಷರಗಳಿವೆ. ಅವುಗಳ ಮೊದಲನೆಯ ವರ್ಣವು ಹಕಾರವು. ಇದು ಪರಮಾತ್ಮನನ್ನು ಬೋಧಿಸುತ್ತದೆ. ಪರಮಾತ್ಮರೂಪನಾಗಿರುವ ಶಿವನಿಗೂ ಹಕಾರಕ್ಕೂ ಸಹ ನಿರುಪಾಧಿಕ ರೂಪದಿಂದ ಐಕ್ಯವನ್ನು ತೋರಿಸುವ ಅಭಿಪ್ರಾಯದಿಂದ ಶಿವರೂಪವನ್ನು ಹಕಾರದಿಂದ ಬರೆಯಲ್ಪಡುವುದು. ಶಿವನಲ್ಲಿ ತಾಲು-ಮುಂತಾದ ಸ್ಥಾನಗಳಿಂದ ಅಭಿವ್ಯಕ್ತಿ ಹೊಂದುವ ವರ್ಣರೂಪವು ನಿಜವಾದುದಲ್ಲ. ವರ್ಣದಲ್ಲಿರುವ ಪರಾಕ್ ಸ್ವರೂಪವನ್ನು ಬಿಡದೇ ಅಕ್ಷರ ರೂಪನಲ್ಲದ ಶಿವನು ಅಕ್ಷರರೂಪನಾಗಿ ಹಕಾರದ ಶಕ್ತಿಯಿಂದ ಬೋಧಿಸಲ್ಪಡುವುದರಿಂದ ಶಿವತಾದಾತ್ಮ್ಯದಿಂದ ಹಕಾರವು ಬರೆಯಲ್ಪಡುತ್ತದೆ. ॥ ೧೬ ॥

ತತ್ ಸವಿತುಃ ಎಂಬ ಮಂತ್ರದಲ್ಲಿರುವ ತತ್ ಪದಕ್ಕೂ ಸೂರ್ಯ ಬೀಜವಾದ ಹಕಾರಕ್ಕೂ ಸಮನ್ವಯವು ತೋರಿಸಲ್ಪಟ್ಟಿತು. ಮುಂದೆ ಸವಿತೃಪದ ಸಕಾರಗಳ ಸಮನ್ವಯವನ್ನು ತೋರಿಸಬೇಕು. ಮೊದಲಿನ ಕ್ರಮದಂತೆ ಗಾಯತ್ರಿಯಲ್ಲಿ ಸವಿತೃ ಎಂಬ ಪದವು ಎರಡನೆಯದಾಗಿದೆ. ಆದಿಮೂಲವಿದ್ಯೆಯಲ್ಲಿ ಸೂರ್ಯ ಬೀಜಾಕ್ಷರವಾದ

ಶಿವೋಽಯಂ ಪರಮಂ ದೇವಂ ಶಕ್ತಿರೇಷಾ ತು ಜೀವಜಾ ।
ಸೂರ್ಯಾಚಂದ್ರಮಸೋರ್ಯೋಗಾದ್ಧಂಸಸ್ತತ್ಪದಮುಚ್ಯತೇ ॥೧೮॥

ತಸ್ಮಾದುಜ್ಜೃಂಭತೇ ಕಾಮಃ ಕಾಮಾನ್ ಕಾಮಃ ಪರಃ ಶಿವಃ ।
ಕಾರ್ಣೋಽಯಂ ಕಾಮದೇವೋಽಯಂ ವರೇಣ್ಯಂ ಭರ್ಗ ಉಚ್ಯತೇ ॥ ೧೯ ॥

ತತ್ಸವಿತುರ್ವರೇಣ್ಯಂ ಭರ್ಗೋ ದೇವಃ ಕ್ಷೀರಂ ಸೇವನೀಯಮಮೃತಮುಷ್ಣಮಕ್ಷರಂ ಪರಮಾತ್ಮಜೀವಾತ್ಮನೋರ್ಯೋಗಾತ್ ತದಿತಿ ಮಕ್ಷರಂ ತೃತೀಯಂ ಹ ಇತಿ ತದೇವ ಸದಾಶಿವ ಏವ ನಿಷ್ಕಲ್ಮಷೋ ದೇವೋಽನ್ತ್ಯಮಕ್ಷರಂ ವ್ಯಾಕ್ರಿಯತೇ ಪರಮಂ ಪದಮ್ ॥ ೨೦ ॥

ಹಕಾರವನ್ನು ಬರೆದು ಅದರ ಮುಂದೆ ಚಂದ್ರಬೀಜ ಸಕಾರವನ್ನು ಬರೆದರೆ ಸಕಾರವು ಎರಡನೆಯದಾಗುವುದು. ಸವಿತೃಪದಕ್ಕೂ ಸಕಾರಕ್ಕೂ ರೂಪವು ಒಂದೇ ವಿಧ ವಾಗಿದೆ. ಸವಿತೃ ಪದಕ್ಕೆ ಅರ್ಥವಾಗಿರುವ ಸವಿತೃ ಚೈತನ್ಯವು ಮೂಲಾಧಾರ ಮೊದಲ್ಗೊಂಡು ಬ್ರಹ್ಮರಂಧ್ರ ಪರ್ಯಂತವೂ ವ್ಯಾಪಿಸಿಕೊಂಡಿದೆ. ಶ್ರುತಿಯು ಅಂತಹ ಸವಿತೃ ಚೈತನ್ಯವನ್ನೂ ಸಕಾರವನ್ನೂ ಅದ್ವಿತೀಯವನ್ನಾಗಿ ವರ್ಣಿಸುತ್ತದೆ. ಹೀಗೆ ತತ್-ಸವಿತೃ ಎರಡು ಪದಗಳೊಡನೆ ಹ, ಸ, ವರ್ಣಗಳ ಸಮನ್ವಯವನ್ನರಿತು ಧ್ಯಾನಮಾಡಲ್ಪಡುವ ದೇವತೆಯನ್ನು ಶಿವ-ಶಕ್ತ್ಯಾತ್ಮಕವೆಂದು ಹೇಳುತ್ತಾರೆ. ॥ ೧೭ ॥

ಬ್ರಹ್ಮಜ್ಞಾನಿಗಳು ಪರಮಾತ್ಮನೆಂದು ಕರೆಯುವ ಸವಿತೃವು ಶಿವನು. ಜೀವ ರೂಪವನ್ನು ತಾಳಿರುವ ಪ್ರಕೃತಿಯು ಶಕ್ತಿಯು. ಹಕಾರಕ್ಕೆ ಸೂರ್ಯ ಎಂದು ಅರ್ಥವು. ತತ್-ಪದಕ್ಕೆ ಶಿವನೆಂದು ಅರ್ಥ, ಹಾಗೆ ಸಕಾರಕ್ಕೆ ಚಂದ್ರ ಎಂದು ಅರ್ಥ. ತ್ವಂ ಪದಕ್ಕೆ ಜೀವಭೂತವಾದ ಪ್ರಕೃತಿಯೆಂದು ಅರ್ಥ. ಹೀಗಿರಲು ಸೂರ್ಯಚಂದ್ರರ ಸಂಯೋಗದಿಂದ ಹೇಯಾಂಶಗಳನ್ನು ಹಾನಮಾಡಿದಲ್ಲಿ ಶುದ್ಧವಾಗಿರುವ ಚೈತನ್ಯಗಳ ಐಕ್ಯಾಂಶವು ಲಭಿಸುವುದರಿಂದ ಅಂತಹ ಅದ್ವಿತೀಯ ನಿರ್ವಿಶೇಷ ಬ್ರಹ್ಮವಸ್ತುವನ್ನು ಪ್ರತಿಪಾದಿಸಿದಂತಾಯಿತು. ॥ ೧೮ ॥

ಯಾವ ಪರಮಶಿವನು ಕಾಮಪದದಿಂದ ಉಪಲಕ್ಷಿತವಾದ ಸಕಲ ವಸ್ತುಗಳನ್ನೂ ಸೃಜಿಸಿದನೋ ಅಂತಹ ಪರಮಶಿವನಿಂದ ಕಾಮರೂಪವಾದ ಕಕಾರವು ಹುಟ್ಟಿತು. ಸರ್ವರಿಂದಲೂ ಪ್ರಾರ್ಥನೀಯವಾದ ಸವಿತೃದೇವನ, ನಿರತಿಶಯ ಜ್ಯೋತಿಃಸ್ವರೂಪವು ಕಕಾರ–ಅಥವಾ ಕಾಮದೇವ, ಪರಮೇಶ್ವರನೆಂದು ಕರೆಯಲ್ಪಡುವುದು. ॥ ೧೯ ॥

ಪರಮಾತ್ಮನ ಶ್ರೇಷ್ಠತಮವಾದ ಆ ಜ್ಯೋತಿಸ್ಸ್ವರೂಪವು ದ್ಯೋತನಾತ್ಮಕವೂ, ಅವಿದ್ಯಾಧಾರತ್ವವು ಕ್ಷೀಣವಾಗಿರುವುದರಿಂದ ಕ್ಷೀರವೆನಿಸಲ್ಪಡುವುದಾಗಿಯೂ, ಮುಮುಕ್ಷುಗಳಿಂದ ಸ್ವಾತ್ಮೈಕ್ಯದಿಂದ ಸೇವಿಸಲ್ಪಡುವುದೂ ಆದ ಅಕ್ಷರಸ್ವರೂಪವಾಗಿರುತ್ತದೆ. ಇದೇ ಈಶ್ವರ ಚೈತನ್ಯವು. ಕರ್ಮಫಲಗಳನ್ನು ಸಂತತವಾಗಿ ಅನುಭವಿಸುತ್ತಿರುವುದರಿಂದ ನಿಜಸ್ವರೂಪವನ್ನೇ ಮರೆತಿರುವ ಅಕ್ಷರವು ಜೀವಚೈತನ್ಯವು. ಈ ಎರಡು ಚೈತನ್ಯಗಳಲ್ಲಿ ಅಂಟಿಕೊಂಡಿರುವ ಧರ್ಮಗಳನ್ನು ಕಳೆದುಕೊಂಡರೆ ಶಾಶ್ವತವಾಗಿ ನಿಲ್ಲುವ ಚೈತನ್ಯಸ್ವರೂಪವು ಒಂದೇ ಆಗಿರುವುದರಿಂದ ಅದನ್ನು ತೃತೀಯವಾದ ಸ್ಪಷ್ಟವಾದ ಅಕ್ಷರವೆಂದು ಕರೆಯುವರು. ಅಂತಹ ಶುದ್ಧ ಸ್ವರೂಪವನ್ನೇ ಸದಾಶಿವನೆಂದೂ, ಕಶ್ಮಲದೋಷವಿಲ್ಲದ್ದರಿಂದ ದ್ಯೋತನಾತ್ಮಕನಾದ ದೇವನೆಂದೂ ವ್ಯಾಖ್ಯಾನಮಾಡುತ್ತಾರೆ. ಇದೇ ಮುಮುಕ್ಷುಗಳಿಗೆ ಪ್ರಾಪ್ಯವಾದ ಪರಮ ಪದವು. ॥ ೨೦ ॥

ಧೀತಿ ಧಾರಣಂ ವಿದ್ಯತೇ ಜಡತ್ವಧಾರಣಂ ಮಹೀತಿ ಲಕಾರಃ ಶಿವಾಥ ಸ್ತಾತ್ತು ಲಕಾರಾರ್ಥಃ ಸ್ಪಷ್ಟಮಂತ್ಯಮಕ್ಷರಂ ಪರಮಂ ಚೈತನ್ಯಂ ಧಿಯೋ ಯೋ ನಃ ಪ್ರಚೋದಯಾತ್ ॥ ೨೦ ॥

ಪರೋ ರಜಸೇಽಸಾವದೋ ಮಿತ್ಯೇವಂ ಕೂಟಂ ಕಾಮಕಲಾಲಯಂ ಷಡಧ್ವಪರಿವರ್ತಕೋ ವೈಷ್ಣವಂ ಪರಮಂ ಧಾಮ್ನೈತಿ ಭಗವಾಂಶ್ಚೈತಸ್ಮಾದ್ಯ ಏವಂ ವೇದ ॥ ೨೨ ॥

ಅಥೈತಸ್ಮಾದಪರಂ ತೃತೀಯಂ ಶಕ್ತಿಕೂಟಂ ಪ್ರತಿಪದ್ಯತೇ ದ್ವಾತ್ರಿಂಶ ದಕ್ಷಯರ್ಾ ಗಾಯತ್ರ್ಯಾ ॥ ೨೩ ॥

ತತ್ ಸವಿತುರ್ವರೇಣ್ಯಂ ತಸ್ಮಾದಾತ್ಮನ ಆಕಾಶ ಆಕಾಶಾದ್ವಾಯುಃ ಸ್ಫುರತೇ ತದಧೀನಂ ವರೇಣ್ಯಂ ಸಮುದೀಯಮಾನಂ ಸವಿತುರ್ವಾ ಯೋಗ್ಯೋ ಜೀವಾತ್ಮಪರಮಾತ್ಮಸಮುದ್ಭವಸ್ತಂ ಪ್ರಕಾಶಶಕ್ತಿರೂಪಂ ಜೀವಾಕ್ಷರಂ ಸ್ಪಷ್ಟಮಾಪದ್ಯತೇ ॥೨೪ ॥

ಗಾಯತ್ರೀ ಮಂತ್ರದಲ್ಲಿರುವ ಧೀ ಎಂಬ ವರ್ಣವು ಧಾರಣವೆಂಬ ಅರ್ಥವನ್ನು ಸೂಚಿಸುವುದಾಗಿ ಇದೆ. ಆದಿ ವಿದ್ಯೆಯಲ್ಲಿರುವ ಲಕಾರವು ಪೃಥಿವೀ ಬೀಜಾಕ್ಷರವಾದುದರಿಂದ ಜಡತ್ವ, ಸ್ಥೂಲತ್ವ ಮುಂತಾದ ಗುಣಗಳನ್ನು ಧರಿಸಿಕೊಂಡಿರುವ ಪೃಥಿವಿಯನ್ನು ಬೋಧಿಸುತ್ತದೆ. ಶಿವಬೀಜಾಕ್ಷರವಾದ ಹಕಾರದ ಒತ್ತಿನಲ್ಲಿ ಇರುವ ಲಕಾರದಿಂದ ಬೋಧಿಸಲ್ಪಟ್ಟ ಪೃಥಿವಿಯಲ್ಲಿರುವ ಜಡತ್ವಾದಿ ವಿಕಾರಗಳು ಶೂನ್ಯವಾದರೆ ಕಾರಣವಾದ ಪರಮಾತ್ಮಚೈತನ್ಯದಲ್ಲಿ ಪೃಥಿವೀತತ್ವವು ಐಕ್ಯಹೊಂದಿ ನಿರ್ವಿಶೇಷ ಪರಬ್ರಹ್ಮಸ್ವರೂಪವಾಗುವುದು. ಅಂತಹ ಬ್ರಹ್ಮಚೈತನ್ಯವೇ ನಮ್ಮ ಬುದ್ಧಿವೃತ್ತಿಗಳನ್ನು ಪ್ರೇರೇಪಿಸುತ್ತಿರುವುದು. ‖ ೨೧ ‖

ಪರೋ ರಜಸೇಸಾವದೋಮ್ ಎಂಬ ಗಾಯತ್ರೀ ಮಂತ್ರದ ನಾಲ್ಕನೇ ಪಾದದಲ್ಲಿರುವ ವರ್ಣಗಳ ಕೂಟವು ಕಾಮುಕೂಟರೂಪವಾದದ್ದು. ಇದು ವಾಗ್ಭವ ಕೂಟವೆಂಬ ಕಾಮುಕಲಾಕ್ಕೆ ಆಧಾರರೂಪವಾಗಿದೆ. ಇದನ್ನು ವರ್ಣಾಧ್ವ ಮೊದಲಾಗಿ ತತ್ವಾಧ್ವಪರ್ಯಂತವಿರುವ ಷಡಧ್ವಗಳ ಅಭೇದದಿಂದ ಧ್ಯಾನಮಾಡುವ ಮಂತ್ರೋಪಾಸಕನೂ, ಈ ತತ್ವಜ್ಞಾನಿಯೂ ಪರಮಾತ್ಮನ ಐಕ್ಯವನ್ನು ಹೊಂದುತ್ತಾನೆಂದು ಪರಮಾತ್ಮನೇ ಉಪದೇಶಮಾಡಿರುವನು. ‖ ೨೨ ‖

ವಾಗ್ಭವಕೂಟ, ಕಾಮುಕೂಟಗಳ ಮುಂದಿನ ಆದಿಮಹಾ-ವಿದ್ಯೆಯ ಅಂಶಕ್ಕೆ ಶಕ್ತಿಕೂಟವೆಂದು ಹೆಸರು. ಇದು ಮುಂದೆ ವಿವರಿಸುವ ರೀತಿಯಲ್ಲಿ ಮಹಾಮಂತ್ರವಾದ ಗಾಯತ್ರಿಯೊಡನೆ ಸಮನ್ವಯವನ್ನು ಹೊಂದಿದೆ. ಗಾಯತ್ರೀ ಮಂತ್ರದ ನಾಲ್ಕು ಪಾದಗಳಲ್ಲಿ ಸೇರಿ ಮೂವತ್ತೆರಡು ಅಕ್ಷರಗಳು ಇವೆಯೆಂಬುದನ್ನು ಹಿಂದೆಯೇ ಹೇಳಿರುತ್ತದೆ. ‖ ೨೩ ‖

ಶಕ್ತಿಕೂಟದಲ್ಲಿ ಮೊದಲನೆಯ ವರ್ಣವು ಸಕಾರವು. ಇದು ಗಾಯತ್ರೀ ಮಂತ್ರದ ಮೊದಲನೆಯ ಪಾದದ ಜೊತೆಗೆ ಸಮನ್ವಯವನ್ನು ಹೊಂದಿದೆ. ಜಗತ್ಕಾರಣನಾದ ಪರಮಾತ್ಮನ ಜ್ಯೋತಿರೂಪವನ್ನು ತತ್ಸವಿತುರ್ವರೇಣ್ಯಂ ಎಂಬ ಭಾಗವು ತಿಳಿಸುತ್ತಿದೆ. ಆ ಪರಮಾತ್ಮಚೈತನ್ಯದಿಂದಲೇ ಆಕಾಶ-ವಾಯು ಮುಂತಾದ ಕ್ರಮಗಳಿಂದ ಪಂಚಭೂತಗಳು ಆದಿಯಾಗಿ ಪ್ರಪಂಚವೂ ಜೀವಾತ್ಮರ ನಾನಾ ವಿಧವಾದ ಶರೀರೋಪಾಧಿಗಳೂ ಹುಟ್ಟಿ ಆ ಉಪಾಧಿಯಿಂದ ಜೀವ-ಪರಮಾತ್ಮರೆಂದು ಭಾಗದ್ವಯವು ಕಲ್ಪಿತವಾಗಿದೆ. ಸಕಾರವು ಇದರಲ್ಲಿ ಪ್ರಕಾಶಶಕ್ತಿಯಿಂದ ಕೂಡಿದ ವಿಕಾರಶೂನ್ಯವಾದ ಜೀವನ ಶುದ್ಧಸ್ವರೂಪವನ್ನು ಬೋಧಿಸುವುದರಿಂದಲೂ "ತತ್ಸವಿತುಃ" ಎಂಬ ಅಂಶವು ಪರಮಾತ್ಮನ ಶುದ್ಧಚೈತನ್ಯವನ್ನು ಬೋಧಿಸುವುದರಿಂದಲೂ ಶುದ್ಧಚೈತನ್ಯಗಳ ಪಾರಮಾರ್ಥಿಕವಾದ ಐಕ್ಯಾಂಶದಿಂದ ಇವುಗಳಿಗೆ ಪರಸ್ಪರ ಸಮನ್ವಯವು ದೊರಕಿದಂತಾಗುವುದು. ‖ ೨೪ ‖

ಭರ್ಗೋ ದೇವಸ್ಯ ಧೀತ್ಯನೇನಾಧಾರರೂಪ ಶಿವಾತ್ಮಾಕ್ಷರಂ ಗಣ್ಯತೇ ಮಹೀತ್ಯಾದಿನಾ ಶೇಷಂ ಕಾಮ್ಯಂ ರಮಣೀಯಂ ದೃಶ್ಯಂ ಕಾಮ್ಯಂ ರಮಣೀಯಂ ಶಕ್ತಿಕೂಟಂ ಸ್ಪಷ್ಟೀಕೃತಮಿತಿ ॥ ೨೫ ॥

ಏವಂ ಪಂಚದಶಾಕ್ಷರಂ ತ್ರೈಪುರಂ ಯೋಽಧೀತೇ ಸ ಸರ್ವಾನ್ ಕಾಮಾನವಾಪ್ನೋತಿ ಸ ಸರ್ವಾನ್ ಭೋಗಾನವಾಪ್ನೋತಿ ಸ ಸರ್ವಾನ್ ಲೋಕಾನ್ ಜಯತಿ ಸ ಸರ್ವಾ ವಾಚೋ ವಿಜೃಂಭಯತಿ ಸ ರುದ್ರತ್ವಂ ಪ್ರಾಪ್ನೋತಿ ಸ ವೈಷ್ಣವಂ ಧಾಮ ಭಿತ್ತ್ವಾ ಪರಂ ಬ್ರಹ್ಮ ಪ್ರಾಪ್ನೋತಿ ಯ ಏವಂ ವೇದ ॥ ೨೬ ॥

ಏವಮಾದ್ಯಾಂ ವಿದ್ಯಾ ಮಭಿಧಾಯೈತಸ್ಯಾಃ ಶಕ್ತಿಕೂಟಂ
ಶಕ್ತಿಶಿವಾದ್ಯಾ । ಲೋಪಾಮುದ್ರೇಯಂ ದ್ವಿತೀಯೇ ಧಾಮನಿ ॥೨೭॥

ಭರ್ಗೋ ದೇವಸ್ಯ ಧೀ ಎಂಬ ಗಾಯತ್ರೀ ಮಂತ್ರದ ಅಂಶಕ್ಕೂ ಶಕ್ತಿಕೂಟ ದಲ್ಲಿರುವ ಕಕಾರಕ್ಕೂ ಸಮನ್ವಯವು ಇದೆ. ಭರ್ಗೋ ದೇವಸ್ಯ ಎಂಬ ಭಾಗವು ಸಕಲ ಜಗದಾಧಾರವಾದ ಚೈತನ್ಯವನ್ನು ಬೋಧಿಸುತ್ತದೆ. ಅದರಂತೆ ಕಕಾರವೂ ಶಿವನಲ್ಲಿ ಸಂಕೇತಿತವಾದ ಅಕ್ಷರವಾಗಿ ಶಿವಚೈತನ್ಯವನ್ನೇ ಬೋಧಿಸುವುದಾದ್ದ ರಿಂದ ಇವೆರಡಕ್ಕೂ ಸರಿಯಾಗಿ ಸಮನ್ವಯವು ದೊರೆಯುವುದು. ಎರಡನೆಯ ಪಾದದ ಕಡೆಯ ಭಾಗವಾದ ಮಹೀ ಎಂಬುದು ಭೂವಾಚಕ ಶಬ್ದವಾಗಿ ಭೂಮಿ ಯನ್ನು ಬೋಧಿಸುವುದರಿಂದಲೂ ಶಕ್ತಿಕೂಟದ ಮೂರನೇ ವರ್ಣವಾದ ಲಕಾರವು ಪೃಥಿವೀ ಬೀಜಾಕ್ಷರವಾದ್ದರಿಂದ ಪೃಥಿವಿಯನ್ನೇ ಬೋಧಿಸುವುದರಿಂದಲೂ ಮಹೀ ಎಂಬ ಪದವೂ, ಲಕಾರವೂ ಸಮನ್ವಯವನ್ನು ಹೊಂದಿವೆ. ಗಾಯತ್ರೀ ಮಂತ್ರದಲ್ಲಿ ಮಿಕ್ಕಭಾಗವಾದ "ಧಿಯೋಯೋನಃ ಪ್ರಚೋದಯಾತ್ ಪರೋರಜಸೇಽಸಾವದೋಂ" ಎಂಬ ಭಾಗಕ್ಕೂ ಆದಿಮೂಲವಿದ್ಯೆಯಲ್ಲಿರುವ ಹ್ರೀಂ ಅಥವಾ ಹ್ರೀಂ ಎಂಬ ವರ್ಣಕ್ಕೂ ಸಮನ್ವಯವು. ಅವು ಎರಡು ಅಂಶಗಳೂ ಕಾಮ್ಯವೂ ದೃಶ್ಯವೂ ಆಗಿರುವ ರಮಣೀಯ ಅರ್ಥವನ್ನು ಬೋಧಿಸುತ್ತವೆ. || ೨೫ ||

ಹಿಂದೆ ನಿರೂಪಿಸಿರುವಂತೆ ಹದಿನೈದು ಅಕ್ಷರಗಳಿಂದ ಕೂಡಿದ ತ್ರಿಪುರಾದೇವಿಯ ಈ ಮಹಾ ಮಂತ್ರವನ್ನು ಯಥಾವಿಧಿಯಾಗಿ ಉಪಾಸನೆ ಮಾಡಿದ ಭಕ್ತನು ಸಮಸ್ತ ಕಾಮ್ಯ ವಸ್ತುಗಳನ್ನೂ ಸಂಕಲ್ಪ ಮಾತ್ರದಿಂದಲೇ ಹೊಂದುತ್ತಾನೆ. ಮತ್ತು ಭೋಗ್ಯವಸ್ತುಗಳನ್ನು ಅನುಭವಿಸಲು ತಕ್ಕ ಕರಣಪಾಟವವುಳ್ಳವನಾಗಿ ಸಕಲ ಭೋಗ ಗಳನ್ನೂ ಅನುಭವಿಸುತ್ತಾನೆ. ಮತ್ತು ನಿರಾತಂಕವಾಗಿ ಸಕಲ ಲೋಕಗಳಲ್ಲಿಯೂ ಸಂಚರಿಸುತ್ತಾನೆ. ಸಮಸ್ತ ವಿದ್ಯೆಗಳನ್ನೂ ಅರಿತವನಾಗಿ ಸಕಲ ವಾಙ್ಮಯವನ್ನೂ ವ್ಯಾಖ್ಯಾನಮಾಡಲು ಚತುರನಾಗಿರುತ್ತಾನೆ. ಮತ್ತು ರುದ್ರದೇವತೆಯ ರೂಪವನ್ನೇ ಹೊಂದುತ್ತಾನೆ. ಈ ರೀತಿಯಾಗಿ ವಿವಿಧ ಫಲಗಳನ್ನೂ ಉಪಾಸಕನು ತಾನು ಮಾಡಿದ ಸಂಕಲ್ಪ ಅನುಸಾರವಾಗಿ ಹೊಂದುತ್ತಾನೆ. ಇವು ಫಲಾಭಿಸಂಧಿ ಪೂರ್ವಕ ವಾಗಿ ಮಾಡಿದ ಉಪಾಸನೆಯ ಫಲಗಳು, ನಿಷ್ಕಾಮನಾಗಿ ಉಪಾಸನೆಯನ್ನು ಮಾಡು ವವನಿಗೆ ಮಾಯಾಶಬಲವಾದ ಪರಮಾತ್ಮರೂಪವನ್ನು ಅತಿಕ್ರಮಿಸಿ ನಿರ್ಗುಣ ಬ್ರಹ್ಮ ರೂಪವನ್ನೇ ಹೊಂದುತ್ತಾನೆ. ಹೀಗೆ ಕಾಮನೆ-ನಿಷ್ಕಾಮತೆಗಳಿಂದ ಮಾಡಿದ ಉಪಾ ಸನೆಯು ಫಲತಾರತಮ್ಯವುಳ್ಳದ್ದಾಗಿದೆ. || ೨೬ ||

ಹಿಂದೆ ಹೇಳಿದ ಕ್ರಮದಿಂದ ಶ್ರೀಮತ್ಪಂಚದಶಾಕ್ಷರಿಯಾದ ಆದಿವಿದ್ಯೆಯನ್ನು ಬ್ರಹ್ಮಗಾಯತ್ರೀ ಮಂತ್ರಾರ್ಥ ಸಮನ್ವಯವುಳ್ಳದ್ದನ್ನಾಗಿ ಧ್ಯಾನಿಸಬೇಕೆಂದು ಪ್ರತಿ ಪಾದಿಸಿದಂತಾಗಿದೆ. ಮುಂದೆ ಶಕ್ತಿಶಿವವಿದ್ಯಾ ಮುಂತಾದ ವೈಷ್ಣವೀ ವಿದ್ಯಾಂತಗಳಾದ

ಪೂರ್ವೇಣೈವ ಮನುನಾ ಬಿಂದುಹೀನಾ ಶಕ್ತಿಭೂತಹೃಲ್ಲೇಖಾ
ಕ್ರೋಧಮುನಿನಾಽಧಿಷ್ಠಿತಾ ತೃತೀಯೇ ಧಾಮನಿ ॥ ೨೮ ॥

ಪೂರ್ವಸ್ಯಾ ಏವ ವಿದ್ಯಾಯಾ ಯದ್ವಾಗ್ಭವಕೂಟಂ ತೇನೈವ
ಮಾನವೀಂ ಚಾಂದ್ರೀಂ ಕೌಬೇರೀಂ ವಿದ್ಯಾಮಾಚಕ್ಷತೇ ॥ ೨೯ ॥

ಮದನಾಥಃ ಶಿವಂ ವಾಗ್ಭವಂ, ತದೂರ್ಧ್ವಂ ಕಾಮಕಲಾಮಯಂ,
ಶಕ್ತ್ಯೂರ್ಧ್ವಂ ಶಾಕ್ತಮಿತಿ ಮಾನವೀ ವಿದ್ಯಾ ಚತುರ್ಥೇ ಧಾಮನಿ
॥ ೩೦

ದ್ವಾದಶವಿದ್ಯೆಗಳನ್ನು ಉಪನಿಷತ್ತು ಕ್ರಮವಾಗಿ ತೋರಿಸುತ್ತದೆ. ಈ ದ್ವಾದಶವಿದ್ಯೆಗಳಿಗೆ ಕ್ರಮವಾಗಿ ಶಕ್ತಿಶಿವವಿದ್ಯಾ, ಲೋಪಾಮುದ್ರಾವಿದ್ಯಾ, ಕ್ರೋಧಮುನಿವಿದ್ಯಾ, ಮಾನವೀವಿದ್ಯಾ, ಚಾಂದ್ರೀವಿದ್ಯಾ, ಕೌಬೇರೀವಿದ್ಯಾ, ಅಗಸ್ತ್ಯವಿದ್ಯಾ, ನಂದಿವಿದ್ಯಾ, ಪ್ರಭಾಕರೀವಿದ್ಯಾ, ಷಣ್ಮುಖೀವಿದ್ಯಾ, ಪರಮಶಿವವಿದ್ಯಾ, ವಿಷ್ಣುವಿದ್ಯಾ ಎಂದು ಹೆಸರು. ಲೋಪಾಮುದ್ರಾವಿದ್ಯಾ ಮುಂತಾದ ವಿದ್ಯೆಗಳ ಉಪಾಸಕರು ವಿಶೇಷವಾಗಿ ಒಂದೊಂದು ವಿದ್ಯೆಯನ್ನು ಪರಿಗ್ರಹಿಸಿ ಧ್ಯಾನಮಾಡಿರುವ ನಿಮಿತ್ತದಿಂದ ಆ ವಿದ್ಯೆಗಳಿಗೆ ಆಯಾಯ ಉಪಾಸಕರ ನಾಮಾಂಕಿತವಾದ ಹೆಸರು ಬಂದಿರುತ್ತದೆ. ಇವುಗಳಲ್ಲಿ ಮೊದಲನೆಯ ಶಕ್ತಿ ಶಿವವಿದ್ಯೆಯ ಆಕಾರವು ಹೀಗಿರಬೇಕು. ಮೇಲೆ ಹೇಳಿದ ಶ್ರೀಮತ್ಪಂಚದಶಾಕ್ಷರೀ ವಿದ್ಯೆಯಲ್ಲಿ ಕಏಈಲಹ್ರೀಂ, ಹಸಕಹಲಹ್ರೀಂ, ಸಕಲಹ್ರೀಂ, ಎಂಬ ಮೂರು ಖಂಡಗಳಿವೆ. ಇವು ಕ್ರಮವಾಗಿ ವಾಗ್ಭವಕೂಟ, ಕಾಮಕೂಟ, ಶಕ್ತಿಕೂಟಗಳೆಂದು ಕರೆಯಲ್ಪಡುತ್ತವೆ. ಇವುಗಳಲ್ಲಿ ಮೂರನೆಯದಾದ ಶಕ್ತಿಕೂಟದ ಶಕ್ತಿ-ಶಿವ ಬೀಜಾಕ್ಷರಗಳಾದ ಸ ಮತ್ತು ಕ ವರ್ಣಗಳನ್ನು ಸೇರಿಸಿದರೆ ಶಕ್ತಿಶಿವವಿದ್ಯಾ ಆಕಾರವು ಲಭಿಸುವುದು. ಇದನ್ನು ವ್ಯಷ್ಟಿ ಸಮಷ್ಟಿ ಜಾಗರಣಾವಸ್ಥಾಭಿಮಾನಿಯನ್ನಾಗಿ ಧ್ಯಾನಿಸಬೇಕು.

ಹಸಕಹಲಹ್ರೀಂ ಎಂಬ ಖಂಡವು ಲೋಪಾಮುದ್ರಾವಿದ್ಯೆಯ ಸ್ವರೂಪವಾಗುವುದು, ಇದನ್ನು ವ್ಯಷ್ಟಿ ಸಮಷ್ಟಿ ಸ್ವಪ್ನಾವಸ್ಥೆಯೆಂಬ ದ್ವಿತೀಯ ಧಾಮದಲ್ಲಿ ಧ್ಯಾನಿಸಬೇಕು. || ೨೭ ||

ಲೋಪಾಮುದ್ರಾ ವಿದ್ಯೆಯ ಮಂತ್ರದಲ್ಲಿ ಕಡೆಯ ಅನುಸ್ವಾರವನ್ನು ತ್ಯಜಿಸಿ ಶಕ್ತಿಭೂತವಾದ ಹ್ರೀ ಎಂದು ಮಾತ್ರವೇ ಉಚ್ಚರಿಸಿದರೆ ಹಸಕಹಲಹ್ರೀ ಎಂಬುದು ಕ್ರೋಧಮುನಿಯು ಉಪಾಸನೆಮಾಡಿ ಸಿದ್ಧನಾಗಿರುವ ನಿಮಿತ್ತದಿಂದ ಕ್ರೋಧಮುನಿ ವಿದ್ಯೆಯಾಗುವುದು. ಇದು ಸುಷುಪ್ತ್ಯವಸ್ಥೆಯೆಂಬ ತೃತೀಯಧಾಮ ಸಂಬಂಧವನ್ನು ಹೊಂದಿರುತ್ತದೆ. || ೨೮ ||

ಹಿಂದಿನ ಲೋಪಾಮುದ್ರಾವಿದ್ಯೆಗೆ ವಾಗ್ಭವಕೂಟವೆಂಬ ಕಏಈಲಹ್ರೀಂ ಎಂಬ ಖಂಡವನ್ನು ಸೇರಿಸಲಾಗಿ ಮನು, ಚಂದ್ರ, ಕುಬೇರರು ಧ್ಯಾನಿಸಿದ ವಿದ್ಯೆಗಳ ಸ್ವರೂಪವು ತಿಳಿಯುವುದು. || ೨೯ ||

ಮದನವೆಂದರೆ ಕಾಮಕೂಟವು. ಅದನ್ನು ಮೊದಲು ಉಚ್ಚರಿಸಿ ಅದರ ಮುಂದೆ ಶಿವಸ್ವರೂಪವಾದ ವಾಗ್ಭವಕೂಟವನ್ನೂ ಅದರ ಮುಂದೆ ಶಕ್ತಿಕೂಟವನ್ನೂ ಸೇರಿಸಿದರೆ ಅದು ಮಾನವೀ ವಿದ್ಯಾಸ್ವರೂಪವು. ಇದನ್ನು ವ್ಯಷ್ಟಿಜಾಗರಣೋಪಾಧಿಯ ಆರೋಪವುಳ್ಳ ವಿಶ್ವಾತ್ಮನಲ್ಲಿ ಅಭೇದಭಾವನೆಯಿಂದ ಧ್ಯಾನಿಸಬೇಕು. || ೩೦ ||

ಶಿವಶಕ್ತ್ಯಾಖ್ಯಂ ವಾಗ್ಭವಂ ತದೇವಾಧಃ ಶಿವಶಕ್ತ್ಯಾಖ್ಯಮನ್ಯತ್ತೃತೀಯಂ ಚೇಯಂ ಚಾಂದ್ರೀ ವಿದ್ಯಾ ಪಂಚಮೇ ಧಾಮನಿ ಧ್ಯೇಯೇಯಂ ॥ ೩೧ ॥

ಚಾಂದ್ರೀ ಕಾಮಾಧಃ ಶಿವಾದ್ಯಕಾಮಾ ಸೈವ ಕೌಬೇರೀ ಷಷ್ಠೇ ಧಾಮನಿ ವ್ಯಾಚಕ್ಷತ ಇತಿ ಯ ಏವಂ ವೇದ ॥ ೩೨ ॥

ಹಿತ್ವೇಕಾರಂ ತುರೀಯಸ್ವರಂ ಸರ್ವಾದೌ ಸೂರ್ಯಾಚಂದ್ರಮಸ್ಕೇನ ಕಾಮೇಶ್ವರ್ಯೈರ್ವಾಗಸ್ತ್ಯಸಂಜ್ಞಾ ಸಪ್ತಮೇ ಧಾಮನಿ ॥ ೩೩ ॥

ತೃತೀಯಮೇತಸ್ಯಾ ಏವ ಪೂರ್ವೋಕ್ತಾಯಾಃ ಕಾಮಾದ್ಯಂ ದ್ವಿಧಾಽಧಃ ಕಂ ಮದನಕಲಾಽಽದ್ಯಂ ಶಕ್ತಿಬೀಜಂ ವಾಗ್ಭವಾದ್ಯಂ ತಯೋರರ್ಧಾವಶಿರಸ್ಕಂ ಕೃತ್ವಾ ನಂದಿವಿದ್ಯೇಯಮಷ್ಟಮೇ ಧಾಮನಿ ॥ ೩೪ ॥

ವಾಗ್ಭವಮಾಗಸ್ತ್ಯಂ ವಾಗರ್ಥಕಲಾಮಯಂ ಕಾಮಕಲಾಭಿಧಂ ಸಕಲಮಾಯಾ ಶಕ್ತಿಃ ಪ್ರಭಾಕರೀ ವಿದ್ಯೇಯಂ ನವಮೇ ಧಾಮನಿ ॥ ೩೫ ॥

ಶಿವಶಕ್ತಿಯೆಂಬ ಹೆಸರುಳ್ಳ ಹಾದಿವಿದ್ಯೆಯೆಂದರೆ ಹಸಕಹಲಹ್ರೀಂ ಎಂಬ ಖಂಡವೂ ಅನಂತರದಲ್ಲಿ ವಾಗ್ಭವಕೂಟ ಕಏಈಲಹ್ರೀಂ ಎಂಬುದೂ ಮತ್ತೊಂದು ಸಲ ಶಿವಶಕ್ತಿ ಖಂಡವಾದ ಹಸಕಹಲಹ್ರೀಂ ಎಂಬುದೂ ಕಡೆಯಲ್ಲಿ ಮೂರನೆಯ ಶಕ್ತಿಕೂಟವಾದ ಸಕಲಹ್ರೀಂ ಎಂಬುದೂ ಸೇರಿಸಲ್ಪಟ್ಟರೆ ವ್ಯಷ್ಟಿ ಸ್ವಾಪ್ನಪ್ರಪಂಚಾರೋಪಕ್ಕೆ ಆಧಾರವಾದ ಪಂಚಮಧಾಮ ಸಂಬಂಧವುಳ್ಳದ್ದಾಗಿರುವ ಚಾಂದ್ರೀ ವಿದ್ಯೆಯ ಸ್ವರೂಪವಾಗುವುದು. || ೩೧ ||

ಚಾಂದ್ರೀವಿದ್ಯೆಯಲ್ಲಿ ಕಡೆಗೆ ಶಿವಶಕ್ತಿ ಖಂಡವಾದ ಹಾದಿ ವಿದ್ಯೆಯನ್ನು ಸೇರಿಸಿದರೆ ಕಾಮಕೂಟವನ್ನೇ ಆರಂಭದಲ್ಲಿರಿಸಿಕೊಂಡಿರುವ ಕೌಬೇರೀ ವಿದ್ಯೆಯು ಲಭಿಸುವುದು. ಇದರಲ್ಲಿ ಐದು ಖಂಡಗಳು ಇರುತ್ತವೆ. ಇದನ್ನು ವ್ಯಷ್ಟಿ ಸೌಷುಪ್ತ ಪ್ರಪಂಚಾಧಾರನಾದ ಪ್ರಾಜ್ಞನ ಅಭೇದದಿಂದ ಧ್ಯಾನಿಸುವುದು. ಇದನ್ನು ತಿಳಿದು ಯಥಾವಿಧಿಯಾಗಿ ಆಚರಿಸಿದವನು ಸಂಪತ್ತಿನ ವಿಷಯದಲ್ಲಿ ಕುಬೇರನಿಗೆ ಸಮನಾಗುವನು. || ೩೨ ||

ವಾಗ್ಭವಕೂಟದಲ್ಲಿ ನಾಲ್ಕನೆಯ ಸ್ವರವಾದ ಈ ಕಾರವನ್ನು ಬಿಟ್ಟು ಎಲ್ಲ ಕೂಟಗಳ ಆದಿಭಾಗದಲ್ಲಿ ಸೂರ್ಯ-ಚಂದ್ರರ ಬೀಜಾಕ್ಷರಗಳಾದ ಹ-ಸ ವರ್ಣಗಳನ್ನು ಸೇರಿಸಿದರೆ ಸಮಷ್ಟಿ ಜಾಗರಣೋಪಾಧಿಯಾದ ವಿರಾಟ್ಪುರುಷನ ಐಕ್ಯಾನುಸಂಧಾನವುಳ್ಳ ಅಗಸ್ತ್ಯವಿದ್ಯೆಯಾಗುವುದು. || ೩೩ ||

ಹಿಂದೆ ಹೇಳಿರುವ ಅಗಸ್ತ್ಯ ವಿದ್ಯಾಮಂತ್ರದಲ್ಲಿಯೇ ಆದಿಭಾಗದಲ್ಲಿ ಹಕಾರಗಳೆರಡನ್ನೂ ಶಕ್ತಿಬೀಜವಾದ ಸಕಾರವನ್ನೂ ಸೇರಿಸಿ ವಾಗ್ಭವಾದಿ ಕೂಟಗಳನ್ನು ಅಗಸ್ತ್ಯವಿದ್ಯೆಯಲ್ಲಿರುವಂತೆ ಜಪಿಸಬೇಕು. ಸಕಾರ-ಕಕಾರಗಳನ್ನು ಅರ್ಧಮಾತ್ರಾ ಕಾಲದಿಂದ ಉಚ್ಚರಿಸಬೇಕು. ಈ ವಿದ್ಯೆಯನ್ನು ನಂದಿಯು ಉಪಾಸನೆಗೈದು ಸಿದ್ಧನಾಗಿರುವುದರಿಂದ ಇದಕ್ಕೆ ನಂದಿವಿದ್ಯೆಯೆಂಬ ಹೆಸರು ಬಂದಿರುತ್ತದೆ. ಇದನ್ನು ಸಮಷ್ಟಿಸ್ವಾಪ್ನ ಪ್ರಪಂಚಾರೋಪಕ್ಕೆ ಅಧಿಷ್ಠಾನವಾದ ಸೂತ್ರಾತ್ಮೈಕ್ಯದಿಂದ ಧ್ಯಾನಿಸಬೇಕು. || ೩೪ ||

ಆದಿ ವಿದ್ಯೆಯ ವಾಗ್ಭವಕೂಟವನ್ನು ಪ್ರಾರಂಭಿಸಿ ಅನಂತರ ಅಗಸ್ತ್ಯಮಂತ್ರವನ್ನು ಪೂರ್ತಿಯಾಗಿ ಹೇಳಿ ಕಾಮಕೂಟವನ್ನೂ ಶಕ್ತಿಕೂಟವನ್ನೂ ಅಂತದಲ್ಲಿ ಕ್ರಮವಾಗಿ ಸೇರಿಸಿ ಪಠಿಸಿದರೆ ಸಮಷ್ಟಿ ಸೌಷುಪ್ತ ಪ್ರಪಂಚಾರೋಪಕ್ಕೆ ಅಧಿಷ್ಠಾನನಾದ ಬೀಜಾತ್ಮಕೇಶ್ವರ ತಾದಾತ್ಮ್ಯವುಳ್ಳ, ಸೂರ್ಯನು ಉಪಾಸನೆಮಾಡಿರುವ ಪ್ರಾಭಾಕರೀ ವಿದ್ಯೆಯ ಆಕಾರವು ಲಭಿಸುತ್ತದೆ. || ೩೫ ||

ಪುನರಾಗಸ್ತ್ಯಂ ವಾಗ್ಭವಂ ಶಕ್ತಿಮನ್ಮಥಶಿವಶಕ್ತಿ ಮನ್ಮಥೋರ್ವಿ ಮಾಯಾಕಾಮಕಲಾಲಯಂ ಚಂದ್ರಸೂರ್ಯಾನಂಗಧೂರ್ಜಟಿಮಹಿಮಾಯಂ ತೃತೀಯಂ ಷಣ್ಮುಖೀಯಂ ವಿದ್ಯಾ ದಶಮೇ ಧಾಮನಿ ॥ ೩೬ ॥

ವಿದ್ಯಾ ಪ್ರಕಾಶಿತಯಾ ಭೂಯ ಏವಾಗಸ್ತ್ಯವಿದ್ಯಾಂ ಪಠಿತ್ವಾ ಭೂಯ ಏವೇಮಾಮಂತ್ಯಮಾಯಾಂ ಪರಮಶಿವವಿದ್ಯೇಯಮೇಕಾದಶೇ ಧಾಮನಿ ॥ ೩೭ ॥

ಭೂಯ ಏವಾಗಸ್ತ್ಯಂ ಪಠಿತ್ವಾ ಏತಸ್ಯಾ ಏವ ವಾಗ್ಭವಂ ಯದ್ಧನಜಂ ಕಾಮಕಲಾಲಯಂ ಚ ತತ್ಸಹಜಂ ಕೃತ್ವಾ ಲೋಪಾಮುದ್ರಾಯಾಃ ಶಕ್ತಿಕೂಟರಾಜಂ ಪಠಿತ್ವಾ ವೈಷ್ಣವೀ ವಿದ್ಯಾ ದ್ವಾದಶೇ ಧಾಮನಿ ವ್ಯಾಚಕ್ಷತ ಇತಿ ಯ ಏವಂ ವೇದ ॥ ೩೮ ॥

ಮತ್ತೆ ಅಗಸ್ತ್ಯವಿದ್ಯೆಯನ್ನೂ ವಾಗ್ಭವಕೂಟವನ್ನೂ ಯೋಜಿಸಿ ಮುಂದೆ ಹ್ರೀಂ ಎಂಬ ಶಕ್ತಿ ಬೀಜ ಕ್ಲೀಂ-ಎಂಬ ಮನ್ಮಥಬೀಜ, ಹಂ, ಸ ಎಂಬ ಶಿವಶಕ್ತಿ ಬೀಜಗಳು ಪುನಃ ಕ್ಲೀಂ ಎಂಬ ಮನ್ಮಥಬೀಜ, ಲಂ, ಎಂಬ ಪೃಥಿವೀ ಬೀಜ, ಹ್ರೀಂ ಎಂಬ ಮಾಯಾಬೀಜ, ಹಸಕಹಲಹ್ರೀಂ ಎಂಬ ಷಡಕ್ಷರ-ರೂಪವಾದ ಕಾಮಕೂಟ, ಸೋಹಂ ಎಂಬ ಚಂದ್ರಸೂರ್ಯ ಬೀಜಗಳು, ಕ್ಲೀಂ ಎಂಬ ಮನ್ಮಥಬೀಜ, ಹಂ ಎಂಬ ಈಶ್ವರಬೀಜ, ಸ ಎಂಬ ಮಹಿಮಾಬೀಜ, ಇಷ್ಟನ್ನು ಉಚ್ಚರಿಸಿ ಕಡೆಯಲ್ಲಿ ಹಂಸಃ ಸೋಽಹಂಹಂಸಃ ಎಂದು ಸೇರಿಸಿದಲ್ಲಿ ಷಣ್ಮುಖನು ಉಪಾಸನೆ ಮಾಡಿರುವ, ವ್ಯಷ್ಟಿ-ಸಮಷ್ಟಿ ಜಾಗ್ರತ್ಪ್ರಪಂಚಾಪವಾದಾಧಿಕರಣವಾದ ಚೈತನ್ಯಾಭೇದ ಬುದ್ಧಿಯಿಂದ ಧ್ಯಾನಿಸಬೇಕಾದ ಷಣ್ಮುಖವಿದ್ಯೆಯು ಸಿದ್ಧವಾಗುವುದು. || ೩೬ ||

ಹಿಂದೆ ಹೇಳಿದ ಷಣ್ಮುಖ ವಿದ್ಯೆಯಿಂದ ಪ್ರಕಾಶವಾಗಿರುವ ಮಂತ್ರಭಾಗವನ್ನು ಪೂರ್ತಿಯಾಗಿ ಹೇಳಿ ಜೊತೆಗೆ ಅಗಸ್ತ್ಯವಿದ್ಯೆಯನ್ನು ಸೇರಿಸಿ ಪಠಿಸಿದರೆ ಪರಮಶಿವ ತುರ್ಯರೂಪಿಣಿಯಾದ ಶಕ್ತಿಗೆ ಅಧಿಷ್ಠಾತೃವಾಗಿದ್ದು ಧ್ಯಾನಿಸಿದ ಸಮಷ್ಟಿಸ್ವಾಪ್ನ ಪ್ರಪಂಚಾಪವಾದಾಧಿಷ್ಠಾನವಾದ ಚೈತನ್ಯೈಕ್ಯವುಳ್ಳ ಪರಮಶಿವವಿದ್ಯಾ ಆಕಾರವು ಸಿದ್ಧಿಸುವುದು. || ೩೭ ||

ಮತ್ತು ಅಗಸ್ತ್ಯವಿದ್ಯೆಯನ್ನು ಪಠಿಸಿ ಅನಂತರ ವಾಗ್ಭವಕೂಟವನ್ನೂ ಅದರ ಮುಂದೆ ಕೌಬೇರವಿದ್ಯೆಯನ್ನೂ ಅನಂತರ ಲೋಪಾಮುದ್ರಾವಿದ್ಯೆಯ ರೂಪವಾದ ಹಸಕಹಲಹ್ರೀಂ ಎಂಬ ಕೂಟವನ್ನೂ ಸಹಜವಾದ ಶಕ್ತಿಕೂಟವನ್ನೂ ಒಂದಾಗಿ ಸೇರಿಸಿದರೆ ಸರ್ವ ಪ್ರಪಂಚಾಪವಾದಕ್ಕೆ ಅಧಿಷ್ಠಾನವಾಗಿರುವ ನಿಷ್ಪ್ರಪಂಚ ಚೈತನ್ಯಾಭೇದವುಳ್ಳ ವಿಷ್ಣುವಿನಿಂದ ಉಪಾಸನೆ ಮಾಡಲ್ಪಟ್ಟಿರುವ ವೈಷ್ಣವೀ ವಿದ್ಯೆಯ ಮಂತ್ರವು ಪ್ರಾಪ್ತವಾಗುವುದು. ಹೀಗೆ ದ್ವಾದಶವಿದ್ಯೆಗಳನ್ನು ಉಪನಿಷತ್ತು ಸೂಕ್ಷ್ಮವಾಗಿ ಪ್ರತಿಪಾದನೆ ಮಾಡಿರುತ್ತದೆ. ಈ ಮಂತ್ರಗಳ ಉದ್ಧಾರಕ್ರಮವು ಸ್ಪಷ್ಟವಾಗಿ ತಿಳಿಯಲೆಂದು ಉದ್ಧೃತ ವರ್ಣಗಳನ್ನು ಕ್ರಮದಿಂದ ಜೋಡಿಸಿ ಲಭಿಸುವ ಮಂತ್ರಗಳನ್ನು ಪ್ರಕಾಶಿಸಬೇಕಾದ್ದು ಆವಶ್ಯಕವು.

೧ ಶಕ್ತಿಶಿವವಿದ್ಯಾ :—ಸಕ ೨ ಲೋಪಾಮುದ್ರಾವಿದ್ಯಾ:—ಹಸಕಹಲಹ್ರೀಂ ೩ ಕ್ರೋಧಮುನಿವಿದ್ಯಾ:-ಹಸಕಹಲಹ್ರೀ ೪ ಮಾನವೀವಿದ್ಯಾ:-ಹಸಕಹಲಹ್ರೀಂ ಕಏಈಲಹ್ರೀಂ ಸಕಲಹ್ರೀಂ ೫ ಚಾಂದ್ರೀವಿದ್ಯಾ:-ಹಸಕಹಲಹ್ರೀಂ ಕಏಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ ೬ ಕೌಬೇರೀವಿದ್ಯಾ :—ಹಸಕಹಲಹ್ರೀಂ ಕಏಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ ಹಸಕಹಲಹ್ರೀಂ ೭ ಅಗಸ್ತ್ಯವಿದ್ಯಾ :-ಹಸಕಏಲಹ್ರೀಂ ಹಸಹಸಕಹಲಹ್ರೀಂ ಹಸಸಕಲಹ್ರೀಂ ೮ ನಂದಿವಿದ್ಯಾ :— ಹಹಸಕಹಸಕಏಲಹ್ರೀಂ ಹಸಹಸಕಹಲಹ್ರೀಂ ಹಸಸಕಲಹ್ರೀಂ ೯ ಪ್ರಾಭಾಕರೀವಿದ್ಯಾ:—

ತಾನ್ ಹೋವಾಚ ಭಗವಾನ್ ಸರ್ವೇ ಯೂಯಂ ಶ್ರುತ್ವಾ ಪೂರ್ವಾಂ ಕಾಮಾಖ್ಯಾಂ ತುರೀಯರೂಪಾಂ ತುರೀಯಾತೀತಾಂ ಸರ್ವೋತ್ಕಟಾಂ ಸರ್ವಮಂತ್ರಾಸನಗತಾಂ ಪೀಠೋಪಪೀಠದೇವತಾಪರಿವೃತಾಂ ಸಕಲಕಲಾವ್ಯಾಪಿನೀಂ ದೇವತಾಂ ಸಾಮೋದಾಂ ಸಪರಾಗಾಂ ಸಹೃದಯಾಂ ಸಾಮೃತಾಂ ಸಕಲಾಂ ಸೇಂದ್ರಿಯಾಂ ಸದೋದಿತಾಂ ಪರಾಂ ವಿದ್ಯಾಂ ಸ್ಪಷ್ಟೀಕೃತ್ವಾ ಹೃದಯೇ ನಿಧಾಯ ವಿಜ್ಞಾಯಾನಿಲಯಂ ಗಮಯಿತ್ವಾ ತ್ರಿಕೂಟಾಂ ತ್ರಿಪುರಾಂ ಪರಮಾಂ ಮಾಯಾಂ ಶ್ರೇಷ್ಠಾಂ ಪರಾಂ ವೈಷ್ಣವೀಂ ಸಂನಿಧಾಯ ಹೃದಯ ಕಮಲಕರ್ಣಿಕಾಯಾಂ ಪರಾಂ ಭಗವತೀಂ ಲಕ್ಷ್ಮೀಂ ಮಾಯಾಂ ಸದೋದಿತಾಂ ಮಹಾವಶ್ಯಕರೀಂ ಮದನೋನ್ಮಾದನಕಾರಿಣೀಂ ಧನುರ್ಬಾಣಧಾರಿಣೀಂ ವಾಗ್ವಿಜೃಂಭಿಣೀಂ ಚಂದ್ರಮಂಡಲಮಧ್ಯವರ್ತಿನೀಂ ಚಂದ್ರಕಲಾಂ ಸಪ್ತದಶೀಂ ಮಹಾನಿತ್ಯೋಪಸ್ಥಿತಾಂ ಪಾಶಾಂಕುಶಮನೋಜ್ಞಪಾಣಿಪಲ್ಲವಾಂ ಸಮುದ್ಯದರ್ಕನಿಭಾಂ ತ್ರಿಣೇತ್ರಾಂ ವಿಚಿಂತ್ಯ ದೇವೀಂ ಮಹಾಲಕ್ಷ್ಮೀಂ ಸರ್ವಲಕ್ಷ್ಮೀಮಯೀಂ ಸರ್ವಲಕ್ಷಣಸಂಪನ್ನಾಂ ಹೃದಯೇ ಚೈತನ್ಯರೂಪಿಣೀಂ ನಿರಂಜನಾಂ ತ್ರಿಕೂಟಾಖ್ಯಾಂ ಸ್ಮಿತಮುಖೀಂ ಸುಂದರೀಂ ಮಹಾಮಾಯಾಂ ಸರ್ವಸುಭಗಾಂ ಮಹಾಕುಂಡಲಿನೀಂ ತ್ರಿಪೀಠಮಧ್ಯ

ಕಏಈಲಹ್ರೀಂ ಹಸಕಏಲಹ್ರೀಂ ಹಸ ಹಸಕಹಲ ಹ್ರೀಂ ಹಸಸಕಲಹ್ರೀಂ ಹಸಕ ಹಲಹ್ರೀಂ ಸಕಲಹ್ರೀಂ ೧೦ ಷಣ್ಮುಖೀವಿದ್ಯಾ:—ಹ್ರೀಂ ಕ್ಲೀಂ ಹಂಸಃ ಕ್ಲೀಂಲಂ ಹ್ರೀಂ ಹಸಕಹಲಹ್ರೀಂ ಸೋಹಂಕ್ಲೀಂ ಹಂಸಃ ಹ್ರೀಂ ಹಂಸಃ ಸೋऽಹಂ ಹಂಸಃ ೧೧ ಪರಮಶಿವವಿದ್ಯಾ:—ಹ್ರೀಂ ಕ್ಲೀಂ ಹಂಸಃ ಕ್ಲೀಂ ಲಂ ಹ್ರೀಂ ಹಸಕಹಲಹ್ರೀಂ ಸೋಹಂ ಕ್ಲೀಂಹಂಸಃ ಹ್ರೀಂಹಂಸಃ ಸೋಹಂ ಹಂಸಃ ಹಸಕಏಲಹ್ರೀಂ ಹಸಹಸ ಕಹಲಹ್ರೀಂ ಹಸ ಸಕಲಹ್ರೀಂ ೧೨ ವಿಷ್ಣುವಿದ್ಯಾ:—ಹಸಕಏಲಹ್ರೀಂ ಹಸಹಸ ಕಹಲಹ್ರೀಂ ಹಸಸಕಲಹ್ರೀಂ ಕಏಈಲಹ್ರೀಂ ಹಸಕಹಲಹ್ರೀಂ ಕಏಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ ಹಸಕಹಲಹ್ರೀಂ ಹಸಸಕಲಹ್ರೀಂ ಸಕಲಹ್ರೀಂ ಈ ರೀತಿ ಯಾಗಿ ದ್ವಾದಶವಿದ್ಯಾ ಮಂತ್ರಗಳನ್ನು ಧ್ಯಾನಿಸುವುದು. || ೩೮ ||

ಉಪನಿಷತ್ಪ್ರತಿಪಾದ್ಯನಾದ ಭಗವಂತನು ಇದುವರೆಗೆ ಹೇಳಿರುವ ಮಹಾ ವಿದ್ಯೆ ಯನ್ನು ಯಥಾವಿಧಿಯಾಗಿ ಶ್ರವಣಮಾಡಿರುವ ಭಕ್ತದೇವರನ್ನು ಕುರಿತು ಧ್ಯಾನ ಪ್ರಕಾರವನ್ನು ಉಪದೇಶಿಸಲೋಸ್ಕರ ದೇವರನ್ನು ಸಂಬೋಧಿಸಿ ಈ ವಚನವನ್ನು ಆಡಿದನು. ಎಲೈ ದೇವತೆಗಳಿರಾ, ಹಿಂದೆ ಬೋಧಿಸಿರುವ ಮತ್ತು ಕೆಲವು ಅಂಶಗಳಿಂದ ಮುಂದೆ ಬೋಧಿಸಲ್ಪಡುವ ಈ ಮಹಾ ವಿದ್ಯೆಯನ್ನು ಶ್ರವಣಮಾಡಿ ತತ್ಪ್ರತಿಪಾದ್ಯ ಳಾದ ಕಾಮೇಶ್ವರ ವಿದ್ಯಾರೂಪಿಣಿಯಾದ ಅರ್ಧಮಾತ್ರಾ ರೂಪದಿಂದ ತುರೀಯಳೂ ಕಲಾತೀತರೂಪದಿಂದ ತುರೀಯಾತೀತ ರೂಪಳೂ ಆದ ಅಶಾಂತಚಿತ್ತರಿಗೆ ಆರಾಧನಾ ವಿಷಯಳಾಗದಿರುವ ಎಲ್ಲ ಮಂತ್ರಗಳಲ್ಲಿ ವಾಸಿಸುವ, ಉಡ್ಯಾಣಾದಿಪೀಠ-ಉಪಪೀಠಗಳ ಪರಿವಾರ ದೇವತೆಗಳಿಂದ ಸೇವಿಸಲ್ಪಟ್ಟು, ಪ್ರಾಣ ಮೊದಲಾಗಿ ನಾಮಾಂತವಾಗಿ ಉಪನಿಷತ್ತುಗಳಲ್ಲಿ ಪ್ರತಿಪಾದ್ಯಗಳಾದ ಸಕಲಕಲೆಗಳನ್ನು ವ್ಯಾಪಿಸಿರುವ ದೇವತಾ ರೂಪಿಣಿಯಾದ, ಸ್ವಾನಂದ ಪರಿಪೂರ್ಣಳಾದ ಪರಚಿತ್ತೈಕ್ಯವನ್ನು ಹೊಂದುವ ಭಕ್ತಪರಿತ್ರಾಣದಲ್ಲಿ ಮನಸ್ಸನ್ನಿಟ್ಟಿರುವ, ಕಲಾ-ಇಂದ್ರಿಯಗಳಿಂದ ಕೂಡಿದ ನಿರಾವರಣ ಜ್ಞಾನರೂಪದಿಂದ ಸರ್ವದಾ-ಉದಯವನ್ನು ಹೊಂದಿದ ಪರವಿದ್ಯೆಯನ್ನು ಅಹಂ ಬ್ರಹ್ಮಾಸ್ಮಿ ಎಂಬ ಭಾವನೆಯಿಂದ ಧ್ಯಾನಿಸುತ್ತಾ ಬ್ರಹ್ಮಾತಿರಿಕ್ತದ್ವೈತ ಪ್ರಪಂಚವೆಲ್ಲವೂ ಮಿಥ್ಯಾಭೂತವೆಂದು ಮನಸ್ಸಿನಲ್ಲಿ ಸ್ಥಿರವಾದ ನಿಶ್ಚಯವನ್ನು ಹೊಂದಿ ಭ್ರಾಂತಿಸಿದ್ಧ ವಾಗಿದ್ದ ವಸ್ತುಗಳನ್ನೆಲ್ಲ ನಿರಾಲಂಬ ಬ್ರಹ್ಮರೂಪದಲ್ಲಿ ವಿಲಯಮಾಡಿ ವಾಗ್ಭವ, ಕಾಮ, ಶಕ್ತಿಗಳೆಂಬ ಮೂರು ಕೂಟಗಳಿಂದ ಕೂಡಿದ ತ್ರಿಪುರಾದೇವೀರೂಪಳಾದ, ಶ್ರೇಷ್ಠಳೂ, ಮಾಯಾರೂಪಳೂ ಆದ ವೈಷ್ಣವಿಯನ್ನು ಹೃದಯ ಕಮಲದಲ್ಲಿ ಧ್ಯಾನದಿಂದಿರಿಸಿಕೊಂಡು ಅದೇ ಹೃದಯಕಮಲದ ಕರ್ಣಿಕೆಯಲ್ಲಿ ಶ್ರೇಷ್ಠಳೂ ಭಗವತಿಯೂ ಲಕ್ಷ್ಮೀರೂಪಿಣಿಯೂ, ಮಾಯೆಯೂ, ಸರ್ವದಾ ಉದಯಿಸಿದವಳೂ ಆಗಿರುವ ಭಜಕರ ಮನಸ್ಸನ್ನು ತನ್ನ ಧ್ಯಾನದಲ್ಲೇ ಪ್ರೀತವನ್ನಾಗಿ ಮಾಡುವುದರಿಂದ

ವರ್ತಿನೀಮಕಥಾದಿಶ್ರೀಪೀಠೇ ಪರಾಂ ಭೈರವೀಂ ಚಿತ್ಕಲಾಂ ಮಹಾ ತ್ರಿಪುರಾಂ ದೇವೀಂ ಧ್ಯಾಯೇನ್ಮಹಾಧ್ಯಾನಯೋಗೇನೇಯಮೇವಂ ವೇದೇತಿ ಮಹೋಪನಿಷತ್ ॥ ೩೯ ॥

ಇತಿ ಪ್ರಥಮೋಪನಿಷತ್



ವಶಂಕರಿಯಾದ, ಮನ್ಮಥನಿಗೆ ಉನ್ಮಾದಕಾರಿಣಿಯಾದ, ಕೈಗಳಲ್ಲಿ ಬಿಲ್ಲುಬಾಣಗಳನ್ನು ಧರಿಸಿರುವ, ಸರಸ್ವತೀ ರೂಪದಿಂದ ವಾಙ್ಮಯವನ್ನು ವೃದ್ಧಿಮಾಡಿದ, ಚಂದ್ರಮಂಡಲ ಮಧ್ಯದಲ್ಲಿ ವಾಸಮಾಡುವ, ಚಂದ್ರಕಲಾರೂಪಳಾದ, ಹದಿನೇಳು ಸಂಖ್ಯೆಯಿಂದ ಪ್ರಸಿದ್ಧನಾದ ಪ್ರಜಾಪತಿಯ ರೂಪವನ್ನು ಧರಿಸಿದ ನಿತ್ಯಾರೂಪದಿಂದ ಸನ್ನಿಹಿತಳಾದ, ಪಾಶ-ಅಂಕುಶಗಳಿಂದ ಅಲಂಕರಿಸಲ್ಪಟ್ಟು ಚಿಗುರಿನಂತೆ ಮೃದುವಾದ ಕೈಗಳಿಂದ ಶೋಭಿಸುವ, ಉದಯಿಸುತ್ತಿರುವ ಬಾಲಸೂರ್ಯನಂತೆ ಇರುವ ತ್ರಿಲೋಚನಗಳಿಂದ ಕೂಡಿದ, ದೇವಿಯನ್ನು ಧ್ಯಾನಿಸಿ, ಮಹಾಲಕ್ಷ್ಮೀದೇವಿಯೂ, ಸರ್ವವಿಧದ ಸಂಪತ್ತುಗಳಿಂದ ಶೋಭಿತಳೂ, ಸರ್ವಲಕ್ಷಣಗಳಿಂದ ಸಂಪೂರ್ಣಳೂ, ಸರ್ವಪ್ರಾಣಿಗಳ ಹೃದಯದಲ್ಲಿ ಚೈತನ್ಯರೂಪಳೂ, ನಿರ್ದೋಷಳೂ, ಕೂಟತ್ರಯಾಭಿಧಾನವುಳ್ಳವಳೂ, ನಗುಮುಖವುಳ್ಳವಳೂ, ಸುಂದರಿಯೂ, ಮಹಾಮಾಯೆಯೂ, ಸರ್ವವಸ್ತುಗಳಿಗಿಂತಲೂ ಸೌಭಾಗ್ಯಾತಿಶಯವುಳ್ಳವಳೂ ಮಹಾ ಕುಂಡಲಿನೀ ರೂಪಳೂ ಮೂಲ-ಉಡ್ಯಾಣ-ಜಲಂಧರಗಳೆಂಬ ಪೀಠತ್ರಯದಲ್ಲಿ ವಾಸಿಸುವಳೂ ಅ-ಕ-ಥ ಗಳೆಂಬ ಅಕ್ಷರಗಳಲ್ಲಿ ಪ್ರತಿಯೊಂದು ಅಕ್ಷರವೂ ಆದಿಯಾಗಿ ವರ್ಣಮಾಲೆಯ ಅನುಕ್ರಮವಾಗಿ ಹದಿನಾರು ವರ್ಣಮಯವಾದ ಶ್ರೀ ಪೀಠದಲ್ಲಿ ಕುಳಿತುಕೊಂಡಿರುವವಳೂ, ಶ್ರೇಷ್ಠಳೂ, ಅಜ್ಞಾನ-ಮತ್ತು ಆದರ ಕಾರ್ಯದೃಷ್ಟಿಗೆ ಭಯಂಕರಳೂ, ಚೈತನ್ಯ ಕಲಾರೂಪಳೂ, ಆದ ಮಹಾ ತ್ರಿಪುರಾದೇವಿಯನ್ನು ಧ್ಯಾನಿಸಿರಿ. ಯಾರು ಇಂತಹ ಮಹಾಧ್ಯಾನ ಯೋಗದಿಂದ ಜಗದಂಬೆಯನ್ನು ಉಪಾಸನೆ ಮಾಡುವನೋ ಆ ಮನುಷ್ಯನು ಪರ ದೇವತೆಯನ್ನು ತತ್ವರೂಪದಿಂದ ತಿಳಿದು ತತ್ವಜ್ಞಾನಿಯೆನಿಸಿಕೊಳ್ಳುವುದರಿಂದ ಕೃತ ಕೃತ್ಯನಾಗುವನು, ಇಲ್ಲಿಗೆ ಮೊದಲನೆಯ ಉಪನಿಷತ್ತು ಮುಗಿಯಿತಾದ್ದರಿಂದ ಅದನ್ನು ಸೂಚಿಸಲು ಕಡೆಯಲ್ಲಿ ಮಹೋಪನಿಷತ್ ಎಂದು ಹೇಳಿದೆ. ॥ ೩೯ ॥

ಪ್ರಥಮೋಪನಿಷತ್ತಿನ ಅನುವಾದವು ಮುಗಿದುದು.



॥ ಶ್ರೀರಸ್ತು ॥

## ॥ ದ್ವಿತೀಯೋಪನಿಷತ್ ॥

---

ಅಥಾತೋ ಜಾತವೇದಸೇ ಸುನವಾಮ ಸೋಮಮಿತ್ಯಾದಿ ಪಠಿತ್ವಾ ತ್ರೈಪುರೀ ವ್ಯಕ್ತಿರ್ಲಕ್ಷ್ಯತೇ ॥ ೧ ॥

ಜಾತವೇದಸ ಇತ್ಯೇಕರ್ಚಸೂಕ್ತಸ್ಯಾದ್ಯಮಧ್ಯಮಾವಸಾನೇಷು ತತ್ರ ಸ್ಥಾನೇಷು ವಿಲೀನಂ ಬೀಜಸಾಗರರೂಪಂ ವ್ಯಾಚಕ್ಷ್ವೇತ್ಯೃಷಯ ಊಚುಃ ॥ ೨ ॥

ತಾನ್ ಹೋವಾಚ ಭಗವಾನ್ ಜಾತವೇದಸೇ ಸುನವಾಮ ಸೋಮಂ ತದಂತ್ಯಮವಾಣೀಂ ವಿಲೋಮೇನ ಪಠಿತ್ವಾ ಪ್ರಥಮಸ್ಯಾದ್ಯಂ ತದೇವ ದೀರ್ಘಂ ದ್ವಿತೀಯಸ್ಯಾದ್ಯಂ ಸುನವಾಮ ಸೋಮಮಿತ್ಯನೇನ ಕೌಲಂ ವಾಮಂ ಶ್ರೇಷ್ಠಂ ಸೋಮಂ ಮಹಾಸೌಭಾಗ್ಯಮಾಚಕ್ಷತೇ ॥ ೩ ॥

॥ ಶ್ರೀ ॥

# ದ್ವಿತೀಯೋಪನಿಷತ್ತಿನ ಕನ್ನಡ ಅನುವಾದವು.

---

ಪ್ರಥಮೋಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಟ್ಟ ಮಹಾತ್ರಿಪುರಸುಂದರೀದೇವಿಯ ಅಪರೋಕ್ಷಸಾಕ್ಷಾತ್ಕಾರಕ್ಕೋಸ್ಕರ ದ್ವಿತೀಯೋಪನಿಷತ್ತು ಪ್ರವರ್ತಿಸಿದೆ. ಪರದೇವತಾ ಸಾಕ್ಷಾತ್ಕಾರಕ್ಕೆ ಅರ್ಹವಾದ ಅಧಿಕಾರವು ದೊರೆತು ಮೊದಲನೆಯ ಉಪನಿಷದರ್ಥದ ಅಭ್ಯಾಸಾನುಚಿಂತನಗಳನ್ನು ಮಾಡಿದರೂ ಸಾಕ್ಷಾತ್ಕಾರವು ದುರ್ಲಭವಾದುದರಿಂದ ದ್ವಿತೀಯೋಪನಿಷತ್ತಿನ ಆರಂಭವು ಸಾರ್ಥಕವಾದುದು ಅಂತಹ ಅಧಿಕಾರಿಯು ಅರ್ಥಾನುಸಂಧಾನಪೂರ್ವಕವಾಗಿ ಜಾತವೇದಸೇ ಎಂಬ ಋಙ್ಮಂತ್ರರೂಪವಾದ ತ್ರಿಪುರಾವಿದ್ಯೆಯನ್ನು ತನ್ನಲ್ಲಿ ದೇವತೈಕ್ಯಾನುಸಂಧಾನ ಪೂರ್ವಕವಾಗಿ ಪಠಿಸಿದರೆ ಅವನಿಗೆ ತ್ರಿಪುರಾದೇವಿಯ ಸಾಂನಿಧ್ಯವೂ ಸಾಕ್ಷಾತ್ಕಾರವೂ ಉಂಟಾಗುವುವು. ॥ ೧ ॥

ಭಗವಂತನ ಮುಖಾರವಿಂದದಿಂದ ಹೊರಟ ಈ ವಾಣಿಯನ್ನು ಕೇಳಿ ಮುಮುಕ್ಷುಗಳಾದ ಮುನಿಗಳು ಅರಿಯಬೇಕೆಂಬ ಕುತೂಹಲದಿಂದ "ಜಾತವೇದಸೇ" ಎಂಬ ಒಂದು ಋಕ್ಕಿನಿಂದ ಪರಿಪೂರ್ಣಸೂಕ್ತದ ಆದಿ-ಮಧ್ಯ-ಅಂತ ರೂಪವಾದ ಸ್ಥಾನ ತ್ರಯದಲ್ಲಿ ಅಡಗಿರುವ ಬೀಜಾಕ್ಷರ ಸಮುದ್ರರೂಪವನ್ನು ವ್ಯಾಖ್ಯಾನ ಮಾಡಬೇಕೆಂದು ಭಗವಂತನನ್ನು ಪ್ರಶ್ನಿಸಿದರು. ॥ ೨ ॥

ಮುನಿಗಳ ಪ್ರಶ್ನೆಯನ್ನು ಲಾಲಿಸಿ ಭಗವಂತನು ಕರುಣೆಯಿಂದ ಉತ್ತರವನ್ನಿತ್ತನು. ಜಾತವೇದಸೇ ಸುನವಾಮ ಸೋಮಂ ಎಂಬುದನ್ನು ಉಚ್ಚರಿಸಿ ಆದಿ ವಿದ್ಯೆಯ ಕಡೆಯ ಭಾಗವಾದ ಶಕ್ತಿಕೂಟವನ್ನು ಕಡೆಯ ಅಕ್ಷರವನ್ನು ಪ್ರಾರಂಭಿಸಿ ಮೊದಲನೆಯ ಅಕ್ಷರದಲ್ಲಿ ಮುಗಿಸುವ ವಿಲೋಮ ಕ್ರಮದಿಂದ "ಹ್ರೀಂಲಕಸ" ಎಂದು ಉಚ್ಚರಿಸಿ, ವಾಗ್ಭವಕೂಟದ ಆದ್ಯಕ್ಷರ "ಕ" ಕಾರವನ್ನು ದೀರ್ಘವಾಗಿಯೂ ಕಾಮಕೂಟದ ಪ್ರಥಮಾಕ್ಷರ "ಸಕಾರವನ್ನೂ" ಸೇರಿಸಿದರೆ "ಕಾಹ" ಎಂಬ ಬೀಜವರ್ಣಗಳಾಗುವುವು. ಇದಕ್ಕೆ ತ್ರಿಪುರಾವಿದ್ಯೆ ಅಥವಾ ಸಮಷ್ಟಿ ರೂಪದಿಂದ ಅಮೃತರೂಪಿಣೀ ಎಂದು ಹೆಸರು. ಈ ಮಂತ್ರದಲ್ಲಿ ಸೇರಿರುವ ಸುನವಾಮಸೋಮಂ ಎಂಬ ಭಾಗವು ತನಗೆ ವ್ಯತಿರಿಕ್ತ ಸಕಲ ಪ್ರಪಂಚದ ಅಪವಾದಕ್ಕೆ ಅಧಿಷ್ಠಾನವಾದ ಸ್ವಾತಿರಿಕ್ತ ವಸ್ತುಗಳನ್ನೆಲ್ಲ ಗ್ರಸನಮಾಡಲು ದಕ್ಷವಾದ, ಸರ್ವವೂ ವಿಲಯಹೊಂದಿದರೂ ಸ್ವಮಾತ್ರಾವಶೇಷದಿಂದ ಪಾರಮಾರ್ಥಿಕವಾಗಿ ಶ್ರೇಷ್ಠವಾದ, ಸರ್ವವನ್ನೂ ಗ್ರಸನಮಾಡಿದ್ದರಿಂದ ಕ್ರೂರವಾಗಿರುವಂತೆ ತೋರಿದರೂ ವಾಸ್ತವಿಕವಾಗಿ ಸಂಶಾಂತ ರೂಪವಾದ, ನಿರ್ವಿಶೇಷಚೈತನ್ಯವನ್ನು ವಿದೇಹ ಕೈವಲ್ಯವೆಂಬ ಮಹಾ ಸೌಭಾಗ್ಯ ರೂಪವಾಗಿ ಹೇಳುತ್ತಿದೆ. ॥ ೩ ॥

ಸರ್ವಸಂಪತ್ತಿಭೂತಂ ಪ್ರಥಮಂ ನಿವೃತ್ತಿಕಾರಣಂ ದ್ವಿತೀಯಂ ಸ್ಥಿತಿ ಕಾರಣಂ ತೃತೀಯಂ ಸರ್ಗಕಾರಣ ಮಿತ್ಯನೇನ ಕರಶುದ್ಧಿಂ ಕೃತ್ವಾ ತ್ರಿಪುರಾ ವಿದ್ಯಾಂ ಸ್ಪಷ್ಟೀಕೃತ್ವಾ ಜಾತವೇದಸೇ ಸುನವಾಮ ಸೋಮಮಿತ್ಯಾದಿ ಪಠಿತ್ವಾ ಮಹಾವಿದ್ಯೇಶ್ವರೀವಿದ್ಯಾಮಾಚಕ್ಷತೇ ॥ ೪ ॥

ತ್ರಿಪುರೇಶ್ವರೀಂ ಜಾತವೇದಸ ಇತಿ ಜಾತೇ ಆದ್ಯಕ್ಷರೇ ಮಾತೃಕಾಯಾಃ ಶಿರಸಿ ಬೈಂದವಮಮೃತರೂಪಿಣೀಂ ಕುಂಡಲಿನೀಂ ತ್ರಿಕೋಣರೂಪಿಣೀಂ ಚೇತಿ ವಾಕ್ಯಾರ್ಥಃ ॥ ೫ ॥

ಏವಂ ಪ್ರಥಮಸ್ಯಾದ್ಯಂ ವಾಗ್ಭವಂ ದ್ವಿತೀಯಂ ಕಾಮಕಲಾಮಯಂ ಜಾತ ಇತ್ಯನೇನ ಪರಮಾತ್ಮನೋಜ್ಜೃಂಭಣಂ ॥ ೬ ॥

ಜಾತ ಇತ್ಯಾದಿನಾ ಪರಮಾತ್ಮಾ ಶಿವ ಉಚ್ಯತೇ ॥ ೭ ॥

ಜಾತ ಮಾತ್ರೇಣ ಕಾಮಿಾ ಕಾಮಯತೇ ಕಾಮಮಿತ್ಯಾದಿನಾಪೂರ್ಣಂ ವ್ಯಾಚಕ್ಷತೇ ॥ ೮ ॥

ಸಕಲೈಶ್ವರ್ಯಗಳನ್ನು ಉಪಾಸಕರಿಗೆ ಪ್ರದಾನಮಾಡುವ ಶಕ್ತಿಯುಳ್ಳ ಆದಿ ವಿದ್ಯೆಯ ಕೂಟತ್ರಯದಲ್ಲಿ ಮೊದಲನೆಯ ವಾಗ್ಭವಕೂಟವು ಪ್ರಲಯಕಾಲದಲ್ಲಿ ಸಕಲ ಪ್ರಪಂಚವನ್ನೂ ಸಂಹರಿಸುವ ರುದ್ರಮೂರ್ತಿಯ ಅರ್ಥವುಳ್ಳದ್ದರಿಂದ ನಿವೃತ್ತಿ ಕಾರಣವು. ಕಾಮಕೂಟವು ಪ್ರಪಂಚಕ್ಕೆಲ್ಲ ಸತ್ತಾಸ್ಫೂರ್ತಿಗಳನ್ನು ಕೊಟ್ಟು ಕಡೆಗೂ ಸ್ವಾವಶೇಷವನ್ನಾಗಿ ಮಾಡಿ ಪರಿಪಾಲನೆಮಾಡುವ ವಿಷ್ಣುರೂಪವಾದ ಅರ್ಥವನ್ನು ಬೋಧಿಸುವುದರಿಂದ ಸ್ಥಿತಿಕಾರಣವು. ಮೂರನೆಯದಾದ ಶಕ್ತಿಕೂಟವು ಅತಿರಿಕ್ತಸರ್ವ ಪ್ರಪಂಚಸೃಷ್ಟಿಗೆ ಕಾರಣವಾದ ಬ್ರಹ್ಮರೂಪವಾದ ಅರ್ಥವನ್ನು ಬೋಧಿಸುವುದರಿಂದ ಸೃಷ್ಟಿಕಾರಣವು. ಈ ರೀತಿಯಾಗಿ ಕೂಟತ್ರಯವನ್ನೂ ಮೂರ್ತಿತ್ರಯಭಾವನೆಯಿಂದ ಅಂತಃಕರಣವನ್ನು ಶೋಧನಮಾಡಿ ತ್ರಿಪುರಾವಿದ್ಯೆಯನ್ನು ಪೂರ್ತಿಯಾಗಿ ಉಚ್ಚರಿಸಿ ಅರ್ಥಾನುಸಂಧಾನದಿಂದ ಅದನ್ನು ಸ್ಪಷ್ಟಪಡಿಸಿ ಮತ್ತೊಂದುಸಲ ಜಾತವೇದಸೇ ಸುನವಾಮ ಸೋಮಂ ಇತ್ಯಾದಿ ಋಙ್ಮಂತ್ರವನ್ನು ಉಚ್ಚರಿಸಿದರೆ ಆಗುವ ಒಟ್ಟು ಮಂತ್ರವನ್ನೂ ಅದರಿಂದ ಉಂಟಾಗುವ ತತ್ವವಿದ್ಯೆಯನ್ನೂ ಮಹಾವಿದ್ಯೇಶ್ವರೀವಿದ್ಯೆ ಯೆಂದು ಕರೆಯುತ್ತಾರೆ. ॥ ೪ ॥

ಈ ಮಂತ್ರಾರ್ಥದ ಸಾರವೇನೆಂದರೆ:—ಜಾತವೇದಸೇ ಎಂಬಲ್ಲಿರುವ ಜಾತ ಎಂದರೆ ನಿಖಿಲವೇದಗಳಿಗೆ ಆದಿಯಾಗಿ ವರ್ಣಮಾತೃಕೆಯಲ್ಲೆ ಪ್ರಧಾನವಾಗಿರುವ ಪ್ರಣವವೆಂಬ ಓಂಕಾರದಲ್ಲಿ ತ್ರಿಪುರಾದೇವಿಯು ಅಧಿಷ್ಠಾನ ಮಾಡಿರುವಳು. ಹಾಗೆ ಆ ಪ್ರಣವದ ಶಿರಸ್ಸಿನಲ್ಲಿರುವ ಬಿಂದುವು ಈಶ್ವರತತ್ವವು. ಇದನ್ನು ಸರ್ವಪ್ರಾಣಿ ಸಮಷ್ಟಿರೂಪದಿಂದ ಅಮೃತರೂಪಿಣಿ ಎಂಬುದಾಗಿಯೂ ವ್ಯಷ್ಟಿರೂಪದಿಂದ ಸಮಸ್ತ ಪ್ರಾಣಿನಾಡೀ ಕಂದವನ್ನು ಆಶ್ರಯಿಸಿ ಮೂಲಾಧಾರಚಕ್ರದ ತ್ರಿಕೋಣರೂಪವಾಗಿರು ವುದರಿಂದ, ತ್ರಿಕೋಣರೂಪಿಣಿ ಕುಂಡಲಿನಿ ಎಂಬುದಾಗಿಯೂ ವಾಕ್ಯಾರ್ಥರೂಪವಾಗಿ ಬೋಧಿಸುತ್ತದೆ. ॥ ೫ ॥

ಹೀಗೆ ಪ್ರಧಾನ ಆದಿವಿದ್ಯೆಯ ವಾಗ್ಭವಕೂಟ, ಕಾಮಕೂಟ, ಶಕ್ತಿಕೂಟಗಳೆಂಬ ಕೂಟತ್ರಯರೂಪದಿಂದ ಪರಮಾತ್ಮನೇ ಇರುವನೆಂದು "ಜಾತವೇದಸೇ" ಮಂತ್ರದ ಜಾತಪದದಿಂದ ಪ್ರಕಟವಾಗುವುದು. ॥ ೬ ॥

ಅಜ್ಞಾನಿ ದೃಷ್ಟಿಗೆ ಪರಮಾತ್ಮನು ಕೂಟತ್ರಯಾದಿ ಭಾವನಾ ಗೋಚರನಾದರೂ ತತ್ವಜ್ಞಾನಿಗೆ ಶಾಂತರೂಪವಾದ ನಿರ್ವಿಶೇಷ ಚೈತನ್ಯರೂಪನೇ ಎಂದು ಹೇಳಲ್ಪಡು ತ್ತಾನೆ. ॥ ೭ ॥

ಅಜ್ಞರ ಕಲ್ಪನೆಯಲ್ಲಿ ತನ್ನಿಂದ ಹುಟ್ಟಿದ ಪ್ರಪಂಚವು ತನಗೆ ನಿಯಮ್ಯವಾಗಿದ್ದು ತಾನು ಈಶ್ವರನಾಗಬೇಕೆಂದು ಕಾಮಿಸುವ ರೂಪದಿಂದ ಇದ್ದರೂ ಬ್ರಹ್ಮಜ್ಞಾನಿಗಳು ನಿರ್ವಿಶೇಷ ವಸ್ತುವಿಗೆ ಸಂಕಲ್ಪರೂಪವಾದ ವಿಕಾರಬರಲಾಗದೆಂದು ಪೂರ್ಣರೂಪ ವಾಗಿಯೇ ವ್ಯಾಖ್ಯಾನಮಾಡುತ್ತಾರೆ. ॥ ೮ ॥

ತದೇವ ಸುನವಾಮ ಗೋತ್ರಾರೂಢಂ ಮಧ್ಯವರ್ತಿನಾಽಮೃತಮಥ್ಯೇ ನಾರ್ಣೇನ ಮಂತ್ರಾರ್ಣಾನ್ ಸ್ಪಷ್ಟೀಕೃತ್ವಾ ಗೋತ್ರೇತಿ ನಾಮಗೋತ್ರಾ ಯಾಮಿತ್ಯಾದಿನಾ ಸ್ಪಷ್ಟಂ ಕಾಮಕಲಾಲಯಂ ಶೇಷಂ ವಾಮಮಿತ್ಯಾದಿನಾ ಪೂರ್ಣೇಣಾಧ್ವನಾ ವಿದ್ಯೇಯಂ ಸರ್ವರಕ್ಷಾಕರೀ ವ್ಯಾಚಕ್ಷತೇ ॥ ೯ ॥

ಏವಮೇತೇನ ವಿದ್ಯಾಂ ತ್ರಿಪುರೇಶೀಂ ಸ್ಪಷ್ಟೀಕೃತ್ವಾ ಜಾತವೇದಸ ಇತ್ಯಾದಿನಾ ಜಾತೋ ದೇವ ಏಕ ಈಶ್ವರಃ ಪರಮೋ ಜ್ಯೋತಿರ್ಮಂತ್ರತೋ ವೇತಿ ತುರೀಯಂ ವರಂ ದತ್ವಾ ಬಿಂದುಪೂರ್ಣಜ್ಯೋತಿಃಸ್ಥಾನಂ ಕೃತ್ವಾ ಪ್ರಥಮಸ್ಯಾದ್ಯಂ ದ್ವಿತೀಯಂ ಚ ತೃತೀಯಂ ಚ ಸರ್ವರಕ್ಷಾಕರೀಸಂಬಂಧಂ ಕೃತ್ವಾ ವಿದ್ಯಾಮಾತ್ಮಾಸನರೂಪಿಣೀಂ ಸ್ಪಷ್ಟೀಕೃತ್ವಾ ಜಾತವೇದಸೇ ಸುನ ವಾಮ ಸೋಮಮಿತ್ಯಾದಿ ಪಠಿತ್ವಾ ರಕ್ಷಾಕರೀಂ ವಿದ್ಯಾಂ ಸ್ಮೃತ್ವಾಽದ್ಯಂತ ಯೋರ್ಥಾರ್ಮ್ನೋಃ ಶಕ್ತಿಶಿವರೂಪಿಣೀಂ ವಿನಿಯೋಜ್ಯ ಸ ಇತಿ ಶಕ್ತ್ಯಾತ್ಮಕಂ ವರ್ಣಂ ಸೋಮಮಿತಿ ಶೈವಾತ್ಮಕಂ ಧಾಮ ಜಾನೀಯಾತ್ ಯೋ ಜಾನೀತೇ ಸ ಸುಭಗೋ ಭವತಿ ॥ ೧೦ ॥

ಇತ್ಯೇವಮೇತಾಂ ಚಕ್ರಾಸನಗತಾಂ ತ್ರಿಪುರವಾಸಿನೀಂ ವಿದ್ಯಾಂ ಸ್ಪಷ್ಟೀ ಕೃತ್ವಾ ಜಾತವೇದಸೇ ಸುನವಾಮಸೋಮಮಿತಿ ಪಠಿತ್ವಾ ತ್ರಿಪುರೇಶ್ವರೀ ವಿದ್ಯಾಂ ಸದೋದಿತಾಂ ಶಿವಶಕ್ತ್ಯಾತ್ಮಿಕಾಮಾವೇದಿತಾಂ ಜಾತವೇದಾಃ ಶಿವ

ಬ್ರಹ್ಮಜ್ಞಾನಿಗಳು ಉಪದೇಶಮಾಡುವ ಪರಿಪೂರ್ಣಚೈತನ್ಯರೂಪವನ್ನು ಸ್ಪಷ್ಟವಾಗಿ ಗೋತ್ರಾರೂಢಂ = ಎಂದು ಹೇಳೋಣ. ಗೋತ್ರಾರೂಢಂ ಎಂಬಲ್ಲಿ "ಗೋತ್ರಾಶಬ್ದವು ಭೂಮಿಯನ್ನು ಬೋಧಿಸುವುದರ ಮೂಲಕ ಅದರ ಬೀಜಾಕ್ಷರವಾಗಿ ಕೂಟತ್ರಯದಲ್ಲಿ ಸೇರಿರುವ ಲಕಾರಗಳನ್ನು ಬೋಧಿಸುವುದು. ಲಕಾರತ್ರಯದಲ್ಲಿ ಪೃಥಿವೀ ಅಂಶವಾದ ವಿಕಾರಗಳನ್ನು ಪರಿತ್ಯಜಿಸಿ ಸಚ್ಚಿದಾನಂದಾಂಶಗಳಿಂದ ಪೂರ್ಣಚೈತನ್ಯವೇ ವ್ಯಾಪಿಸಿದೆ ಎಂದು ಅರ್ಥವಾಗುವುದು. ಹೀಗೆ ಕೂಟತ್ರಯದ ಮಧ್ಯದಲ್ಲಿದ್ದು ಪೃಥಿವೀಗತವಾದ ವಿಕಾರಗಳನ್ನು ಗ್ರಸನಮಾಡುವುದರಿಂದ ಅಮೃತಮಧ್ಯವೆಂದೆನಿಸುವ ಲಕಾರ ಮತ್ತು ಇತರ ವರ್ಣಗಳ ಅರ್ಥವನ್ನು ಸ್ಪಷ್ಟವಾಗಿ ಅನುಸಂಧಾನಮಾಡಬೇಕು. ಪೃಥಿವಿಗೆ ಪೃಥಿವೀ ಎಂಬ ಹೆಸರು, ಮತ್ತು ಬೀಜಭೂತ ಲಕಾರವು ಇವುಗಳ ವಿವರಣೆಯಿಂದ ನಾಮರೂಪ ವಿಕಾರಶೂನ್ಯವಾದ ಶಿವತತ್ವವು ವ್ಯಾಪಿಸಿರುತ್ತೆ ಎಂಬ ಅಂಶದಿಂದ ಕಾಮಕೂಟದ ಅರ್ಥವು ವಿವರಿಸಲ್ಪಟ್ಟಿತು. ಮಿಕ್ಕ ಕೂಟಗಳ ವಿವರಣೆಯನ್ನು ಹಿಂದೆ ಹೇಳಿದ "ವಾಮಂ" ಎಂದು ಮುಂತಾದ ವಿಶೇಷಣಗಳು ಬೋಧಿಸುವಂತೆ ತಿಳಿಯಬೇಕು. ಇದನ್ನು ಸರ್ವರಕ್ಷಾಕರೀವಿದ್ಯೆಯೆಂಬದಾಗಿ ಕರೆಯುತ್ತಾರೆ. ॥ ೯ ॥

ಮೇಲೆ ಹೇಳಿದ ವ್ಯಾಖ್ಯಾನವನ್ನನುಸರಿಸಿ ತ್ರಿಪುರೇಶೀ ವಿದ್ಯೆಯನ್ನು ಸ್ಪಷ್ಟವಾಗಿ ಉಚ್ಚರಿಸಿ ಜಾತವೇದಸೆ ಎಂಬ ಮಂತ್ರಪಾಠದಿಂದ ನಿರ್ವಿಶೇಷರೂಪನಾದ ಪರಮಾತ್ಮನೊಬ್ಬನೇ ಪರಮಜ್ಯೋತಿರೂಪದಿಂದ ಅವಶೇಷ ಹೊಂದಿರುವನೆಂದೂ ಆದಿವಿದ್ಯೆಯ ಕೂಟತ್ರಯದ ಅನುಸಂಧಾನಾವಸಾನದಲ್ಲಿ ಉದಯಿಸುವ ಸಂವಿದ್ರೂಪನಾದ ನಿರ್ವಿಕಲ್ಪಕ ತುರೀಯ ಸ್ವರೂಪನೆಂದೂ ಶಿವನಿಗಿಂತ ಅತಿರಿಕ್ತವಾದ ಕೂಟತ್ರಯವೊದಲಾದುದು ಯಾವುದೂ ಇಲ್ಲವೆಂದೂ ಧ್ಯಾನಿಸಿ ಪರಿಪೂರ್ಣಾಹಂಭಾವದಿಂದ ಈಶ್ವರ ಐಕ್ಯವನ್ನು ಇರಿಸಿ ಕೂಟತ್ರಯವನ್ನು ಪಠಿಸಿ ಸರ್ವರಕ್ಷಾಕರೀ ವಿದ್ಯೆಯ ಸಂಬಂಧವನ್ನು ಕಲ್ಪಿಸಿ ಇದರಿಂದ ಆತ್ಮಾಸನರೂಪಿಣೀ ವಿದ್ಯೆಯನ್ನು ಸ್ಪಷ್ಟಪಡಿಸಬೇಕು. ಮತ್ತು ಜಾತವೇದಸೇ ಸುನವಾಮಸೋಮಂ ಎಂಬ ಮಂತ್ರವನ್ನು ಪಠಿಸಿ ಸರ್ವರಕ್ಷಾಕರೀ ವಿದ್ಯೆಯನ್ನು ಉಚ್ಚರಿಸಿ ಆದಿ ಅಂತಗಳಲ್ಲಿ "ಸ" ಎಂಬ ಶಕ್ತಿವರ್ಣವನ್ನೂ "ಸೋಮಂ" ಎಂಬ ಶಿವಸ್ಥಾನವಾದ ವರ್ಣಗಳನ್ನೂ ಸೇರಿಸಿ ಶಕ್ತಿ ಶಿವರೂಪಿಣೀ ವರ್ಣಯೋಗವಿರುವುದರಿಂದ ಇದನ್ನು ಶಕ್ತಿಶಿವರೂಪಿಣೀ ವಿದ್ಯೆಯೆಂದು ಅರಿಯಬೇಕು. ಇದನ್ನು ಯಥಾವಿಧಿಯಾಗಿ ತಿಳಿದು ಉಪಾಸನೆಮಾಡಿದವನು ಪ್ರಪಂಚದಲ್ಲಿ ಮಹಾತ್ಮನಾಗುವನು. ॥ ೧೦ ॥

ಈ ರೀತಿಯಾಗಿ ಚಕ್ರಾಧಾರದಲ್ಲಿರುವ ಈ ತ್ರಿಪುರವಾಸಿನೀ ವಿದ್ಯೆಯನ್ನು ಚಿಚ್ಛಕ್ತಿರೂಪದಿಂದ ಅರಿತು ಧ್ಯಾನಮಾಡಿ ಜಾತವೇದಸೇ ಸುನವಾಮಸೋಮಂ ಎಂಬ ಮಂತ್ರವನ್ನು ಪಠಿಸಿ ತ್ರಿಪುರೇಶ್ವರೀ ವಿದ್ಯೆಯಲ್ಲಿ ಚೈತನ್ಯಾಭೇದವನ್ನು ಭಾವಿಸಬೇಕು.

ಇತಿ ಸೇತಿ ಶಕ್ತ್ಯಾತ್ಮಾಕ್ಷರಮಿತಿ ಶಿವಾದಿಶಕ್ತ್ಯಂತರಾಲಭೂತಾಂ ತ್ರಿಕೂಟಾದಿಚಾರಿಣೀಂ ಸೂರ್ಯಾಚಂದ್ರಮಸ್ಕಾಂ ಮಂತ್ರಾಸನಗತಾಂ ತ್ರಿಪುರಾಂ ಮಹಾಲಕ್ಷ್ಮೀಂ ಸದೋದಿತಾಂ ಸ್ಪಷ್ಟೀಕೃತ್ವಾ ಜಾತವೇದಸೇ ಸುನವಾಮಸೋಮಮಿತ್ಯಾದಿ ಪಠಿತ್ವಾ ಪೂರ್ವಾಂ ಸದಾತ್ಮಾಽಽಸನರೂಪಾಂ ವಿದ್ಯಾಂ ಸ್ಮೃತ್ವಾ ದೇವ ಇತ್ಯಾದಿನಾ ವಿಶ್ವಾಹಸಂತತೋದಯಾ ಬೈಂದವಮುಪರಿ ವಿನ್ಯಸ್ಯ ಸಿದ್ಧಾಸನಸ್ಥಾಂ ತ್ರಿಪುರಾಂ ಮಾಲಿನೀಂ ವಿದ್ಯಾಂ ಸ್ಪಷ್ಟೀಕೃತ್ವಾ ಜಾತವೇದಸೇ ಸುನವಾಮ ಸೋಮಮಿತ್ಯಾದಿ ಪಠಿತ್ವಾ ತ್ರಿಪುರಾಂ ಸುಂದರೀಂ ಶ್ರಿತ್ವಾ ಕಲೇ ಅಕ್ಷರೇ ವಿಚಿಂತ್ಯ ಮೂರ್ತಿಭೂತಾಂ ಮೂರ್ತಿರೂಪಿಣೀಂ ಸರ್ವವಿದ್ಯೇಶ್ವರೀಂ ತ್ರಿಪುರಾಂ ವಿದ್ಯಾಂ ಸ್ಪಷ್ಟೀಕೃತ್ವಾ ಜಾತವೇದಸ ಇತ್ಯಾದಿ ಪಠಿತ್ವಾ ತ್ರಿಪುರಾಂ ಲಕ್ಷ್ಮೀಂ ಶ್ರಿತ್ವಾಽಗ್ನಿಂ ನಿದಹಾತಿ ॥ ೧೧ ॥

ಸೈವೇಯಮಗ್ನ್ಯಾನನೇ ಜ್ವಲತೀತಿ ವಿಚಿಂತ್ಯ ತ್ರಿಜ್ಯೋತಿಷಮೀಶ್ವರೀಂ ತ್ರಿಪುರಾಮಂಬಾಂ ವಿದ್ಯಾಂ ಸ್ಪಷ್ಟೀಕುರ್ಯಾತ್ ॥ ೧೨ ॥

ಏವಮೇತೇನ ಸ ನಃ ಪರ್ಷದತಿ ದುರ್ಗಾಣಿ ವಿಶ್ವೇತ್ಯಾದಿ ಪರಪ್ರಕಾಶಿನೀ ಪ್ರತ್ಯಗ್ಭೂತಾ ಕಾರ್ಯಾ ವಿದ್ಯೇಯಮಾಹ್ವಾನಕರ್ಮಣಿ ಸರ್ವತೋಧೀರೇತಿ ವ್ಯಾಚಕ್ಷತೇ ॥ ೧೩ ॥

ಅಂತಹ ತ್ರಿಪುರೇಶ್ವರೀ ವಿದ್ಯೆಗೆ ಅನೇಕ ವಿಶೇಷಣಗಳು ಹೇಳಲ್ಪಟ್ಟಿವೆ. ವಿಧಿಯಲ್ಲಿ ಉಕ್ತವಾದ ವಿಶೇಷಣಗಳನ್ನು ಧ್ಯಾನದಲ್ಲಿ ಸೇರಿಸಿಕೊಳ್ಳಬೇಕು. ಮಂತ್ರ ಮಂತ್ರಾಭಿಮಾನಿದೇವತೆ ಇವೆರಡೂ ಅಭೇದದಿಂದಿರುವುದರಿಂದ ದೇವತೆಯಲ್ಲಿ ಅನು ರೂಪವಾಗಿ ಅನ್ವಯಿಸಬಹುದಾದ ವಿದ್ಯೆಯಲ್ಲಿಯೂ ಉಪಾತ್ತವಾಗಿವೆ. ಸರ್ವ ಕಾಲದಲ್ಲಿಯೂ ಉದಿತವಾಗಿಯೂ ಶಿವ-ಶಕ್ತಿರೂಪವಾಗಿ ತಿಳಿಸಲ್ಪಟ್ಟದ್ದೂ ಆಗಿದೆ. ಜಾತವೇದಸೇ ಎಂಬ ಮಂತ್ರದಿಂದ ಶಿವಶಕ್ತ್ಯಾತ್ಮಕತ್ವವು ವಿದ್ಯೆಯಲ್ಲಿ ಸೂಚಿಸ ಲ್ಪಟ್ಟಿದೆ. ಅದೆಂತೆಂದರೆ ಜಾತವೇದಾಃ ಎಂದರೆ ಶಿವನು ಸಕಾರವು ಶಕ್ತಿಪರ, ಇವೆರಡ ರಿಂದ ಶಿವಶಕ್ತಿರೂಪತ್ವವು ವ್ಯಕ್ತಗೊಂಡಿತು. ನಿರುಪಾಧಿಕತ್ವರೂಪದಿಂದ ಶಿವ-ಶಕ್ತಿಗಳಿಗೆ ಅಂತರಾಳದಲ್ಲಿರುವ ಕೂಟತ್ರಯಾದಿ ಮಂತ್ರ ಸಮೂಹಗಳಲ್ಲಿ ಸಂಚರಿಸುವ, ಸೂರ್ಯ ಬೋಧಕವಾದ ಹಕಾರವೂ ಚಂದ್ರಬೋಧಕವಾದ ಸಕಾರವೂ ಇರುವುದರಿಂದ ಸೂರ್ಯಚಂದ್ರ ಸ್ವರೂಪಳಾದ ಮಂತ್ರಾಧಾರದಲ್ಲಿ ಸನ್ನಿಹಿತಳಾದ ತ್ರಿಪುರಾ ಅಥವಾ ಮಹಾಲಕ್ಷ್ಮಿಯನ್ನು ಚಿದ್ರೂಪವಾಗಿ ಧ್ಯಾನಿಸಿ ಪುನಃ ಜಾತವೇದಸೇ ಎಂಬ ಮಂತ್ರ ವನ್ನು ಪಠಿಸಿ ಸದಾತ್ಮಾಧಾರಸ್ಥವಾದ ವಿದ್ಯೆಯನ್ನು ಸ್ಮರಿಸಿ ವೇದಃ ಎಂಬ ಮಂತ್ರ ದಲ್ಲಿದ್ದ ಪದದಿಂದ ವಿರಾಟ್‌ರೂಪವಾಗಿ ವಿಶ್ವರೂಪವಾಗಿ ವಿಶ್ವರೂಪಿಣಿಯಾಗಿರುವ, ಹಕಾರದಿಂದ ಸೂರ್ಯರೂಪಳಾಗಿ ಸಂತತವಾಗಿ ಉದಯವುಳ್ಳವಳಾಗಿರುವುದಾಗಿ ಭಾವಿಸಿ ಬಿಂದು ಎಂಬ ಶಿವತತ್ವವನ್ನು ವಿದ್ಯೆಯ ಅಗ್ರಭಾಗದಲ್ಲಿ ಧ್ಯಾನಿಸಬೇಕು. ಎಂದರೆ ಚಿನ್ಮಾತ್ರಕ್ಕಿಂತ ಬೇರೆ ವಸ್ತುವು ಯಾವುದೂ ಇಲ್ಲವೆಂದು ಭಾವಿಸಬೇಕು. ಹಾಗೆ ಸಿದ್ಧಾಸನದಲ್ಲಿರುವ ತ್ರಿಪುರಾಮಾಲಿನೀ ವಿದ್ಯೆಯನ್ನು ಪರತತ್ವಾಭೇದದಿಂದ ಧ್ಯಾನಿಸಿ ಜಾತವೇದಸೇ ಎಂಬ ಮಂತ್ರವನ್ನುಹೇಳಿ ಆ ಮಂತ್ರದಲ್ಲಿ ತ್ರಿಪುರಸುಂದರೀ ದೇವಿಯು ಪ್ರತಿಪಾದ್ಯಳೆಂದು ತಿಳಿದು ಕ-ಕಾರ ಲ-ಕಾರಗಳೆಂಬ ಅಕ್ಷರಗಳ ಮೂರ್ತಿ ರೂಪಳಾಗಿ ಸರ್ವವಿದ್ಯೆಗಳಿಗೂ ಈಶ್ವರಿಯಾಗಿರುವ ತ್ರಿಪುರಸುಂದರೀ ದೇವಿಯನ್ನು ಧ್ಯಾನಿಸಿ ಜಾತವೇದಸೇ ಇತ್ಯಾದಿ ಮಂತ್ರವನ್ನು ಪಠಿಸಿ ತ್ರಿಪುರಾಲಕ್ಷ್ಮಿಯನ್ನು ಸೇವಿಸಿ, ಅಗ್ನಿಂ ನಿದಹಾತಿ ಎಂಬ ಜಾತವೇದಸೇ ಮಂತ್ರದ ಭಾಗದ ಅರ್ಥವನ್ನು ಅನುಸಂಧಾನ ಮಾಡಬೇಕು. ॥ ೧೧ ॥

ತ್ರಿಪುರಾದೇವಿಯು ಶೀತಲವಾದ ಜ್ಞಾನಾಗ್ನಿರೂಪದಿಂದ ಇತರ ಅಗ್ನಿಗಳನ್ನು ದಹಿಸುವುದರಿಂದ ಅಗ್ನಿಮಯವಾದ ಮುಖವುಳ್ಳವಳೆಂದೂ ಸೂರ್ಯ, ಚಂದ್ರ, ಅಗ್ನಿ ಗಳೆಂಬ ಮೂರು ಜ್ಯೋತಿಗಳ ರೂಪಳೆಂದೂ ಸರ್ವೇಶ್ವರಿಯೆಂದೂ ಧ್ಯಾನಿಸಿ ಪ್ರತ್ಯ ಗ್ದೇವತಾರೂಪವನ್ನು ಸ್ಪಷ್ಟಪಡಿಸಬೇಕು. ॥ ೧೨ ॥

ತತ್ತ್ವಜ್ಞಾನದಿಂದ ಬೇರೆಯಾದ ನಿಖಿಲವಸ್ತುಗಳನ್ನೂ ಪ್ರಕಾಶಪಡಿಸುತ್ತಾ ಸಮಸ್ತ ಪ್ರಾಣಿಗಳಿಗೆ ಪ್ರತ್ಯಗ್ರೂಪವಾದ ವಿದ್ಯೆಯನ್ನು " ಸನಃ ಪರ್ಷದತಿ ದುರ್ಗಾಣಿ ವಿಶ್ವಾ" ಎಂಬ ಮಂತ್ರಾರ್ಥಾನುಗುಣವಾಗಿ ಆಕರ್ಷಣಾದಿ ಕರ್ಮಗಳಲ್ಲಿ ಉಪಯೋಗ

ಏವಮೇತದ್ವಿದ್ಯಾಷ್ಟಕಂ ಮಹಾಮಾಯಾದೇವ್ಯಂಗಭೂತಂ ವ್ಯಾಚಕ್ಷತೇ ॥ ೧೪ ॥

ದೇವಾ ಹ ವೈ ಭಗವಂತ ಮಬ್ರುವನ್ ಮಹಾಚಕ್ರನಾಯಕಂ ನೋ ಬ್ರೂಹೀತಿ ಸಾರ್ವಕಾಮಿಕಂ ಸರ್ವಾರಾಧ್ಯಂ ಸರ್ವರೂಪಂ ವಿಶ್ವತೋ ಮುಖಂ ಮೋಕ್ಷದ್ವಾರಂ ಯದ್ಯೋಗಿನ ಉಪವಿಶ್ಯ ಪರಂ ಬ್ರಹ್ಮ ಭಿತ್ತ್ವಾ ನಿರ್ವಾಣಮುಪವಿಶಂತಿ ॥ ೧೫ ॥

ತಾನ್ ಹೋವಾಚ ಭಗವಾನ್ ಶ್ರೀಚಕ್ರಂ ವ್ಯಾಖ್ಯಾಸ್ಯಾಮ ಇತಿ ॥ ೧೬ ॥

ತ್ರಿಕೋಣಂ ತ್ರ್ಯಶ್ರಂ ಕೃತ್ವಾ ತದಂತರ್ಮಧ್ಯವರ್ತಿ ಮಾನಯಷ್ಟಿ ರೇಖಾಮಾಕೃಷ್ಯ ವಿಶಾಲಂ ನೀತ್ವಾಽಗ್ರತೋ ಯೋನಿಂ ಕೃತ್ವಾ ಪೂರ್ವ ಯೋನ್ಯಗ್ರರೂಪಿಣೀಂ ಮಾನಯಷ್ಟಿಂ ಕೃತ್ವಾ ತಾಂ ಸರ್ವೋರ್ಧ್ವಾಂ ನೀತ್ವಾ ಯೋನಿಂ ಕೃತ್ವಾ ಆದ್ಯಂ ತ್ರಿಕೋಣಂ ಚಕ್ರಂ ಭವತಿ ದ್ವಿತೀಯಮಂತರಾಳಂ ಭವತಿ ತೃತೀಯಮಷ್ಟಯೋನ್ಯಂಕಿತಂ ಭವತಿ ॥ ೧೭ ॥

ವುಳ್ಳದ್ದನ್ನಾಗಿ ತಿಳಿಯಬೇಕು. ಆ ವಿನಿಯೋಗವನ್ನು ಹೊಂದಿದ ವಿದ್ಯೆಯು ನಿಖಿಲ ಕಾರ್ಯಗಳನ್ನು ಸಿದ್ಧಿಮಾಡಿಕೊಡುವುದರಲ್ಲಿ ಅತ್ಯುತ್ತಮವಾದ್ದರಿಂದ ಸರ್ವತೋಧೀರಾ ಎಂದು ಕರೆಯುತ್ತಾರೆ. || ೧೩ ||

ಈ ರೀತಿಯಲ್ಲಿ ಜಾತವೇದಸೇ ಮಂತ್ರದಲ್ಲಿ ಅಂತರ್ಭೂತವಾದ ತ್ರಿಪುರಾವಿದ್ಯಾ ಮೊದಲಾಗಿ ತ್ರಿಪುರಾಂಬಾ ವಿದ್ಯಾ ಪರ್ಯಂತವಿದ್ಯಾ ಅಷ್ಟಕವನ್ನು ಮಹಾಮಾಯಾ ದೇವಿಗೆ ಅಂಗವಾದದ್ದರಿಂದೂ ಸ್ವಾಭಾವಿಕವಾಗಿ ಚಿಚ್ಛಕ್ತಿರೂಪವಾದ್ದರಿಂದ ಪರವಿದ್ಯಾ ರೂಪವಾದದ್ದೆಂದೂ ಮಂತ್ರಜ್ಞರು ಹೇಳುತ್ತಾರೆ. || ೧೪ ||

ಇಂದ್ರಾದಿ ದೇವತೆಗಳು ಸದಾಶಿವನ ಮುಖದಿಂದ ಆದಿವಿದ್ಯಾ ಮಂತ್ರಗಳನ್ನು ಕೇಳಿದ ತರುವಾಯ ಅದರ ಪೂಜಾಪೀಠಚಕ್ರಾದಿಗಳ ಸ್ವರೂಪವನ್ನು ತಿಳಿಯಬೇಕೆಂಬ ಕುತೂಹಲದಿಂದ ಪ್ರಶ್ನಿಸುತ್ತಾರೆ. ಚಕ್ರರಾಜವಾದ ಶ್ರೀಚಕ್ರವಿಷಯವನ್ನು ಭಗವಂತನಾದ ನೀನು ನಮಗೆ ಉಪದೇಶಿಸಬೇಕೆಂದು ಕೇಳಿದರು. ಯಾವ ಶ್ರೀಚಕ್ರವು ಉಪಾಸಕರಿಗೆ ಅವರ ಸಂಕಲ್ಪಾನುಸಾರವಾಗಿ ಸರ್ವಕಾಮಗಳನ್ನೂ ನೀಡುವದಾಗಿಯೂ ಅದರಿಂದಲೇ ಸರ್ವರಿಂದಲೂ ಆರಾಧ್ಯವಾಗಿಯೂ ಉಪಾಸಕರು ಯಾವ ದೃಷ್ಟಿಯಿಂದ ಪೂಜಿಸಿದರೂ ಆಯಾಯ ಸಮಸ್ತರೂಪವುಳ್ಳದ್ದಾಗಿಯೂ ವಿರಾಡ್ರೂಪದಿಂದ ಸರ್ವತೋಮುಖವಾಗಿಯೂ ಮುಮುಕ್ಷುಗಳು ಈ ಉಪಾಸನೆಯಿಂದ ಮೋಕ್ಷವನ್ನು ಗಳಿಸುವುದರಿಂದ ಮೋಕ್ಷಕ್ಕೆ ದ್ವಾರವಾಗಿಯೂ ಇದೆಯೋ ಅಂತಹ ಶ್ರೀ ಚಕ್ರ ಉಪಾಸನೆಗಾಗಿ ಯೋಗಿಗಳು ಭಕ್ತಿಪೂರ್ವಕವಾಗಿ ಪ್ರಯತ್ನಿಸಿ ಪ್ರತ್ಯಗಾತ್ಮ ಪರಮಾತ್ಮರ ಭೇದಗ್ರಂಥಿಯನ್ನು ಭೇದಿಸಿ ವಿದೇಹ ಕೈವಲ್ಯವನ್ನು ಹೊಂದುವರು. ಅಂತಹ ಹಿರಿಯ ಮಹಿಮೆಯಿಂದ ಕೂಡಿದ ಶ್ರೀ ಚಕ್ರದ ವಿಷಯವನ್ನು ಕೇಳಿ ಕೃತಾರ್ಥರಾಗಬೇಕಾಗಿದೆಯೆಂದು ದೇವತೆಗಳ ಪ್ರಶ್ನದ ಸಾರವು. || ೧೫ ||

ಭಗವಂತನು ದೇವತೆಗಳ ಪ್ರಶ್ನವನ್ನು ಲಾಲಿಸಿ ಅವರನ್ನು ಕೃತಕೃತ್ಯರನ್ನಾಗಿ ಮಾಡಬೇಕೆಂಬ ಕುರುಣೆಯಿಂದ ಮೊದಲು ನೀವು ಪ್ರಶ್ನಿಸಿದ ಶ್ರೀ ಚಕ್ರದ ವಿಷಯವನ್ನು ವಿಶದವಾಗಿ ವಿವರಿಸುತ್ತೇನೆ ಎಂದು ಪ್ರತ್ಯುತ್ತರವಿತ್ತನು. || ೧೬ ||

ಶ್ರೀಚಕ್ರದ ರಚನೆಯು ಸೃಷ್ಟಿಯೋಗ ಕ್ರಮ ಮತ್ತು ಸಂಹಾರ ಯೋಗ ಕ್ರಮವೆಂದು ಎರಡು ಬಗೆಯಿಂದ ಇದೆ. ಅವುಗಳಲ್ಲಿ ಮೊದಲನೆಯ ರೀತಿಯು ಇಲ್ಲಿ ವಿವರಿಸಲ್ಪಟ್ಟಿದೆ. ಮೊದಲು ಮೂರುಮೂಲೆಗಳುಳ್ಳ ತ್ರಿಕೋಣಾಕಾರ ರೇಖೆಯನ್ನು ಬರೆಯಬೇಕು. ಅದರ ಮಧ್ಯದಲ್ಲಿ ಎರಡು ಪಕ್ಕಗಳಲ್ಲಿಯೂ ವಿಶಾಲವಾಗಿ ಕಾಣಿಸುವ ರೇಖೆಯನ್ನು ಬರೆದು ಅದನ್ನು ಮುಂಭಾಗದಲ್ಲಿ ಯೋನ್ಯಾಕಾರ ಬರುವಂತೆ ಇನ್ನೆರಡು ರೇಖೆಗಳಿಂದ ಸಂಧಿಸಬೇಕು.

ಅಥಾಷ್ಟಾರಚಕ್ರಾದ್ಯಂತವಿದಿಕ್ಕೋಣಾಗ್ರತೋ ರೇಖಾಂ ನೀತ್ವಾ ಸಾಧ್ಯಾದ್ಯಾಕರ್ಷಣಬದ್ಧರೇಖಾಂ ನೀತ್ವೇತ್ಯೇವಮುಥೋರ್ಧ್ವ ಸಂಪುಟ ಯೋನ್ಯಂಕಿತಂ ಕೃತ್ವಾ ಕಕ್ಷಾಭ್ಯ ಊರ್ಧ್ವಗರೇಖಾಚತುಷ್ಟಯಂ ಕೃತ್ವಾ ಯಥಾಕ್ರಮೇಣ ಮಾನಯಷ್ಟಿದ್ವಯೇನ ದಶಯೋನ್ಯಂಕಿತಂ ಚಕ್ರಂ ಭವತಿ ॥ ೧೮ ॥

ಅನೇನೈವ ಕ್ರಮೇಣ ಪುನರ್ದಶಾರಚಕ್ರಂ ಭವತಿ ॥ ೧೯ ॥

ಮಧ್ಯತ್ರಿಕೋಣಾಗ್ರಚತುಷ್ಟಯಾದ್ರೇಖಾಚತುಷ್ಟಯಾಗ್ರಕೋಣೇಷು ಸಂಯೋಜ್ಯ ತದ್ದಶಾರಾಂಶತೋ ನೀತಾಂ ಮಾನಯಷ್ಟಿರೇಖಾಂ ಯೋಜಯಿತ್ವಾ ಚತುರ್ದಶಾರಂ ಚಕ್ರಂ ಭವತಿ ॥ ೨೦ ॥

ತತೋಽಷ್ಟಪತ್ರಸಂವೃತಂ ಚಕ್ರಂ ಭವತಿ ಷೋಡಶಪತ್ರಸಂವೃತಂ ಚಕ್ರಂ ಭವತಿ ಪಾರ್ಥಿವಂ ಚಕ್ರಂ ಚತುರ್ದ್ವಾರಂ ಭವತಿ ॥ ೨೧ ॥

ಏವಂ ಸೃಷ್ಟಿಯೋಗೇನ ಚಕ್ರಂ ವ್ಯಾಖ್ಯಾತಂ ॥ ೨೨ ॥

ನವಾತ್ಮಕಂ ಚಕ್ರಂ ಪ್ರಾತಿಲೋಮ್ಯೇನ ವಾ ವಚ್ಮಿ, ಪ್ರಥಮಂ ಚಕ್ರಂ ತ್ರೈಲೋಕ್ಯ ಮೋಹನಂ ಭವತಿ ಸಾಣಿಮಾದ್ಯಷ್ಟಕಂ ಭವತಿ ಸಮಾತ್ರಷ್ಟಕಂ ಭವತಿ ಸಸರ್ವಸಂಕ್ಷೋಭಣ್ಯಾದಿದಶಕಂ ಭವತಿ ಸಪ್ರಕಟಂ ಭವತಿ ತ್ರಿಪುರಯಾಽಧಿಷ್ಠಿತಂ ಭವತಿ ಸಸರ್ವಸಂಕ್ಷೋಭಿಣೀಮುದ್ರಯಾ ಜುಷ್ಟಂ ಭವತಿ ॥ ೨೩ ॥

ಪುನಃ ಮೊದಲನೆಯ ಯೋನ್ಯಾಕಾರದ ಅಗ್ರಕ್ಕೆ ಸ್ಪರ್ಶಿಸಿದಂತೆ ವಿಶಾಲ ರೇಖೆಯನ್ನು ಬರೆದು ಎಲ್ಲ ರೇಖೆಗಳಿಗಿಂತ ಮೇಲುಭಾಗದಲ್ಲಿ ಬರುವಂತೆ ಯೋನ್ಯಾಕಾರವನ್ನು ಸೃಷ್ಟಿಸಬೇಕು. ಇವುಗಳಲ್ಲಿ ಮಧ್ಯಭಾಗವು ತ್ರಿಕೋಣಚಕ್ರವೂ ಅದರ ಸುತ್ತಲೂ ಇದ್ದ ಭಾಗವು ಅಂತರಾಳವೂ ಅದರ ವೇಷ್ಟನವು ಅಷ್ಟಯೋನ್ಯಾಕಾರ ಅಥವಾ ಅಷ್ಟತ್ರಿಕೋಣಗಳಿಂದ ಅಂಕಿಸಲ್ಪಟ್ಟದ್ದಾಗುವುದು. || ೧೭ ||

ಅಷ್ಟತಿರ್ಯಗ್ರೇಖೆಗಳುಳ್ಳ ಚಕ್ರದ ಆದಿ ಅಂತಭಾಗದ ಮೂಲೆಗಳ ಅಗ್ರದಿಂದ ರೇಖೆಯನ್ನು ಸೆಳೆದು ಅದರಂತೆ ಸೆಳೆದ ಮತ್ತೊಂದು ರೇಖೆಯನ್ನು ಸೇರಿಸಿ ಊರ್ಧ್ವಾಗ್ರವಾಗಿ ಯೋನ್ಯಾಕಾರದ ರೇಖೆಯನ್ನು ಬರೆದು ಪಕ್ಕಗಳಿಂದ ಊರ್ಧ್ವಾಗ್ರವಾಗಿರುವ ನಾಲ್ಕು ರೇಖೆಗಳನ್ನು ಕ್ರಮವಾಗಿ ಎರಡು ಅಡ್ಡಗೆರೆಗಳು ಸೇರುವಂತೆ ಮಾಡಿದರೆ ದಶಯೋನಿ ಆಕಾರಗಳಿಂದ ಅಂಕಿಸಲ್ಪಟ್ಟ ಚಕ್ರಸ್ವರೂಪವು ಆಗುವುದು. || ೧೮ ||

ಇದೇ ಕ್ರಮದಿಂದ ರೇಖೆಗಳನ್ನು ರಚಿಸಿದಲ್ಲಿ ಮತ್ತೆ ದಶಾರ ಚಕ್ರವಾಗುವುದು. || ೧೯ ||

ಮಧ್ಯದ ತ್ರಿಕೋಣಾಕಾರದ ನಾಲ್ಕು ರೇಖಾಗ್ರಗಳಿಂದ ನಾಲ್ಕು ರೇಖೆಗಳ ಮೇಲಿನ ಮೂಲೆಗಳಲ್ಲಿ ಸೇರಿಸಿ ಮಧ್ಯದ ಹತ್ತು ಅರಗಳ ಅಂಶದಿಂದ ಅಗಲರೇಖೆಯನ್ನು ಸೇರಿಸಿದಲ್ಲಿ ಪುನಃ ಹದಿನಾಲ್ಕು ಅರಗಳುಳ್ಳ ಚಕ್ರವು ಆಗುವುದು. || ೨೦ ||

ಅದರ ಸುತ್ತಲೂ ಅಷ್ಟದಲ ಪದ್ಮದ ಆಕಾರವುಳ್ಳ ಚಕ್ರವೂ ಅದಕ್ಕೆ ಹೊರಭಾಗದಲ್ಲಿ ಸುತ್ತಲೂ ಹದಿನಾರು ದಳಗಳ ಪದ್ಮಾಕಾರದ ಚಕ್ರವೂ ಅದರ ಸುತ್ತಲೂ ಚತುರ್ದ್ವಾರಗಳಿಂದ ಕೂಡಿದ ಪಾರ್ಥಿವ ಅಥವಾ ಧರಣೀಸದನವೆಂಬ ಚಕ್ರವೂ ಬರೆಯಲ್ಪಡಬೇಕು. ಈ ವಿಧವಾದ ವಿಶಿಷ್ಟ ಆಕಾರವುಳ್ಳ ಚಕ್ರಕ್ಕೆ ಶ್ರೀಚಕ್ರವೆಂದು ಹೆಸರು. || ೨೧ ||

ಎರಡು ರೀತಿಗಳಲ್ಲಿ ಸೃಷ್ಟಿಯೋಗದಿಂದ ಚಕ್ರನಿರ್ಮಾಣಕ್ರಮವನ್ನು ಇಲ್ಲಿ ವಿವರಿಸಿದೆ. || ೨೨ ||

ಪ್ರತಿಲೋಮ ಕ್ರಮದಿಂದ ಶ್ರೀ ಚಕ್ರವನ್ನು ವಿವರಿಸುವುದಾದರೆ ಮೊದಲನೆಯ ಚಕ್ರವು ತ್ರೈಲೋಕ್ಯಮೋಹನವೆಂಬ ಹೆಸರುಳ್ಳದ್ದೂ ಮುಂದೆ ಹೇಳುವ ಅನೇಕ ವಿಶೇಷಣಗಳಿಂದ ಕೂಡಿರುವುದೂ ಆಗಿದೆ. ಅಣಿಮಾದ್ಯಷ್ಟಕವೂ ಬ್ರಾಹ್ಮ್ಯಾದಿ ಮಾತೃವರ್ಗದ ಅಷ್ಟಕವೂ ಸರ್ವಸಂಕ್ಷೋಭಿಣ್ಯಾದಿ ದಶಕವೂ ಪ್ರಕಟವಾಗಿ ತ್ರಿಪುರಾ ಶಕ್ತಿಯಿಂದ ನಿಯಮ್ಯವಾದದ್ದೂ ವಿಶೇಷವಾಗಿ ಸರ್ವಸಂಕ್ಷೋಭಿಣ್ಯಾದಿ ಮುದ್ರೆಗಳಿಂದ ಕೂಡಿದುದೂ ಆಗಿದೆ. ಇಲ್ಲಿ ಅಣಿಮಾದ್ಯಷ್ಟಕ ಮುಂತಾದ ವಿಶೇಷಣಗಳಲ್ಲಿ ವಿಶೇಷವಾಗಿ ತಿಳಿಯಬೇಕಾದ ಆಯಾಯ ಹೆಸರುಗಳೆಲ್ಲವೂ ಮುಂದೆ ಬರುವ ಅಥರ್ವಣ ದ್ವಿತೀಯೋಪನಿಷತ್ತಿನಲ್ಲಿ ವಿಶದಪಡಿಸಲ್ಪಟ್ಟಿವೆ. || ೨೩ ||

ದ್ವಿತೀಯಂ ಸರ್ವಾಶಾಪರಿಪೂರಕಂ ಚಕ್ರಂ ಭವತಿ ಸಕಾಮಾದ್ಯಾ ಕರ್ಷಿಣೀ ಷೋಡಶಕಂ ಭವತಿ ಸಗುಪ್ತಂ ಭವತಿ ತ್ರಿಪುರೇಶ್ವರ್ಯಾಽಧಿಷ್ಠಿತಂ ಭವತಿ ಸರ್ವ ವಿದ್ರಾವಿಣೀ ಮುದ್ರಯಾ ಜುಷ್ಟಂ ಭವತಿ ॥ ೨೪ ॥

ತೃತೀಯಂ ಸರ್ವಸಂಕ್ಷೋಭಣಂ ಚಕ್ರಂ ಭವತಿ ಸಾನಂಗಕುಸುಮಾದ್ಯ ಷ್ಟಕಂ ಭವತಿ ಸಗುಪ್ತತರಂ ಭವತಿ ತ್ರಿಪುರಸುಂದರ್ಯಾಽಧಿಷ್ಠಿತಂ ಭವತಿ ಸರ್ವಾಕರ್ಷಿಣೀಮುದ್ರಯಾ ಜುಷ್ಟಂ ಭವತಿ ॥ ೨೫ ॥

ತುರೀಯಂ ಸರ್ವಸೌಭಾಗ್ಯದಾಯಕಂ ಚಕ್ರಂ ಭವತಿ ಸಸರ್ವಸಂಕ್ಷೋ ಭಿಣ್ಯಾದಿ ದ್ವಿಸಪ್ತಕಂ ಭವತಿ ಸಸಂಪ್ರದಾಯಂ ಭವತಿ ತ್ರಿಪುರವಾಸಿನ್ಯಾಽ ಧಿಷ್ಠಿತಂ ಭವತಿ ಸಸರ್ವವಶಂಕರೀಮುದ್ರಯಾ ಜುಷ್ಟಂ ಭವತಿ ॥ ೨೬ ॥

ಪಂಚಮಂ ತುರೀಯಾಂತಂ ಸರ್ವಾರ್ಥಸಾಧಕಂ ಚಕ್ರಂ ಭವತಿ ಸಸರ್ವಸಿದ್ಧಿಪ್ರದಾದಿದಶಕಂ ಭವತಿ ಸಕಲಕೌಲಂ ಭವತಿ ತ್ರಿಪುರಾಮಹಾ ಲಕ್ಷ್ಮ್ಯಾಽಧಿಷ್ಠಿತಂ ಭವತಿ ಮಹೋನ್ಮಾದಿನೀ ಮುದ್ರಯಾ ಜುಷ್ಟಂ ಭವತಿ ॥ ೨೭ ॥

ಷಷ್ಠಂ ಸರ್ವರಕ್ಷಾಕರಂ ಚಕ್ರಂ ಭವತಿ ಸಸರ್ವಜ್ಞಾತ್ವಾದಿದಶಕಂ ಭವತಿ ಸನಿಗರ್ಭಂ ಭವತಿ ತ್ರಿಪುರಮಾಲಿನ್ಯಾಽಧಿಷ್ಠಿತಂ ಭವತಿ ಮಹಾಂಕುಶ ಮುದ್ರಯಾ ಜುಷ್ಟಂ ಭವತಿ ॥ ೨೮ ॥

ಸಪ್ತಮಂ ಸರ್ವರೋಗಹರಂ ಚಕ್ರಂ ಭವತಿ ಸವಶಿನ್ಯಾದ್ಯಷ್ಟಕಂ ಭವತಿ ಸರಹಸ್ಯಂ ಭವತಿ ತ್ರಿಪುರಸಿದ್ಧಯ್ಯಾಽಧಿಷ್ಠಿತಂ ಭವತಿ ಖೇಚರೀ ಮುದ್ರಯಾ ಜುಷ್ಟಂ ಭವತಿ ॥ ೨೯ ॥

ಅಷ್ಟಮಂ ಸರ್ವಸಿದ್ಧಿಪ್ರದಂ ಚಕ್ರಂ ಭವತಿ ಸಾಯುಧಚತುಷ್ಟಯಂ ಭವತಿ ಸಪರಾಪರರಹಸ್ಯಂ ಭವತಿ ತ್ರಿಪುರಾಂಬಯ್ಯಾಽಧಿಷ್ಠಿತಂ ಭವತಿ ಬೀಜ ಮುದ್ರಯಾ ಜುಷ್ಟಂ ಭವತಿ ॥ ೩೦ ॥

ನವಮಂ ಚಕ್ರನಾಯಕಂ ಸರ್ವಾನಂದಮಯಂ ಚಕ್ರಂ ಭವತಿ ಸಕಾ ಮೇಶ್ವರ್ಯಾದಿತ್ರಿಕಂ ಭವತಿ ಸಾತಿರಹಸ್ಯಂ ಭವತಿ ಮಹಾತ್ರಿಪುರಸುಂದ ರ್ಯಾಧಿಷ್ಠಿತಂ ಭವತಿ ಯೋನಿಮುದ್ರಯಾ ಜುಷ್ಟಂ ಭವತಿ ॥ ೩೧ ॥

ಎರಡನೆಯ ಚಕ್ರವು ಸರ್ವಾಶಾಪರಿಪೂರಕವೆಂದು ಪ್ರಸಿದ್ಧವಾದುದಾಗಿದೆ. ಅದರಲ್ಲಿ ಕಾಮಾಕರ್ಷಿಣ್ಯಾದಿ ಹದಿನಾರು ಶಕ್ತಿಗಳೂ ಗುಪ್ತತ್ವ ಗುಣವೂ ಸರ್ವವಿದ್ರಾವಿಣೀ ಮುದ್ರೆಯೂ ಅಂತರ್ಗತವಾಗಿರುವುದಲ್ಲದೇ ತ್ರಿಪುರೇಶ್ವರೀ ದೇವಿಯಿಂದ ಆವಾಸ ಮಾಡಲ್ಪಟ್ಟದ್ದಾಗಿದೆ. || ೨೪ ||

ಸರ್ವಸಂಕ್ಷೋಭಣವೆಂಬುದು ಮೂರನೆಯ ಚಕ್ರವು. ಇದರಲ್ಲಿ ಎಂಟು ಅನಂಗಕುಸುಮಾದಿಗಳೂ, ಗುಪ್ತತರತ್ವ ಗುಣವೂ, ಸರ್ವಾಕರ್ಷಿಣೀ ಮುದ್ರೆಯೂ ಇವೆ. ಮತ್ತು ತ್ರಿಪುರಸುಂದರೀ ದೇವಿಯಿಂದ ವಾಸಿಸಲ್ಪಟ್ಟದ್ದಾಗಿದೆ. || ೨೫ ||

ನಾಲ್ಕನೆಯ ಚಕ್ರವು ಸರ್ವಸೌಭಾಗ್ಯದಾಯಕವೆಂಬುದಾಗಿದೆ. ಇದರಲ್ಲಿ ಹದಿನಾಲ್ಕು ಸರ್ವಸಂಕ್ಷೋಭಿಣ್ಯಾದಿಗಳೂ, ಸಂಪ್ರದಾಯಗುಣಗಳೂ, ಸರ್ವವಶಂಕರೀ ಮುದ್ರೆಯೂ ಇವುಗಳ ಜೊತೆಯಲ್ಲಿ ತ್ರಿಪುರವಾಸಿನೀ ದೇವಿಯೂ ವಾಸಮಾಡಿರುವಳು. || ೨೬ ||

ನಾಲ್ಕನೆಯ ಚಕ್ರಕ್ಕೆ ಆವರಣವಾದ ಐದನೆಯ ಚಕ್ರವು ಸರ್ವಾರ್ಥಸಾಧಕವೆಂಬುದಾಗಿದೆ. ಅದರಲ್ಲಿ ಸರ್ವಸಿದ್ಧಿಪ್ರದಾದಿ ಹತ್ತು ಶಕ್ತಿಗಳು, ಸಕಲಾಧಾರತ್ವಗುಣ, ಮಹೋನ್ಮಾದಿನೀ ಮುದ್ರೆ ಇವುಗಳೊಡನೆ ತ್ರಿಪುರಾ ಮಹಾಲಕ್ಷ್ಮಿಯು ವಾಸಿಸುವಳು. || ೨೭ ||

ಸರ್ವಜ್ಞತ್ವಾದಿ ದಶಶಕ್ತಿಗಳೂ ಸನಿಗರ್ಭತ್ವ ಧರ್ಮವೂ ಮಹಾಂಕುಶ ಮುದ್ರೆಯೂ ಇವುಗಳ ಜೊತೆಗೆ ತ್ರಿಪುರಮಾಲಿನೀ ದೇವಿಯಿಂದ ವಾಸಿಸಲ್ಪಟ್ಟ ಆರನೆಯ ಆವರಣ ಚಕ್ರವನ್ನು ಸರ್ವರಕ್ಷಾಕರ ಚಕ್ರವೆಂದರಿಯಬೇಕು. || ೨೮ ||

ಎಂಟು ವಶಿನ್ಯಾದಿ ಶಕ್ತಿಗಳೂ, ರಹಸ್ಯಗುಣಗಳೂ, ಖೇಚರೀ ಎಂಬ ಮುದ್ರೆಯೂ ಇರುವ ಏಳನೆಯ ಆವರಣ ಚಕ್ರವು ಸರ್ವರೋಗಹರವೆಂಬುದಾಗಿದೆ. ಇದರಲ್ಲಿ ವಾಸಮಾಡುವ ದೇವತೆಯು ತ್ರಿಪುರಸಿದ್ಧಾದೇವಿಯು. || ೨೯ ||

ಎಂಟನೆಯ ಚಕ್ರವು ಸರ್ವಸಿದ್ಧಿ ಪ್ರದವೆಂಬುದು. ಇದರಲ್ಲಿ ವಾಸಮಾಡುವ ಅಭಿಮಾನಿ ದೇವತೆಯು ತ್ರಿಪುರಾಂಬಾದೇವಿಯು, ಮತ್ತು ನಾಲ್ಕು ಆಯುಧ ಶಕ್ತಿಗಳೂ, ಪರಾಪರ ರಹಸ್ಯಗಳೂ ಬೀಜ ಮುದ್ರೆಯೂ ಇದರಲ್ಲಿ ಅಂತರ್ಗತವಾಗಿವೆ. || ೩೦ ||

ಈ ಮೇಲೆ ಹೇಳಿದ ಸಮಸ್ತ ಚಕ್ರಗಳಿಗೂ ರಾಜನಾದ ಒಂಭತ್ತನೆಯ ಚಕ್ರವನ್ನು ಸರ್ವಾನಂದಮಯಚಕ್ರವೆಂದು ಕರೆಯುತ್ತಾರೆ. ಕಾಮೇಶ್ವರೀ ಮುಂತಾದ ಮೂರು ಶಕ್ತಿದೇವತೆಗಳೂ ಅತಿ ರಹಸ್ಯವೆಂಬ ಗುಣವೂ ಯೋನಿಮುದ್ರೆಯೂ ಇದರಲ್ಲಿ ಸೇರಿವೆ. ಮತ್ತು ಈ ಚಕ್ರಕ್ಕೆ ಅಭಿಮಾನಿಯಾಗಿ ಮಹಾ ತ್ರಿಪುರಸುಂದರೀ ದೇವಿಯು ಇದರಲ್ಲಿ ವಾಸಮಾಡುವಳು. || ೩೧ ||

ಸಂಕ್ರಾಮಂತಿ ವೈ ಸರ್ವಾಣಿ ಛಂದಾಂಸಿ ಚಕ್ರಾರಾಣಿ ತದೇವ ಚಕ್ರಂ ಶ್ರೀಚಕ್ರಂ ॥ ೩೨ ॥

ತಸ್ಯ ನಾಭ್ಯಾಮಗ್ನಿಮಂಡಲೇ ಸೂರ್ಯಾಚಂದ್ರಮಸೌ ತತ್ರೋಂಕಾರ ಪೀಠಂ ಪೂಜಯಿತ್ವಾ ತತ್ರಾಕ್ಷರಂ ಬಿಂದುರೂಪಂ ತದಂತರ್ಗತವ್ಯೋಮ ರೂಪಿಣೀಂ ವಿದ್ಯಾಂ ಪರಮಾಂಸ್ಮೃತ್ವಾ ಮಹಾ ತ್ರಿಪುರಸುಂದರೀ ಮಾವಾಹ್ಯ

ಕ್ಷೀರೇಣ ಸ್ನಾಪಿತೇ ದೇವಿ ಚಂದನೇನ ವಿಲೇಪಿತೇ ।
ಬಿಲ್ವಪತ್ರಾರ್ಚಿತೇ ದೇವಿ ದುರ್ಗೇಽಹಂ ಶರಣಂ ಗತಃ ॥

ಇತ್ಯೇಕಯರ್ಚಾ ಪ್ರಾರ್ಥ್ಯ ಮಾಯಾಲಕ್ಷ್ಮೀಮಂತ್ರೇಣ ಪೂಜ ಯೇದಿತಿ ಭಗವಾನಬ್ರವೀತ್ ॥ ೩೩ ॥

ಏತೈರ್ಮಂತ್ರೈರ್ಭಗವತೀಂ ಯಜೇತ್ । ತತೋ ದೇವೀ ಪ್ರೀತಾ ಭವತಿ ಸ್ವಾತ್ಮಾನಂ ದರ್ಶಯತಿ । ತಸ್ಮಾದ್ಯ ಏತೈರ್ಮಂತ್ರೈರ್ಯಜತಿ ಸ ಬ್ರಹ್ಮ ಪಶ್ಯತಿ ಸ ಸರ್ವಂಪಶ್ಯತಿ ಸೋಽಮೃತತ್ವಂ ಚ ಗಚ್ಛತಿ ॥ ಯ ಏವಂ ವೇದೇತಿ ಮಹೋಪನಿಷತ್ ॥ ೩೪ ॥

ಇತಿ ದ್ವಿತೀಯೋಪನಿಷತ್



ರಾಜಚಕ್ರವಾದ ಈ ಶ್ರೀಚಕ್ರದಲ್ಲಿ ಸರ್ವಛಂದಸ್ಸುಗಳು (ಸಕಲ ವೇದಗಳು) ಅರಗಳ ಸ್ವರೂಪವಾಗಿ ಸಂಕ್ರಮಿಸಿರುತ್ತವೆ. ಆದುದರಿಂದ ಶ್ರೀಚಕ್ರವು ಅಪಾರ ಮಹಿಮೆಯುಳ್ಳದ್ದಾಗಿದೆ. ॥ ೩೨ ॥

ಇಂತಹ ಶ್ರೀಚಕ್ರದ ನಾಭಿ ಮಂಡಲದಲ್ಲಿ ಸೂರ್ಯ ಚಂದ್ರರನ್ನೂ ಅಗ್ನಿಯನ್ನೂ ಓಂಕಾರವೆಂಬ ಪೀಠಾರೂಢವಾಗಿರುವಂತೆ ಭಾವನಾಪೂರ್ವಕವಾಗಿ ಪೂಜಿಸಿ ತನ್ಮಧ್ಯದಲ್ಲಿ ಬಿಂದುತತ್ವವೆಂಬ ಅಕ್ಷರಸ್ವರೂಪವಾದ ಶಿವತತ್ತ್ವವನ್ನೂ ತದಂತರ್ಗತವಾಗಿ ಚೈತನ್ಯರೂಪಿಣಿಯಾದ ಪರಮವಿದ್ಯಾಪ್ರತಿಪಾದ್ಯಳಾದ ಶಕ್ತಿಯನ್ನೂ ಸ್ಮರಣ ಮಾಡಿ ಮಹಾ ತ್ರಿಪುರಸುಂದರೀ ದೇವಿಯನ್ನು ಚಕ್ರದಲ್ಲಿ ಆವಾಹಿಸಿ "ಕ್ಷೀರೇಣ" ಎಂಬ ಒಂದು ಋಙ್ಮಂತ್ರದಿಂದ ದೇವಿಯನ್ನು ಪ್ರಾರ್ಥನೆಮಾಡಿ ತುರುವಾಯ ಮಾಯಾಲಕ್ಷ್ಮೀ ಮಂತ್ರವನ್ನು ಹೇಳುತ್ತಾ ಪೂಜಿಸಬೇಕು. ಶುದ್ಧವಾದ ಗೋಕ್ಷೀರದಿಂದ ಅಭಿಷೇಕವನ್ನೂ ದಿವ್ಯವಾದ ರಕ್ತಚಂದನ ವಿಲೇಪನವನ್ನೂ ಬಿಲ್ವಪತ್ರಗಳಿಂದ ವಿಶೇಷವಾದ ಅರ್ಚನೆಯನ್ನೂ ಪ್ರೀತಿಸುವ ದುರ್ಗಾದೇವಿಯೇ ನಾನು ಭಕ್ತಿಯಿಂದ ನಿನ್ನನ್ನು ಸೇವಿಸಿ ನಿನ್ನನ್ನೇ ಶರಣಹೊಂದಿರುವೆನು ಎಂಬದಾಗಿ ಆ ಋಙ್ಮಂತ್ರಕ್ಕೆ ಅರ್ಥವು. ಈ ರೀತಿಯಾಗಿ ಶ್ರೀಚಕ್ರದ ಸ್ವರೂಪ, ಧ್ಯಾನ, ಪ್ರಾರ್ಥನಾ, ಪೂಜಾದಿಗಳನ್ನು ದೇವತೆಗಳಿಗೆ ಸದಾಶಿವನು ಉಪದೇಶಿಸಿದನು. ॥ ೩೩ ॥

ಈ ಮಂತ್ರಗಳಿಂದ ಭಗವತಿಯನ್ನು ಪೂಜೆಮಾಡಿದಲ್ಲಿ ದೇವಿಯು ಸುಪ್ರೀತಳಾಗಿ ತಾನು ಪ್ರತ್ಯಕ್ಷಳಾಗುವಳು. ಆದುದರಿಂದ ಈ ವಿಧಾನವನ್ನು ಅನುಸರಿಸಿ ಮಂತ್ರಪೂರ್ವಕವಾಗಿ ದೇವಿಯ ಉಪಾಸನೆಯನ್ನು ಮಾಡಿದವನು ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಸರ್ವಾತ್ಮಭಾವವನ್ನು ಹೊಂದಿದವನಾಗಿ ಅಮರಣ ಸ್ವಭಾವದ ಮೋಕ್ಷವನ್ನು ಹೊಂದುತ್ತಾನೆ. ಆದ್ದರಿಂದ ಇದರ ಜ್ಞಾನವು ಉತ್ತಮವಾದ ಫಲದಾಯಕವಾದುದು ಎಂಬ ಫಲಶ್ರುತಿಯನ್ನು ಮಹೋಪನಿಷತ್ತಿನ ವಾಕ್ಯವೇ ಹೇಳಿದೆ. ॥ ೩೪ ॥

ದ್ವಿತೀಯೋಪನಿಷತ್ತಿನ ಅನುವಾದವು ಮುಗಿದುದು.



|| ಶ್ರೀರಸ್ತು ||

## || ತೃತೀಯೋಪನಿಷತ್ ||

---

ದೇವಾ ಹ ವೈ ಮುದ್ರಾಃ ಸೃಜೇಯಮಿತಿ ಭಗವಂತಮಬ್ರುವನ್ । ತಾನ್ ಹೋವಾಚ ಭಗವಾನ್ ಅವನಿಕೃತ ಜಾನುಮಂಡಲಂ ವಿಸ್ತೀರ್ಯ ಪದ್ಮಾಸನಂ ಕೃತ್ವಾ ಮುದ್ರಾಃ ಸೃಜೇತೇತಿ || ೧ ||

ಸ ಸರ್ವಾನಾಕರ್ಷಯತಿ ಯೋ ಯೋನಿಮುದ್ರಾಮಧೀತೇ ಸಸರ್ವಂ ವೇತ್ತಿ ಸಸರ್ವಫಲಮಶ್ನುತೇ ಸ ಸರ್ವಾನ್ ಭಂಜಯತಿ ಸ ವಿದ್ವೇಷಿಣಂ ಸ್ತಂಭಯತಿ । ಮಧ್ಯಮೇ ಅನಾಮಿಕೋಪರಿ ವಿನ್ಯಸ್ಯ ಕನಿಷ್ಠಿಕಾಂಗುಷ್ಠತೋಽಧೀತೇ ಮುಕ್ತಯೋಸ್ತರ್ಜನ್ಯೋರ್ದಂಡವದಧಸ್ತಾದೇವಂವಿಧಾ ಪ್ರಥಮಾ ಸಂಪದ್ಯತೇ || ೨ ||

ಸೈವ ಮಿಲಿತಮಧ್ಯಮಾ ದ್ವಿತೀಯಾ || ೩ ||

ತೃತೀಯಾಂಕುಶಾಕೃತಿರಿತಿ || ೪ ||

ಪ್ರಾತಿಲೋಮ್ಯೇನ ಪಾಣೀ ಸಂಘರ್ಷಯಿತ್ವಾಂಽಗುಷ್ಠೌ ಸಾಗ್ರಿಮೌ ಸಮಾಧಾಯ ತುರೀಯಾ || ೫ ||

ಪರಸ್ಪರಂ ಕನೀಯಸೇದಂ ಮಧ್ಯಮಾಬದ್ಧೇ ಅನಾಮಿಕೇ ದಂಡಿನ್ಯೌ ತರ್ಜನ್ಯಾವಾಲಿಂಗ್ಯಾವಷ್ಟಭ್ಯ ಮಧ್ಯಮಾನಖಮಿಲಿತಾಂಗುಷ್ಠೌ ಪಂಚಮೀ || ೬ ||

|| ಶ್ರೀ ||

# ತೃತೀಯೋಪನಿಷತ್ತಿನ ಕನ್ನಡ ಅನುವಾದವು.

---

ಅನುಲೋಮ ಪ್ರತಿಲೋಮಕ್ರಮದಿಂದ ಸೃಷ್ಟಿಚಕ್ರ ಉಪಸಂಹಾರ ಚಕ್ರಗಳನ್ನು ಅರಿತ ದೇವತೆಗಳು ಯೋನ್ಯಾದಿ ಮುದ್ರೆಗಳನ್ನು ತಿಳಿಯಬೇಕೆಂಬ ಕುತೂಹಲದಿಂದ ಭಗವಂತನನ್ನು ಪ್ರಶ್ನಿಸಲು ಆ ಭಗವಂತನು ಮುದ್ರಾವಿಧಿಯನ್ನು ವಿವರಿಸಲು ಉಪಕ್ರಮಿಸಿ ಮಂಡಿಗಳನ್ನು ನೆಲದಮೇಲೆ ಊರಿ ಪದ್ಮಾಸನದಲ್ಲಿ ಕುಳಿತುಕೊಂಡು ಮೇಲೆ ಹೇಳುವ ಮುದ್ರೆಗಳನ್ನು ರಚಿಸಬೇಕೆಂದು ಉತ್ತರವಿತ್ತನು. || ೧ ||

ನವವಿಧ ಮುದ್ರೆಗಳಲ್ಲಿ ಇಲ್ಲಿ ಮೊದಲನೆಯದಾಗಿ ಹೇಳುವ ಯೋನಿಮುದ್ರೆಯನ್ನು ಅರಿತು ಯಥಾವಿಧಿಯಾಗಿ ಮುದ್ರಾಬಂಧನವನ್ನು ಆಚರಿಸಿದವನು ತನ್ನ ಸಕಲ ವೈರಿಗಳನ್ನೂ ನಾಶಮಾಡಿ ಸರ್ವರನ್ನೂ ಸ್ತಂಭನಾದಿ ಪ್ರಯೋಗದಿಂದ ವಶಪಡಿಸಿ ಸರ್ವಕಾಮಾವಾಪ್ತಿಫಲವನ್ನು ಹೊಂದುವನಲ್ಲದೇ ಸರ್ವಜ್ಞನೂ ಆಗುವನು. ಈ ಫಲಶ್ರುತಿಯಿಂದ ಮುಂದೆ ವಿವರಿಸುವ ಪ್ರತಿಯೊಂದು ಮುದ್ರೆಗಳಿಗೂ ಮಹತ್ತರವಾದ ಫಲಪ್ರದಾನಶಕ್ತಿಯಿದೆಯೆಂಬುದನ್ನು ಅರಿಯಬೇಕು. ಅನಾಮಿಕಾಂಗುಲಿಗಳ ಮೇಲೆ ಮಧ್ಯಮಾಂಗುಲಿಗಳನ್ನು ಇಟ್ಟು ತರ್ಜನೀ ಬೆರಳುಗಳನ್ನು ದಂಡಾಕಾರವಾಗಿಯೇ ಕೆಳಗಡೆಯಲ್ಲಿ ವಿಸ್ತರಿಸಿ ಕನಿಷ್ಠಿಕಾ-ಮತ್ತು ಹೆಬ್ಬೆರಳುಗಳ ಯೋಜನೆಯಿಂದ ಯೋನಿಮುದ್ರಾರಚನೆಯಾಗುವುದು. || ೨ ||

ಈ ಯೋನಿಮುದ್ರೆಯಲ್ಲಿಯೇ ಮಧ್ಯಮಾಂಗುಲಿಗಳ ಮೇಲನವಾದರೆ ದ್ವಿತೀಯ ಮುದ್ರೆಯ ಸ್ವರೂಪವಾಗುವುದು, ದ್ವಿತೀಯ ಮುದ್ರೆಗೆ ಬೀಜಮುದ್ರೆಯೆಂದು ಹೆಸರು. || ೩ ||

ಅಂಕುಶದ ಆಕಾರವನ್ನು ಹೊಂದಿದ ಮುದ್ರೆಯು ಮೂರನೆಯದಾದ ಖೇಚರೀ ಮುದ್ರೆಯೆನಿಸುವುದು. || ೪ ||

ಹಿಂಗೈಗಳನ್ನು ಪರಸ್ಪರ ಸೇರಿಸಿ ಹೆಬ್ಬೆರಳುಗಳನ್ನು ಅಗ್ರಭಾಗದಲ್ಲಿ ಸೇರಿಸಲಾಗಿ ನಾಲ್ಕನೆಯ ಮಹಾಂಕುಶ ಮುದ್ರೆಯಾಗುವುದು. || ೫ ||

ಕಿರಿಬೆರಳುಗಳನ್ನು ಪರಸ್ಪರ ಸಂಧಿಸಿ ಅನಾಮಿಕಾಂಗುಲಿಗಳನ್ನು ಮಧ್ಯಮಾಂಗುಲಿಗಳಿಂದ ಯೋಜಿಸಿ ದಂಡಾಕಾರವಾದ ತರ್ಜನೀ ಬೆರಳುಗಳನ್ನು ಬಗ್ಗಿಸಿ ಅಂಗುಷ್ಠಗಳಿಂದ ಮಧ್ಯಮಾಂಗುಲಿಗಳ ನಖವನ್ನು ಸ್ಪರ್ಶಿಸಿದರೆ ಮಹೋನ್ಮಾದಿನೀ ಮುದ್ರೆಯಾಗುವುದು. ಇದು ಐದನೆಯ ಮುದ್ರೆಯು. || ೬ ||

ಸೈವಾಗ್ರೇಽಂಕುಶಾಕೃತಿಃ ಷಷ್ಠೀ ॥ ೭ ॥

ದಕ್ಷಿಣಶಯೇ ವಾಮಬಾಹುಂ ಕೃತ್ವಾಽನ್ಯೋನ್ಯಾನಾಮಿಕೇ ಕನೀಯಸೀ ಮಧ್ಯಗತೇ ಮಧ್ಯಮೇ ತರ್ಜನ್ಯಾಕ್ರಾಂತೇ ಸರಲಾಸ್ವಂಗುಷ್ಠೌ ಖೇಚರೀ ಸಪ್ತಮೀ ॥ ೮ ॥

ಸರ್ವೋರ್ಧ್ವೇ ಸರ್ವಸಂಹೃತಿ ಸ್ವಮಧ್ಯಮಾನಾಮಿಕಾಂತರೇ ಕನೀಯಸೇ ಪಾರ್ಶ್ವಯೋಃ ತರ್ಜನ್ಯಾವಂಕುಶಾಢ್ಯೇ ಯುಕ್ತಾ ಸಾಂಗುಷ್ಠಯೋಗತೋಽನ್ಯೋನ್ಯಂ ಸಮಮಂಜಲಿಂ ಕೃತ್ವಾಽಷ್ಟಮೀ ॥ ೯ ॥

ಪರಸ್ಪರಮಧ್ಯಮಾಪೃಷ್ಠವರ್ತಿನ್ಯಾವನಾಮಿಕೇ ತರ್ಜನ್ಯಾಕ್ರಾಂತೇ ಸಮೇ ಮಧ್ಯಮೇ ಆದಾಯಾಂಗುಷ್ಠೌ ಮಧ್ಯವರ್ತಿನೌ ನವಮೀ ಪ್ರತಿಪದ್ಯತ ಇತಿ ॥ ೧೦ ॥

ಸೈವೇಯಂ ಕನೀಯಸೇ ಸಮೇ ಅಂತರಿತೇಽಂಗುಷ್ಠೌ ಸಮಾವಂತರಿತೌ ಕೃತ್ವಾ ತ್ರಿಖಂಡಾಪದ್ಯತ ಇತಿ । ಪಂಚ ಬಾಣಾಃ ಪಂಚಾದ್ಯಾ ಮುದ್ರಾಃ ಸ್ಪಷ್ಟಾಃ ॥ ೧೧ ॥

ಕ್ರೋಮಂಕುಶಾ ಹಸಖಫ್ರೇಂ ಖೇಚರೀ ಹಸ್ರೌಂಬೀಜಾಷ್ಟಮೀ ವಾಗ್ಭವಾದ್ಯಾ ನವಮೀ ದಶಮೀ ಚ ಸಂಪದ್ಯತ ಇತಿ ಯ ಏವಂ ವೇದ ॥ ೧೨ ॥

ಇದೇ ಮುದ್ರೆಯೇ ಕೊನೆಯಲ್ಲಿ ಅಂಕುಶಾಕಾರವನ್ನು ಹೊಂದಿ ಸರ್ವವಶಂಕರೀ ಎಂಬ ಆರನೆಯ ಮುದ್ರೆಯಾಗುವುದು. ‖ ೭ ‖

ಹಿಂದೆ ಹೇಳಿದ ಖೇಚರೀ ಮುದ್ರೆಯಲ್ಲಿಯೇ ಬಲಗೈಯಲ್ಲಿ ಎಡಗೈಯ್ಯನ್ನಿಟ್ಟು ಅನಾಮಿಕಾಂಗುಲಿಗಳನ್ನು ಕಿರಿಬೆರಳುಗಳ ಮಧ್ಯದಲ್ಲಿಟ್ಟು ಮಧ್ಯಮಾಂಗುಲಿಗಳನ್ನು ತರ್ಜನಿಗಳಿಂದ ಕಟ್ಟಿದಂತೆ ಮಾಡಿ ಅಂಗುಷ್ಠಗಳನ್ನು ಸರಲವಾಗಿ ಚಾಚಿಕೊಳ್ಳುವ ದೆಂಬ ವಿಶೇಷವನ್ನು ರಚಿಸಿದಲ್ಲಿ ಏಳನೆಯ ಸರ್ವಾಕರ್ಷಿಣೀ ಎಂಬ ಮುದ್ರೆಯಾಗು ವುದು. ‖ ೮ ‖

ಎಲ್ಲ ಬೆರಳುಗಳನ್ನೂ ಅಗ್ರಭಾಗದಲ್ಲಿ ಸೇರಿಸಿ ಮಧ್ಯಮಾ ಅನಾಮಿಕಾ ಅಂಗುಲಿ ಗಳ ನಡುವೆ ಕಖಿಷ್ಠಿಕಾಂಗುಲಿಗಳನ್ನಿಟ್ಟು ಅಂಕುಶಾಕಾರದ ತರ್ಜನೀ ಬೆರಳುಗಳನ್ನು ಪಕ್ಕಗಳಲ್ಲಿಟ್ಟು ಅಂಗುಷ್ಠಗಳನ್ನು ಒತ್ತಾಗಿ ಸೇರಿಸಿ ಅಂಜಲಿಯನ್ನು ಮಾಡಿದರೆ ಎಂಟನೆಯ ಸರ್ವವಿದ್ರಾವಿಣೀ ಎಂಬ ಮುದ್ರೆಯಾಗುವುದು. ‖ ೯ ‖

ಮಧ್ಯಮಾಂಗುಲಿಗಳ ಹಿಂಭಾಗದಲ್ಲಿ ಅನಾಮಿಕಾ ಅಂಗುಲಿಗಳನ್ನಿಟ್ಟು ಅಲ್ಲಿ ತರ್ಜನೀ ಅಂಗುಲಿಗಳನ್ನು ಸೇರಿಸಿ ಮಧ್ಯಮಾಂಗುಲಿಗಳನ್ನು ಒಂದೇಮಟ್ಟಕ್ಕೆ ಚಾಚಿ ಮಧ್ಯದಲ್ಲಿ ಅಂಗುಷ್ಠಗಳನ್ನು ಯೋಜನೆಮಾಡಿದರೆ ಒಂಭತ್ತನೆಯ ಮುದ್ರೆಯಾಗು ವುದು. ಇದಕ್ಕೆ ಸರ್ವಸಂಕ್ಷೋಭಿಣೀ ಮುದ್ರೆಯೆಂದು ಹೆಸರು. ‖ ೧೦ ‖

ಕನಿಷ್ಠಿಕಾ ಅಂಗುಲಿಗಳನ್ನು ಸಮವಾಗಿ ಮಧ್ಯದಲ್ಲಿ ಸೇರಿಸಿ ಅಂಗುಷ್ಠಗಳನ್ನೂ ಹಾಗೆಯೇ ಸೇರಿಸಿದರೆ ಖಂಡತ್ರಯದಂತೆ ಕಾಣುವ ಆಕಾರವನ್ನು ವಿಶೇಷವಾಗಿ ರಚಿಸಿದರೆ ಹಿಂದಿನ ಮುದ್ರೆಯೇ ಪಂಚಬಾಣ ಮುದ್ರೆಯಾಗುವುದು. ಮುಂದಿನ ವಾಕ್ಯವು ಒಂಭತ್ತು ಬೀಜಾಕ್ಷರಗಳನ್ನು ಉದ್ಧಾರಮಾಡಿ ಸ್ಪಷ್ಟಪಡಿಸುತ್ತದೆ. ‖ ೧೧ ‖

“ ಕ್ರೋಂ ” ಅಂಕುಶ ಬೀಜ, “ ಹ ” ಶಿವಬೀಜ, “ ಸ ” ಶಕ್ತಿಬೀಜ, “ ಖ ” ಮಾರಣಬೀಜ, “ಪ್ರೇಂ” ಮೋಹನಬೀಜ, “ಹಸಖಪ್ರೇಂ” ಖೇಚರೀಬೀಜ, “ ಹ ” ಸೂರ್ಯಬೀಜ, “ ಸೌ ” ಕಾಮಬೀಜ, “ ಕ ” ವಾಗ್ಭವಾದ್ಯಬೀಜ, “ ಹ ” ಕಾಮ ಕೂಟಾದ್ಯಬೀಜ, ಇವು ಮೊದಲಿನಿಂದ ಕ್ರಮವಾಗಿ ಒಂಭತ್ತು ಬೀಜಾಕ್ಷರಗಳೂ ಹತ್ತನೆಯದೊಂದು ಬೀಜಾಕ್ಷರವೂ ಆಗಿರುತ್ತವೆ. ಈ ಬೀಜಾಕ್ಷರಗಳನ್ನು ಅರಿತವನು ಮಂತ್ರಸಿದ್ಧಿಯುಳ್ಳವನಾಗುತ್ತಾನೆ. ‖ ೧೨ ‖

ಅಥಾತಃ ಕಾಮಕಲಾಭೂತಂ ಚಕ್ರಂ ವ್ಯಾಖ್ಯಾಸ್ಯಾಮೋ ಹ್ರೀಂ ಕ್ಲೀಮೈಂಬ್ಲೂಂಸ್ತ್ರೌಮೇತೇ ಪಂಚ ಕಾಮಾಃ ಸರ್ವಚಕ್ರಂ ವ್ಯಾಪ್ಯ ವರ್ತಂತೇ ಮಧ್ಯಮಂ ಕಾಮಂ ಸರ್ವಾವಸಾನೇ ಸಂಪುಟೀಕೃತ್ಯ ಬ್ಲೂಂಕಾರೇ ಸಂಪುಟಂ ವ್ಯಾಪ್ತಂ ಕೃತ್ವಾ ದ್ವಿರೈಂದ್ವಯೇನ ಮಧ್ಯವರ್ತಿನಾ ಸಾಧ್ಯಂ ಬದ್ಧ್ವಾ ಭೂರ್ಜಪತ್ರೇ ಯಜತಿ । ತಚ್ಚಕ್ರಂ ಯೋ ವೇತ್ತಿ ಸ ಸರ್ವಂ ವೇತ್ತಿ ಸ ಸಕಲಾನ್ ಲೋಕಾನಾಕರ್ಷಯತಿ ಸ ಸರ್ವಂ ಸ್ತಂಭಯತಿ । ನೀಲೀಯುಕ್ತಂ ಚಕ್ರಂ ಶತ್ರೂನ್ ಮಾರಯತಿ ಗತಿಂ ಸ್ತಂಭಯತಿ । ಲಾಕ್ಷಾಯುಕ್ತಂ ಕೃತ್ವಾ ಸಕಲಲೋಕಂ ವಶೀಕರೋತಿ । ನವಲಕ್ಷಜಪಂ ಕೃತ್ವಾ ರುದ್ರತ್ವಂ ಪ್ರಾಪ್ನೋತಿ । ಮಾತೃಕಯಾ ವೇಷ್ಟಿತಂ ಕೃತ್ವಾ ವಿಜಯೀ ಭವತಿ । ಭಗಾಂಕಕುಂಡಂ ಕೃತ್ವಾಽಗ್ನಿಮಾಧಾಯ ಹವಿಷಾ ಯೋಷಿತೋ ವಶೀಕರೋತಿ । ಪುರುಷೇ ಹುತ್ವಾ ವರ್ತುಲೇ ವಾ ಹುತ್ವಾ ಶ್ರಿಯಮತುಲಾಂ ಪ್ರಾಪ್ನೋತಿ । ಚತುರಶ್ರೇ ಹುತ್ವಾ ವೃಷ್ಟಿರ್ಭವತಿ । ತ್ರಿಕೋಣೇ ಹುತ್ವಾಶತ್ರೂನ್ ಮಾರಯತಿ ಗತಿಂ ಸ್ತಂಭಯತಿ । ಪುಷ್ಪಾಣಿ ಹುತ್ವಾ ವಿಜಯೀ ಭವತಿ । ಮಹಾರಸೈರ್ಹುತ್ವಾ ಪರಮಾನಂದನಿರ್ಭರೋ ಭವತಿ ॥ ಮಹಾರಸಾಃ ಷಡ್ರಸಾಃ ॥ ೧೩ ॥

ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾ ಮುಪಮಶ್ರವಸ್ತಮಂ। ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಃ ಸೀದ ಸಾದನಮ್ ॥

ಹಿಂದೆ ನಿಷ್ಕಾಮರಾದ ಉತ್ತಮಾಧಿಕಾರಿಗಳಿಗೆ ಸ್ವಸ್ವರೂಪಾವಾಪ್ತಿಗೆ ಉಪಾಯವಾದ ಚಕ್ರವನ್ನು ಯಥಾವಿಧಿಯಾಗಿ ವಿವರಿಸಿ ಸಕಾಮರಾದ ಅಧಿಕಾರಿಗಳ ದೃಷ್ಟಿಯಿಂದಲೂ ಅವರ ಇಷ್ಟಸಿದ್ಧಿಗೆ ಉಪಾಯವಾದ ಕಾಮಕಲಾ ಚಕ್ರವನ್ನು ಯಥಾವಿಧಿಯಾಗಿ ಈ ವಾಕ್ಯಗಳು ವಿವರಿಸುತ್ತವೆ. ಸಕಾಮರಿಗೆ ಶ್ರೇಯಃಪ್ರದವಾದ ಕಾಮಕಲಾ ಚಕ್ರವನ್ನು ವಿವರಿಸುತ್ತೇವೆ. ಹ್ರೀಂ, ಕ್ಲೀಂ, ಐಂ, ಬ್ಲೂಂ, ಸ್ತ್ರೌಂ ಎಂಬ ಕ್ರಮಿಕವಾದ ಐದು ವರ್ಣಗಳು ಪಂಚಕಾಮ ಬೀಜಗಳು, ಇವು ಎಲ್ಲ ಚಕ್ರಗಳನ್ನು ವ್ಯಾಪಿಸಿಕೊಂಡಿವೆ. ಇವುಗಳಲ್ಲಿ ಮಧ್ಯಮ ಕಾಮಬೀಜವಾದ ಐಂ ಎಂಬ ವರ್ಣವನ್ನು ಕಡೆಯ ವರ್ಣವಾದ ಸ್ತ್ರೌಂ ಎಂಬುದರ ಎರಡು ಪಕ್ಕಗಳಲ್ಲಿಟ್ಟು ಸಂಪುಟೀಕರಣಮಾಡಿ ಹಾಗೆಯೇ ಆ ಸಮೂಹವನ್ನು ಪುನಃ ಬ್ಲೂಂಕಾರಗಳೆರಡರಿಂದ ಪಕ್ಕಗಳಲ್ಲಿರಿಸಿ ಸಂಪುಟೀಕರಣಮಾಡಿ "ವಾಂಛಿತಾರ್ಥಸಿದ್ಧಿಂಮೇಕುರು" ಎಂಬುದಾಗಿ ತನ್ನ ಇಷ್ಟವನ್ನು ಕೋರಿ ಭೂರ್ಜ ಪತ್ರದಲ್ಲಿ ಬರೆದು ಪೂಜಿಸಿ ಧರಿಸುವುದು. ಈ ಚಕ್ರವನ್ನು ಯಾರು ತಿಳಿದು ಯಥಾವಿಧಿ ಪೂಜಿಸುವರೋ ಅವರು ಸರ್ವಜ್ಞರೂ ಸರ್ವಲೋಕವನ್ನು ಆಕರ್ಷಿಸುವವರೂ ಸರ್ವವನ್ನು ಸ್ತಂಭನಮಾಡುವ ಶಕ್ತಿ ಸಂಪನ್ನರೂ ಆಗುವರು, ನೀಲವರ್ಣವನ್ನು ಅದಕ್ಕೆ ಲೇಪಿಸಿ ಆರಾಧಿಸಿದರೆ ಸರ್ವ ಶತ್ರುಗಳನ್ನೂ ಗತಿ ಸ್ತಂಭನಮಾಡಿ ಸಂಹಾರ ಮಾಡುವರು. ಅರಗಿನ ವರ್ಣವನ್ನು ಕೊಟ್ಟು ಮಾಡುವ ಅರ್ಚನೆಯು ಸಕಲ ಲೋಕ ವಶೀಕರಣಕ್ಕೆ ಉಪಾಯವಾಗುವುದು. ಈ ಮಂತ್ರವನ್ನು ಒಂಭತ್ತು ಲಕ್ಷಾವೃತ್ತಿ ಜಪ ಮಾಡಿದರೆ ರುದ್ರತ್ವವು ಪ್ರಾಪ್ತವಾಗುವುದು. ವರ್ಣಮಾಲೆಯಿಂದ ವೇಷ್ಟಿತವಾಗಿ ಮಾಡಿ ಅರ್ಚನೆಯನ್ನು ಮಾಡಲು ವಿಜಯ ಸಿದ್ಧಿಯಾಗುವುದು. ಯೋನ್ಯಾಕಾರದ ಅಗ್ನಿಕುಂಡವನ್ನು ನಿರ್ಮಿಸಿ ಅಗ್ನಿಯನ್ನು ಅದರಲ್ಲಿ ಪ್ರತಿಷ್ಠೆಮಾಡಿ ಹವಿಸ್ಸನ್ನು ಹೋಮಮಾಡಿದರೆ ಸಕಲ ಸ್ತ್ರೀವಶ್ಯತೆಯೂ, ಪುರುಷಾಕಾರದ, ಅಥವಾ ವರ್ತುಲಾಕಾರದ ಅಗ್ನಿಕುಂಡದಲ್ಲಿ ಹೋಮಮಾಡಿದರೆ ಸಕಲೈಶ್ವರ್ಯ ಪ್ರಾಪ್ತಿಯೂ ನಾಲ್ಕು ಮೂಲೆಗಳ ಅಗ್ನಿಕುಂಡವಿದ್ದರೆ, ಮಳೆಯೂ ತ್ರಿಕೋಣಾಕಾರದ ಅಗ್ನಿಕುಂಡವಾದರೆ ಶತ್ರುಮಾರಣ ಮತ್ತು ಅವರ ಗತಿ ಸ್ತಂಭನವೂ ಫಲಗಳು ಸಂಭವಿಸುವುವು. ಮತ್ತು ನಾನಾ ವಿಧದ ಹೂವುಗಳನ್ನು ದೇವತೆಗೆ ಅರ್ಪಿಸಿ ಹೋಮ ಮಾಡಿದರೆ ವಿಜಯ ಸಿದ್ಧಿಯೂ ಮಧುರ–ಮುಂತಾದ ಷಡ್ರಸೋಪೇತಗಳಾದ ಹವಿಸ್ಸಿನಿಂದ ಹೋಮ ಮಾಡಿದರೆ ಪರಮಾನಂದದಿಂದ ಪರಿಪೂರ್ಣನೂ ಆಗುವನು. ಹೀಗೆ ಅನೇಕ ವಿಧ ಪ್ರಯೋಗ ಭೇದಗಳಿಂದ ನಾನಾ ವಿಧದ ಫಲಗಳನ್ನು ಸಾಧಿಸಲು ಈ ಚಕ್ರದ ಅರ್ಚನೆಯು ಮುಖ್ಯವಾದುದು. ॥ ೧೩ ॥

ಸಮೃದ್ಧವಾದ ಅನ್ನಕ್ಕೂ, ಸಮಗ್ರಾಂಗ ಪರಿಪೂರ್ಣವಾದ ಕರ್ಮಗಳಿಗೂ ಪತಿಯೇ, ಇಂದ್ರಾದಿ ದೇವತಾಗಣಕ್ಕೂ ನಿನ್ನ ಪರಿವಾರ ಗಣಕ್ಕೂ ಅಧಿಪತಿಯಾಗಿಯೂ ತ್ರಿಕಾಲಜ್ಞರಿಗೆಲ್ಲ ಶ್ರೇಷ್ಠನಾಗಿಯೂ, ಸಕಲರ ಭೋಗ್ಯವಸ್ತುವಿಗೂ ಉಪಮಾನವಾಗಿ

ಇತ್ಯೇವಮಾದ್ಯಮಕ್ಷರಂ ತದಂತ್ಯಬಿಂದುಪೂರ್ಣಮಿತ್ಯನೇನಾಂಗಂ ಸ್ಪೃಶತಿ । ಗಂ ಗಣೇಶಾಯ ನಮ ಇತಿ ಗಣೇಶಂ ನಮಸ್ಕುರ್ವೀತ । ಓಂ ನಮೋ ಭಗವತೇ ಭಸ್ಮಾಂಗರಾಗಾಯೋಗ್ರತೇಜಸೇ ಹನ ಹನ ದಹ ದಹ ಪಚ ಪಚ ಮಥ ಮಥ ವಿಧ್ವಂಸಯ ವಿಧ್ವಂಸಯ ಹಲ ಭಂಜನ ಶೂಲಮೂಲೇ ವ್ಯಂ ಜನ ಸಿದ್ಧಿಂ ಕುರು ಕುರು ಸಮುದ್ರಂ ಪೂರ್ವಪ್ರತಿಷ್ಠಿತಂ ಶೋಷಯ ಶೋಷಯ ಸ್ತಂಭಯ ಸ್ತಂಭಯ ಪರಮಂತ್ರಪರಯಂತ್ರ ಪರತಂತ್ರ ಪರದೂತ ಪರಕಟಕಪರಚ್ಛೇದನಕರ ವಿದಾರಯ ವಿದಾರಯ ಛಿಂಧಿ ಛಿಂಧಿ ಹ್ರೀಂ ಫಟ್ ಸ್ವಾಹಾ ॥ ಅನೇನ ಕ್ಷೇತ್ರಾಧ್ಯಕ್ಷಂ ಪೂಜಯೇದಿತಿ ॥ ೧೪ ॥

ಕುಲಕುಮಾರಿ ವಿದ್ಮಹೇ ಮಂತ್ರಕೋಟಿಸುಧೀಮಹಿ । ತನ್ನಃ ಕೌಲಿಃ ಪ್ರಚೋದಯಾತ್ ॥

ಇತಿ ಕುಮಾರ್ಯರ್ಚನಂ ಕೃತ್ವಾ ಯೋ ವೈ ಸಾಧಕೋಽಭಿಲಿಖತಿ ಸೋಽಮೃತತ್ವಂ ಗಚ್ಛತಿ ಸ ಯಶ ಆಪ್ನೋತಿ ಸಪರಮಾಯುಷ್ಯಮಥವಾ ಪರಂ ಬ್ರಹ್ಮ ಭಿತ್ತ್ವಾ ತಿಷ್ಠತಿ ಯ ಏವಂ ವೇದೇತಿ ಮಹೋಪನಿಷತ್ ॥ ೧೫ ॥

॥ ಇತಿ ತೃತೀಯೋಪನಿಷತ್ ॥



ರುವಂತೆ ಪ್ರಶಸ್ತವಾದ ಭೋಗ್ಯೋಪಕರಣ ಸಂಪನ್ನನೂ ಶ್ರೇಷ್ಠರಲ್ಲೆಲ್ಲ ಉತ್ತಮ ನೆನಿಸಿದವನಾಗಿಯೂ ನಿಖಿಲ ಮಂತ್ರಗಳಿಗೆ ಅಧಿಪತಿಯಾಗಿಯೂ ಇರುವ ನಿನ್ನನ್ನು ಈ ಕರ್ಮದಲ್ಲಿ ಕರೆಯುವೆವು. ನಮ್ಮ ಮೇಲೆ ಕರುಣೆಯಿಟ್ಟು ನಮ್ಮನ್ನು ರಕ್ಷಿಸುವ ಸಲುವಾಗಿ ನಮ್ಮ ಸ್ತುತಿ ಪೂರ್ವಕವಾದ ಆಹ್ವಾನವನ್ನು ಮನ್ನಿಸಿ ಈ ಯಜ್ಞಶಾಲೆಗೆ ಬಂದು ಆಸನಾರೂಢನಾಗು. ಇದು ಗಣೇಶ ಮಂತ್ರವು. ಇದರಲ್ಲಿ ಮೊದಲನೆಯ ಅಕ್ಷರ ಗಕಾರಕ್ಕೆ ಇದರ ಕಡೆಯ ಅಕ್ಷರ ಅನುಸ್ವಾರವನ್ನು ಸೇರಿಸಿ ಉಚ್ಚಾರಮಾಡಿ ಅಂಗವನ್ನು ಸ್ಪರ್ಶಿಸಿ "ಗಂಗಣೇಶಾಯ ನಮಃ" ಎಂಬ ಮಂತ್ರೋಚ್ಚಾರಣ ಪೂರ್ವಕ ವಾಗಿ ಗಣೇಶನನ್ನು ನಮಸ್ಕರಿಸಬೇಕು. ಇನ್ನು ಮುಂದೆ ಕ್ಷೇತ್ರೇಶ್ವರನ ಮಂತ್ರವು. ಭಸ್ಮವೆಂಬ ಅಂಗರಾಗವನ್ನು ಲೇಪಿಸಿಕೊಂಡಿರುವ ಕ್ರೂರವಾದ ತೇಜಸ್ಸಿನಿಂದ ಹೊಳೆ ಯುವ ಕ್ಷೇತ್ರಾಧ್ಯಕ್ಷನೇ, ನಮ್ಮ ಶತ್ರುವನ್ನು ಕೊಲ್ಲು, ಸುಡು, ಬೇಯಿಸು, ಕಡೆಯು, ಧ್ವಂಸಮಾಡು, ಗೀಚು, ಭಂಗಪಡಿಸು, ಶೂಲಾಗ್ರದಿಂದ ಚುಚ್ಚು, ಪೂರ್ವ ಸಮುದ್ರ ವನ್ನು ಬತ್ತಿಸು, ಸ್ತಂಭನಮಾಡು, ಪರರ ಮಂತ್ರ ಯಂತ್ರ ತಂತ್ರಗಳೆಲ್ಲವನ್ನೂ ಪರರ ದೂತರು ಶಿಬಿರಗಳು ಸಹಿತವಾಗಿ ಪರರನ್ನೂ ಛೇದನಮಾಡು, ಸೀಳಿಹಾಕು, ಹರಿದು ಹಾಕು, ಎಂದರೆ ಯಾವುದೇ ವಿಧದ ತೊಂದರೆಯು ನಮಗೆ ಉಂಟಾಗುವ ಸಂದರ್ಭ ದಲ್ಲಿಯೂ ಅದನ್ನೆಲ್ಲ ನಮ್ಮ ವೈರಿಗೆ ತಿರುಗಿಸಿ ನಮ್ಮನ್ನು ಕ್ಷೇಮವಂತರನ್ನಾಗಿ ಮಾಡೆಂದು ಕ್ಷೇತ್ರ ಅಧ್ಯಕ್ಷ ದೇವತೆಯನ್ನು ಪ್ರಾರ್ಥಿಸಿ ಪೂಜಿಸುವುದು. ॥ ೧೪ ॥

ಕುಮಾರೀ ಪೂಜೆಯಲ್ಲಿ ವಿನಿಯೋಗವುಳ್ಳ ಮಂತ್ರವಿದು. ಕೋಟಿ ಮಂತ್ರ ಪ್ರತಿಪಾದ್ಯಳಾಗಿ ಕುಲಕುಮಾರೀ ರೂಪದಿಂದಿರುವ ದೇವಿಯನ್ನರಿತು ಧ್ಯಾನಿಸುವೆವು. ಕುಲದೇವತಾ ರೂಪಿಣಿಯಾದ ದೇವತೆಯು ನಮ್ಮನ್ನು ಪ್ರೇರೇಪಿಸಲಿ. ಈ ಮಂತ್ರ ದಿಂದ ಕುಮಾರೀ ಪೂಜೆಯಂಗೈದು ಯಾವ ಉಪಾಸಕನು ಮಂತ್ರವನ್ನು ಬರೆದು ಪೂಜಿಸುವನೋ ಅವನು ಕೀರ್ತಿ, ಪರಮಾಯುಷ್ಯಗಳೊಡನೆ ಮೋಕ್ಷವನ್ನು ಹೊಂದುವನು. ಅಥವಾ ಪರಬ್ರಹ್ಮವನ್ನು ಸಾಕ್ಷಾತ್ಕರಿಸಿ ಜೀವನ್ಮುಕ್ತನಾಗುವನು. ಇದರ ಮಹಿಮೆಯನ್ನರಿತವನೂ ಕೂಡ ಮಹಾ ಫಲಕ್ಕೆ ಭಾಗಿಯಾಗುತ್ತಾನೆ. ॥೧೫॥

ತೃತೀಯೋಪನಿಷತ್ತಿನ ಅನುವಾದವು ಮುಗಿದುದು.



|| ಶ್ರೀರಸ್ತು ||

## || ಚತುರ್ಥೋಪನಿಷತ್ ||

---

ದೇವಾ ಹ ವೈ ಭಗವಂತಮಬ್ರುವನ್ ದೇವ ಗಾಯತ್ರಂ
ಹೃದಯಂ ನೋವ್ಯಾಖ್ಯಾತಂ ತ್ರೈಪುರಂ ಸರ್ವೋತ್ತಮಮ್ || ೧ ||

ಜಾತವೇದಸಸೂಕ್ತೇನಾಖ್ಯಾತಂ ನಸ್ತ್ರೈಪುರಾಷ್ಟಕಂ |
ಯದಿಷ್ಟ್ವಾ ಮುಚ್ಯತೇ ಯೋಗೀ ಜನ್ಮಸಂಸಾರಬಂಧನಾತ್ || ೨ ||

ಅಥ ಮೃತ್ಯುಂಜಯಂ ನೋ ಬ್ರೂಹೀತ್ಯೇವಂ ಬ್ರುವತಾಂ ಸರ್ವೇಷಾಂ ದೇವಾನಾಂ ಶ್ರುತ್ವೇದಂ ವಾಕ್ಯ ಮಥಾತಸ್ತ್ರ್ಯಂಬಕೇ ನಾನುಷ್ಟುಭೇನ ಮೃತ್ಯುಂಜಯಂ ದರ್ಶಯತಿ || ೩ ||

ಕಸ್ಮಾತ್ತ್ರ್ಯಂಬಕಮಿತಿ | ತ್ರಯಾಣಾಂ ಪುರಾಣಾಮಂಬಕಂ ಸ್ವಾಮಿನಂ ತಸ್ಮಾದುಚ್ಯತೇ ತ್ರ್ಯಂಬಕಮಿತಿ || ೪ ||

ಅಥಕಸ್ಮಾದುಚ್ಯತೇ ಯಜಾಮಹ ಇತಿ | ಯಜಾಮಹೇ ಸೇವಾಮಹೇ ವಸ್ತುಮಹೇತ್ಯಕ್ಷರದ್ವಯೇನ ಕೂಟತ್ವೇನಾಕ್ಷರೈಕೇನ ಮೃತ್ಯುಂಜಯಮಿತ್ಯುಚ್ಯತೇ ತಸ್ಮಾದುಚ್ಯತೇ ಯಜಾಮಹ ಇತಿ || ೫ ||

॥ ಶ್ರೀ ॥

# ಚತುರ್ಥೋಪನಿಷತ್ತಿನ ಕನ್ನಡ ಅನುವಾದವು.

---

ಭಗವಂತನಾದ ಸದಾಶಿವನನ್ನು ಕುರಿತು ದೇವತೆಗಳೆಲ್ಲರೂ ಸ್ವಾಮಿ, ಆದಿ ವಿದ್ಯೆಯ ಅರ್ಥದೊಡನೆ ಸಮನ್ವಯಹೊಂದಿದ, ಸರ್ವೋತ್ತಮವಾದ ತ್ರಿಪುರಾದೇವಿಯ ಸಂಬಂಧವಾದ ಗಾಯತ್ರೀ ರಹಸ್ಯಾರ್ಥವನ್ನು ಈವರೆಗೆ ನೀನು ವ್ಯಾಖಾನಮಾಡಿರುವುದನ್ನು ಕೇಳಿದೆವು ॥ ೧ ॥

ಹಾಗೂ ಜಾತವೇದಸೇ ಎಂಬ ಒಂದೇ ಋಙ್ಮಂತ್ರದಿಂದ ಕೂಡಿದ ಸೂಕ್ತದಲ್ಲಿ ಗರ್ಭಿತವಾದ ತ್ರಿಪುರಾದೇವಿಯನ್ನು ಮುಖ್ಯವಾಗಿ ವರ್ಣಿಸುವ ವಿದ್ಯಾಷ್ಟಕವನ್ನೂ ಕೇಳಿದೆವು. ಯೋಗಿಗಳು ವಿದ್ಯಾಷ್ಟಕವನ್ನು ಅನುಸಂಧಾನ ಪೂರ್ವಕವಾಗಿ ಉಪಾಸನೆಮಾಡಿ ಜನ್ಮವೆಂಬ ಸಂಸಾರ ಬಂಧದಿಂದ ಬಿಡುಗಡೆ ಹೊಂದುವರು ಎಂಬ ವಿದ್ಯಾಷ್ಟಕಧ್ಯಾನದ ಮಹಿಮೆಯನ್ನೂ ನಾವು ಅರಿತಿದ್ದೇವೆ. ॥ ೨ ॥

ಈಗ ಮೃತ್ಯುಂಜಯ ಮಂತ್ರದ ಅರ್ಥವನ್ನು ಉಪದೇಶಮಾಡಬೇಕೆಂದು ಕೇಳಲು ಈ ರೀತಿ ಪ್ರಾರ್ಥಿಸುತ್ತಿರುವ ದೇವತೆಗಳ ವಾಕ್ಯವನ್ನು ಕೇಳಿ ಭಗವಂತನು ಮುಂದಿನ ಉಪನಿಷದ್ವಾಕ್ಯದಿಂದ ಅನುಷ್ಟುಪ್ ಛಂದಸ್ಸಿನಿಂದ ಕೂಡಿದ ತ್ರ್ಯಂಬಕಂ ಯಜಾಮಹೇ ಎಂಬ ಮಂತ್ರ ವಿವರಣೆಯ ಮೂಲಕ ಮೃತ್ಯುಂಜಯ ದೇವತಾ ಸಾಕ್ಷಾತ್ಕಾರದ ಬಗೆಯನ್ನು ಉಪದೇಶಿಸುತ್ತಾನೆ. ॥ ೩ ॥

ಮುಂದಿನ ವಾಕ್ಯಗಳು "ತ್ರ್ಯಂಬಕಂಯಜಾಮಹೇ" ಎಂಬ ಮಂತ್ರದಲ್ಲಿ ಮೊದಲಿನಿಂದ ಒಂದೊಂದು ಪದವನ್ನು ತೆಗೆದುಕೊಂಡು ಅರ್ಥವನ್ನು ವಿವರಿಸುತ್ತವೆ. ತ್ರ್ಯಂಬಕಂ ಎಂಬುದು ಹೇಗೆ? ತ್ರಯಾಣಾಂ ಪುರಾಣಾಂ ಅಂಬಕಂ-ಸ್ಥೂಲ-ಸೂಕ್ಷ್ಮ-ಕಾರಣವೆಂಬ ಮೂರುಪುರಗಳಿಗೆ ಸ್ವಾಮಿಯಾಗಿರುವುದರಿಂದ ತ್ರ್ಯಂಬಕಂ ಎಂದು ಉಪಾಸ್ಯದೇವತೆಯ ವಿಶೇಷಣವು ॥ ೪ ॥

ಮುಂದೆ ಯಜಾಮಹೇ ಎಂದು ಹೇಳಿದುದೇತಕ್ಕೆ? ಯಜಾಮಹೇ ಎಂದರೆ ಸೇವಿಸುತ್ತೇವೆ. ಅಥವಾ ಸ್ತುತಿಸುತ್ತೇವೆ. ಎಂದು ಅರ್ಥವು. ಇಲ್ಲಿ ಸೇವಿಸುವ, ಅಥವಾ ಸ್ತುತಿಸುವ ಕ್ರಿಯೆಗೆ ಕರ್ಮವು ತ್ರ್ಯಂಬಕಂ ಎಂಬ ಪದದಿಂದ ಹೇಳಲ್ಪಟ್ಟಿದೆ. ಆ ಪದದಲ್ಲಿ "ತ್ರ್ಯಂ, ಬ" ಎಂಬ ಎರಡು ಅಕ್ಷರಗಳೂ ಕಡೆಯಲ್ಲಿ ಆದಿವಿದ್ಯೆಯ ಕೂಟತ್ರಯಾಂತರ್ಗತವಾದ ಒಂದು ಕಕಾರವೂ ಸೇರಿವೆ. ಅದು ಮೃತ್ಯುಂಜಯನೆಂಬ ಸ್ತುತ್ಯದೇವತೆಯನ್ನು ಬೋಧಿಸುತ್ತಿದೆ. ಆದ್ದರಿಂದ ಮೃತ್ಯುಂಜಯನೆಂಬ ದೇವತೆಯನ್ನು ಸೇವಿಸುತ್ತೇವೆ ಎಂಬ ಅರ್ಥಾನುಸಾರವಾಗಿ ಯಜಾಮಹೇ ಎಂಬುದು ಮಂತ್ರದಲ್ಲಿ ಸೇರಿಕೊಂಡಿದೆ. ॥ ೫ ॥

ಅಥ ಕಸ್ಮಾದುಚ್ಯತೇ ಸುಗಂಧಿಮಿತಿ । ಸರ್ವತೋ ಯಶ ಆಪ್ನೋತಿ ತಸ್ಮಾದುಚ್ಯತೇ ಸುಗಂಧಿಮಿತಿ ॥ ೬ ॥

ಅಥ ಕಸ್ಮಾದುಚ್ಯತೇ ಪುಷ್ಟಿವರ್ಧನಮಿತಿ । ಯಃ ಸರ್ವಾನ್ ಲೋಕಾನ್ ಸೃಜತಿ ಯಃ ಸರ್ವಾನ್ ಲೋಕಾಂಸ್ತಾರಯತಿ ಯಃ ಸರ್ವಾನ್ ಲೋಕಾನ್ ವ್ಯಾಪ್ನೋತಿ ತಸ್ಮಾದುಚ್ಯತೇ ಪುಷ್ಟಿವರ್ಧನಮಿತಿ ॥ ೭ ॥

ಅಥಕಸ್ಮಾದುಚ್ಯತೇ ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯೇತಿ ॥ ಸುಲಗ್ನತ್ವಾದುರ್ವಾರುಕಮಿವ ಮೃತ್ಯೋಃ ಸಂಸಾರಬಂಧನಾತ್ ಸಂಲಗ್ನತ್ವಾತ್ ಬದ್ಧತ್ವಾನ್ಮೋಕ್ಷೀಭವತಿ ಮುಕ್ತೋ ಭವತಿ ॥ ೮ ॥

ಅಥ ಕಸ್ಮಾದುಚ್ಯತೇ ಮಾಽಮೃತಾದಿತಿ । ಅಮೃತತ್ವಂ ಪ್ರಾಪ್ನೋತ್ಯಕ್ಷರಂ ಪ್ರಾಪ್ನೋತಿ ಸ್ವಯಂ ರುದ್ರೋ ಭವತಿ ॥ ೯ ॥

ದೇವಾ ಹ ವೈ ಭಗವಂತಮೂಚುಃ:- ಸರ್ವಂ ನೋ ವ್ಯಾಖ್ಯಾತಂ ಅಥ ಕೈರ್ಮಂತ್ರೈಃ ಸ್ತುತಾ ಭಗವತೀ ಸ್ವಾತ್ಮಾನಂ ದರ್ಶಯತಿ ತಾನ್ ಸರ್ವಾನ್ ಶೈವಾನ್ ವೈಷ್ಣವಾನ್ ಸೌರಾನ್ ಗಾಣೇಶಾನ್ ನೋಬ್ರೂಹೀತಿ ॥ ೧೦ ॥

ಹೀಗೆಯೇ ಮಂತ್ರದಲ್ಲಿ ಸುಗಂಧಿಂ ಎಂಬ ಪದವು ಹೇಗೆ ಬಂದಿದೆಯೆಂಬ ಪ್ರಶ್ನೆಗೆ ಉತ್ತರ:— ಸರ್ವ ದೇಶಗಳಲ್ಲಿಯೂ ತನ್ನ ಅಪಾರ ಮಹಿಮೆಯಿಂದ ಕೀರ್ತಿಯನ್ನು ಗಳಿಸಿರುವುದರಿಂದ ಕೀರ್ತಿಯೇ ಗಂಧವೆಂದು ಭಾವಿಸಿ ಸುಗಂಧಿಂ ಎಂಬ ವಿಶೇಷಣವನ್ನು ದೇವತೆಯಲ್ಲಿ ಸಂಗ್ರಹಿಸಿರುತ್ತದೆ. ॥ ೬ ॥

ಅದರ ಮುಂದೆ ಪುಷ್ಟಿವರ್ಧನಂ ಎಂಬ ಮತ್ತೊಂದು ಗುಣವಾಚಕ ಶಬ್ದವು ಯಾವ ಅರ್ಥದಲ್ಲಿ ಬಂದಿದೆಯೆಂದರೆ–ಯಾವ ಮೃತ್ಯುಂಜಯ ದೇವನು ಸರ್ವ ಲೋಕಗಳನ್ನು ಸೃಷ್ಟಿಸಿ ಸುಕೃತವನ್ನು ಮಾಡಿಸಿ ಸಂಕಟಗಳಿಂದ ದಾಟಿಸುತ್ತಾ, ಸರ್ವ ಲೋಕವನ್ನೂ ವ್ಯಾಪಿಸಿಕೊಂಡಿರುವನೋ ಅವನು ಸಕಲ ಜಗತ್ತಿನ ಪುಷ್ಟಿಗೆ ಕಾರಣ ನಾಗಿರುವನೆಂಬ ಅಭಿಪ್ರಾಯದಿಂದ ಮೃತ್ಯುಂಜಯನಿಗೆ ಇದೊಂದು ವಿಶೇಷಣವು ಉಕ್ತವಾಗಿದೆ. ॥ ೭ ॥

ಮಂತ್ರದ ಉತ್ತರಾರ್ಧದಲ್ಲಿ "ಉರ್ವಾರುಕಮಿವ ಬಂಧನಾನ್ಮೃತ್ಯೋ ರ್ಮುಕ್ಷೀಯ" ಎಂದು ಹೇಳುವ ಅಭಿಪ್ರಾಯವೇನು ? ಮೇಲ್ಗಡೆಯಲ್ಲಿ ಕಟ್ಟಿರಿಸಿರು ವುದರಿಂದಲೋ ಸ್ವಾಭಾವಿಕವಾದ ತೊಟ್ಟಿನ ಬಂಧನದಿಂದಲೋ ಬದ್ಧವಾಗಿರುವ ಸೌತೇಕಾಯಿಯು ಕಾಲಪರಿಪಾಕವಶದಿಂದ ತಾನಾಗಿ ಬಿಟ್ಟು ಬಂಧನದಿಂದ ಬಿಡುಗಡೆ ಹೊಂದುವಂತೆ ಜನ್ಮಮರಣ ಪ್ರವಾಹವೆಂಬ ಮೃತ್ಯುಪ್ರಾಯವಾದ ಸಂಸಾರಬಂಧದಿಂದ ಬದ್ಧರಾಗಿರುವ ನಾವು ಬಿಡುಗಡೆ ಹೊಂದುವೆವು. ಈ ಸಂಸಾರ ಪಾಶದ ಬಂಧನವು ನಮಗೆ ಅಸಹ್ಯವಾಗಿ ಆದರ ಬಿಡುಗಡೆಯನ್ನು ನಾವು ಕೋರುತ್ತೇವೆಂದು ಅಭಿಪ್ರಾಯವು. ॥ ೮ ॥

ಕಡೆಯಲ್ಲಿ ಮಾಽಮೃತಾತ್ ಎಂದು ಹೇಳಿರುವುದರ ಅರ್ಥವೇನು? ಅಮೃತ ವೆಂದರೆ ಮೋಕ್ಷವು. ಅಂತಹ ಮೋಕ್ಷವನ್ನು ಹೊಂದಿದನೆಂದರೆ ಶಾಶ್ವತವಾದ ಶ್ರೇಯಸ್ಸನ್ನೇ ಹೊಂದಿದವನಾಗುವನು. ಅದಾದರೆ ತಾನೇ ರುದ್ರನಾಗುವನೆಂದು ಅರ್ಥವು. ಇದು ಮೋಕ್ಷಸುಖವನ್ನು ನನಗೆ ಕರುಣಿಸು ಎಂದು ಪ್ರಾರ್ಥನೆಯನ್ನು ಸೂಚಿಸುತ್ತದೆ. ॥ ೯ ॥

ಈ ರೀತಿಯಾಗಿ ಅಷ್ಟೋತ್ತರ ಶತಾಕ್ಷರೀ ಮಂತ್ರಗಳ ವಿವರಣವನ್ನೂ ಉಪಾ ಸನಾ ಪ್ರಕಾರವನ್ನೂ ಕೇಳಿದರೂ ತೃಪ್ತರಾಗದಿರುವ ದೇವತೆಗಳು ಭಗವಂತನನ್ನು ಕುರಿತು ಪುನಃ ಪ್ರಶ್ನಿಸಿದರು. ಸ್ವಾಮಿ :—ನೀನು ಸರ್ವವನ್ನೂ ವ್ಯಾಖ್ಯಾನಮಾಡಿ ವಿವರವಾಗಿ ಉಪದೇಶಿಸಿರುತ್ತೀಯೇ, ಆದರೆ ಯಾವ ಮಂತ್ರಗಳಿಂದ ನಾವು ಭಗವತೀ ದೇವಿಯನ್ನು ಸ್ತುತಿಸಿದರೆ ದೇವಿಯು ಪ್ರಸನ್ನಳಾಗಿ ಸ್ವಸ್ವರೂಪದ ಸಾಕ್ಷಾತ್ಕಾರವನ್ನು ನಮಗೆ ಕೊಡುವಳೋ ಅಂತಹ ಪ್ರಶಸ್ತಮಂತ್ರಗಳಲ್ಲಿ ಶೈವ, ವೈಷ್ಣವ, ಸೌರ, ಗಾಣೇಶ ಎಂದರೆ ವಿಶೇಷವಾಗಿ ಶಿವ, ವಿಷ್ಣು, ಸೂರ್ಯ, ಗಣೇಶ ದೇವರನ್ನು ವರ್ಣಿಸುವ ಉತ್ತಮವಾದ ಎಲ್ಲ ಮಂತ್ರಗಳನ್ನೂ ಹೇಳಬೇಕೆಂದರು. ॥ ೧೦ ॥

ಸ ಹೋವಾಚ ಭಗವಾನ್—ತ್ರ್ಯಂಬಕೇನಾನುಷ್ಟುಭೇನ ಮೃತ್ಯುಂಜಯಮುಪಾಸಯೇತ್ । ಪೂರ್ವೇಣಾಧ್ವನಾ ವ್ಯಾಪ್ತಮೇಕಾಕ್ಷರ ಮಿತಿ ಸ್ಮೃತಮ್ ॥ ೧೧ ॥

ಓಂ ನಮಃ ಶಿವಾಯೇತಿ ಯಾಜುಷಮಂತ್ರೋಪಾಸಕೋ
ರುದ್ರತ್ವಂ ಪ್ರಾಪ್ನೋತಿ ಕಲ್ಯಾಣಂ ಪ್ರಾಪ್ನೋತಿ ಯ ಏವಂ ವೇದ
॥ ೧೨ ॥

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಮ್ ॥ ೧೩ ॥

ವಿಷ್ಣೋಃ ಸರ್ವತೋಮುಖಸ್ಯ ಸ್ನೇಹೋ ಯಥಾ ಪಲಲಪಿಂಡ ಮೋತಪ್ರೋತಮನುವ್ಯಾಪ್ತಂ ವ್ಯತಿರಿಕ್ತಂ ವ್ಯಾಪ್ನುತ ಇತಿ ವ್ಯಾಪ್ನುವತೋ ವಿಷ್ಣೋಸ್ತತ್ಪರಮಂ ಪದಂ ಪರಂ ವ್ಯೋಮೇತಿ ಪರಮಂ ಪದಂ ಪಶ್ಯಂತಿ ವೀಕ್ಷಂತೇ ಸೂರಯೋ ಬ್ರಹ್ಮಾದಯೋ ದೇವಾಸ ಇತಿ ಸದಾಹೃದಯ ಆದಧತೇ । ತಸ್ಮಾದ್ವಿಷ್ಣೋಃ ಸ್ವರೂಪಂ ವಸತಿ ತಿಷ್ಠತಿ ಭೂತೇಷ್ವಿತಿ ವಾಸುದೇವ ಇತಿ ॥ ೧೪ ॥

ಅನುಷ್ಟುಪ್ ಛಂದಸ್ಸಿನಿಂದ ಕೂಡಿದ ತ್ರ್ಯಂಬಕಂಯಜಾಮಹೇ ಎಂಬ ಮಂತ್ರದಿಂದ ಮೃತ್ಯುಂಜಯ ದೇವತೆಯನ್ನು ಉಪಾಸನೆಮಾಡಬೇಕು. ಹಿಂದೆ ಹೇಳಿರುವಂತೆ ಓಂ ಎಂಬ ಅಕ್ಷರವು ಸಕಲ ವಸ್ತುವನ್ನೂ ವ್ಯಾಪಿಸಿದೆಯೆಂದು ಶ್ರುತಿಯಲ್ಲಿ ಹೇಳಿರುತ್ತದೆ. ಎಂದರೆ ಅರ್ಥವೆಲ್ಲವೂ ಶಬ್ದಗಳಲ್ಲಿ ಅಡಗಿದೆಯೆಂದೂ, ಶಬ್ದಗಳೆಲ್ಲವೂ ವರ್ಣಮಾಲೆಯಲ್ಲಿ ಅಡಗಿವೆಯೆಂದೂ ಅಂತಹ ಎಲ್ಲ ವರ್ಣಗಳು ಓಂಕಾರದಲ್ಲಿ ಅಡಗಿವೆಯೆಂದೂ ಆದುದರಿಂದ ಓಂಕಾರವು ಎಲ್ಲವನ್ನೂ ವ್ಯಾಪಿಸಿರುವುದೆಂದು ತಾತ್ಪರ್ಯ. ಇದು ಪರಮಾತ್ಮನಿಗೆ ವಾಚಕವೂ ಪ್ರತೀಕವೂ ಆಗಿರುವುದೂ ಒಂದು ಓಂಕಾರದ ವೈಶಿಷ್ಟ್ಯವು, ಇದರ ಅನುಸಂಧಾನವೂ ಶಿವೋಪಾಸನೆಯಲ್ಲಿ ಸೇರುವುದು. ॥ ೧೧ ॥

ಓಂಕಾರ ಪೂರ್ವಕವಾಗಿ " ನಮಃ ಶಿವಾಯ " ಎಂಬ ಯಜುರ್ವೇದ ಮಂತ್ರೋಪಾಸಕನು ರುದ್ರಸ್ವರೂಪವನ್ನು ಹೊಂದುತ್ತಾನೆ. ಮತ್ತು ಮಂಗಲಗಳನ್ನು ಹೊಂದುವನು. ಈ ವಿಧವಾಗಿ ಮಂತ್ರದ ಮಹಿಮೆಯನ್ನರಿತವನೂಕೂಡ ಮಂತ್ರೋಪಾಸನೆಯ ಮಹಾ ಫಲಗಳನ್ನು ಹೊಂದುತ್ತಾನೆ. ॥ ೧೨ ॥

ಹಿಂದೆ ಉಪಾಸನೆಗೆ ಯೋಗ್ಯವಾದ ಶೈವ ಮಂತ್ರಗಳನ್ನು ಹೇಳಿ ಈಗ ವೈಷ್ಣವ ಮಂತ್ರಗಳನ್ನು ಹೇಳುತ್ತಿದೆ. ಅವುಗಳಲ್ಲಿ ತದ್ವಿಷ್ಣೋಃ ಎಂಬುದೂ ಒಂದು ವೈಷ್ಣವ ಮಂತ್ರವು. ಇದರ ಅರ್ಥವು ಮುಂದೆ ಉಪನಿಷತ್ತಿನ ವಾಕ್ಯದಿಂದಲೇ ವ್ಯಕ್ತವಾಗುವುದು. ಇದಕ್ಕೆ ಸಾಮಾನ್ಯವಾಗಿ ಸಾಯನ ಭಾಷ್ಯಾನುಸಾರವಾಗಿ ಈ ರೀತಿಯಾಗಿ ಅರ್ಥವನ್ನು ತಿಳಿಯಬೇಕು. :—ಋತ್ವಿಜರೇ ಮುಂತಾದ ಜ್ಞಾನಿಗಳು ವಿಷ್ಣುವಿನ ಪರಮಸ್ಥಾನವಾದ ಸ್ವರ್ಗವನ್ನು ತಡೆಯಿಲ್ಲದೇ ಆಕಾಶದಲ್ಲಿ ಪ್ರಸರಿಸಿದ ನೇತ್ರವು ವಿಷಯವನ್ನು ಸಾಕ್ಷಾತ್ಕರಿಸುವಂತೆ ಶಾಸ್ತ್ರದ ದೃಷ್ಟಿಯಿಂದ ಸಾಕ್ಷಾತ್ಕರಿಸುತ್ತಿದ್ದಾರೆ. ॥ ೧೩ ॥

ವಿಷ್ಣೋಃ=ವ್ಯಾಪಿಸುವ ಸ್ವಭಾವವುಳ್ಳವನು ಎಂದರ್ಥವು. ಸ್ನೇಹ (ಜಿಡ್ಡು) ಗುಣವು ಆರ್ದ್ರ-ಉದ್ದವಾಗಿರುವ ಸೂಕ್ಷ್ಮ ಅವಯವಗಳಿಂದ ವ್ಯಾಪಿಸಲ್ಪಟ್ಟಿರುವ ವ್ಯತಿರಿಕ್ತವಾದ ಮಾಂಸದ ಮುದ್ದೆಯನ್ನು ಒಳಹೊರ ಭಾಗಗಳಲ್ಲೆಲ್ಲ ವ್ಯಾಪಿಸಿರುವಂತೆ ಪರಮಾತ್ಮನೂ ಪ್ರಪಂಚವನ್ನೆಲ್ಲ ವ್ಯಾಪಿಸಿರುವುರಿಂದ ಸರ್ವದೇಶಗಳಲ್ಲಿ ಮುಖವುಳ್ಳ ಪರಮಾತ್ಮನ ಪರಮಪದವು ಶ್ರೇಷ್ಠವಾದ ಹೃದಯಾಕಾಶವು. ಬ್ರಹ್ಮಾದಿ ದೇವತೆಗಳು ಹೃದಯಾಕಾಶವನ್ನು ವಿಷ್ಣುವಿನ ಪರಮಪದವನ್ನಾಗಿ ತಿಳಿದು ತಮ್ಮ ಹೃದಯದಲ್ಲಿ ಪರಮಾತ್ಮನನ್ನು ಧ್ಯಾನಿಸುವರು. ಆದುದರಿಂದ ಪರಮಾತ್ಮನಿಗೆ ಸಕಲರ ಹೃದಯವನ್ನೂ ವ್ಯಾಪಿಸಿರುವನೆಂಬ ಅರ್ಥದಲ್ಲಿ ವಿಷ್ಣು ಎಂಬ ಹೆಸರು ಬಂದಿದೆ. ವ್ಯಾಪ್ತಿ ಎಂಬ ಅರ್ಥವನ್ನು ಕೊಡುವ ವಿಷ್‌ಧಾತುವಿನಿಂದ ವಿಷ್ಣು ಎಂಬ ಪದವು

ಓಂ ನಮ ಇತಿ ತ್ರೀಣ್ಯಕ್ಷರಾಣಿ । ಭಗವತ ಇತಿ ಚತ್ವಾರಿ । ವಾಸುದೇವಾಯೇತಿ ಪಂಚಾಕ್ಷರಾಣಿ । ಏತದ್ವೈ ವಾಸುದೇವಸ್ಯ ದ್ವಾದಶಾರ್ಣಮಭ್ಯೇತಿ । ಸೋಽಪಪ್ಲವಂ ತರತಿ ಸ ಸರ್ವಮಾಯುರೇನ್ಯೈತಿ ವಿಂದತೇ ಪ್ರಾಜಾಪತ್ಯಂ ರಾಯಸ್ಪೋಷಂ ಗೌಪತ್ಯಂ ಚ ಸಮಶ್ನುತೇ ॥ ೧೫ ॥

ಪ್ರತ್ಯಗಾನಂದಂ ಬ್ರಹ್ಮ ಪುರುಷಂ ಪ್ರಣವಸ್ವರೂಪಮಕಾರ ಉಕಾರೋಮಕಾರ ಇತಿ ॥ ತಾನೇಕಧಾ ಸಂಭವತಿ ತದೋಮಿತಿ ॥ ೧೬ ॥

ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾವೇದಿಷದತಿಥಿರ್ದುರೋಣಸತ್ । ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥ ಇತಿ ॥ ೧೭ ॥

ರೂಪಗೊಂಡಿದೆ. ಇದೇ ಅಭಿಪ್ರಾಯದಿಂದಲೇ ವಾಸುದೇವ ಎಂಬ ಪರ್ಯಾಯ ಪದವೂ ಹೆಸರಾಗಿದೆ. ಸರ್ವಭೂತಗಳಲ್ಲಿಯೂ ಪರಮಾತ್ಮನು "ವಸತಿ" ವಾಸಿಸುತ್ತಾನೆ ಅಥವಾ ಇರುತ್ತಾನೆ. ಮತ್ತು "ದೀವ್ಯತಿ" ಪ್ರಕಾಶಿಸುತ್ತಾನೆ. ಆದ್ದರಿಂದ ಪರಮಾತ್ಮನ ಸ್ವರೂಪವು ವಸತಿ, ದೀವ್ಯತಿ, ಎಂಬ ಎರಡು ಅರ್ಥಗಳನ್ನು ಸೂಚಿಸುವ ವಾಸು+ದೇವ ಎಂಬ ಪದದಿಂದ ಕರೆಯಲ್ಪಡುವುದು.
||೧೪||

ಮುಂದೆ ವೈಷ್ಣವ ಮಂತ್ರಗಳಲ್ಲಿ ಸೇರಿರುವ ದ್ವಾದಶಾಕ್ಷರ ಮಂತ್ರವನ್ನು ತೋರಿಸುತ್ತದೆ. ಅದರಲ್ಲಿ ಮೊದಲು ಓಂನಮಃ ಎಂದು ಮೂರು ವರ್ಣಗಳು ಇವೆ. ತರುವಾಯ ಭಗವತೇ ಎಂದು ನಾಲ್ಕು ವರ್ಣಗಳು ಸೇರಿವೆ. ಕಡೆಯಲ್ಲಿ ವಾಸು ದೇವಾಯ ಎಂದು ಐದು ಅಕ್ಷರಗಳು ಇವೆ. ಒಟ್ಟಾಗಿ ಹನ್ನೆರಡು ಅಕ್ಷರಗಳಾಗುವುವು. ಹೀಗೆ ಹನ್ನೆರಡು ಅಕ್ಷರಗಳನ್ನು ಹೊಂದಿರುವುದರಿಂದ ಇದು ವಾಸುದೇವನ ದ್ವಾದ ಶಾಕ್ಷರ ಮಂತ್ರವಾಗಿ ಪ್ರಸಿದ್ಧವಾಗಿರುವುದು. ಇದನ್ನು ಆದರ ಮುಂತಾದ ವಿಧಿ ಯಿಂದ ಉಪಾಸನೆ ಮಾಡಿದವನು ತನ್ನ ಆಯುಷ್ಯದಲ್ಲಿ ಅಪಮೃತ್ಯುವಿನ ಅಂತರಾಯ ವಿಲ್ಲದೇ ಯಾವ ಪೀಡೆಯೂ ಇಲ್ಲದೇ ಸಾಧು ಜೀವನದಿಂದ ಕೂಡಿದ ತನ್ನ ಪೂರ್ಣಾ ಯುಷ್ಯವನ್ನು ಹೊಂದುತ್ತಾನೆ. ಮತ್ತು ಜನಜೀವನದಲ್ಲಿ ಮನುಷ್ಯ ಸಾಮಾನ್ಯವೂ ಬಯಸುವಂತಹ ಫಲವಾದ ಪ್ರಜಾ ತನ್ನ ಸಂತತಿ, ಮತ್ತು ತನ್ನ ಕೈಕೆಳಗಿನ ಪೋಷ್ಯ ವರ್ಗ, ಇದರ ನಿಶ್ಚಿಂತೆಯಾದ ಪೋಷಕತ್ವವನ್ನೂ ಸಂಪತ್ತಿನ ಅಭಿವೃದ್ಧಿಯನ್ನೂ ಗೋ-ಅಶ್ವಾದಿ ಹೆಚ್ಚು ಪಶುಗಳ ಸ್ವಾಮಿತ್ವವನ್ನೂ ಹೊಂದುವನು. ಇಂತಹ ಮಹಾ ಫಲದಾಯಕವಾದ ಈ ಮಹಾ ಮಂತ್ರದ ಉಪಾಸನೆಯು ಪ್ರಶಸ್ತವಾದುದು.
|| ೧೫ ||

ಪ್ರತ್ಯಕ್=ಅಂತರವಾದ ಸ್ವಸ್ವರೂಪ ಆನಂದ ಪರಿಪೂರ್ಣವಾದ ಬ್ರಹ್ಮಪುರುಷ ನನ್ನು ಸ್ತುತಿಸುವ ಮಹಾ ಮಂತ್ರವಾದ ಓಂಕಾರದಲ್ಲಿ ಅ + ಉ + ಮಕಾರಗಳು ಸೇರಿಕೊಂಡಿವೆ. ಆ ಮೂರು ವರ್ಣಗಳೂ ಒಂದಾಗಿ ಸೇರಿ ಓಂ ಎಂದು ಪ್ರಣವ ಮಂತ್ರವಾಗಿರುವುದು. || ೧೬ ||

ಈ ಮಂತ್ರವು ಸೂರ್ಯ ದೇವತೆಯನ್ನು ಪ್ರಶಂಸಿಸುವುದು. ಇದಕ್ಕೆ ಸಾಯನ ಭಾಷ್ಯಾನುಸಾರವಾಗಿ ಈ ಅರ್ಥವನ್ನು ತಿಳಿಯಬೇಕು :—ಈ ಮಂತ್ರವು ತೇಜೋಮಯವಾಗಿ ಆಕಾಶದಲ್ಲಿ ಜ್ವಲಿಸುತ್ತಿರುವ ಸೂರ್ಯಮಂಡಲಾಭಿಮಾನಿ ದೇವತೆ, ಸರ್ವ ಪ್ರಾಣಿಗಳ ಚಿತ್ತದ ಉಪಾಧಿಯನ್ನು ಅನುಕರಿಸುತ್ತಿರುವ ಪರಮಾತ್ಮ, ನಿರ್ವಿಶೇಷ ಬ್ರಹ್ಮವಸ್ತು, ಈ ಮೂರು ದೃಷ್ಟಿಯಿಂದ ಸೂರ್ಯನನ್ನು ಸ್ತುತಿಸುತ್ತಿದೆ. ಸರ್ವದಾ ಸರ್ವದೇಶಗಳಲ್ಲಿಯೂ ಹೋಗುವವನೂ, ಪ್ರಕಾಶದಿಂದ ಹೊಳೆಯುವದು.

ಹಂಸ ಇತ್ಯೇತನ್ಮನೋರಕ್ಷರ ದ್ವಿತೀಯೇನ ಪ್ರಭಾಪುಂಜೇನ ಸೌರೇಣ ಧೃತಮಬ್ಜಾಗೋಜಾ ಋತಜಾ ಅದ್ರಿಜಾ ಋತಂ ಸತ್ಯಾಪ್ರಭಾಪುಂಜಿನ್ಯುಷಾ ಸಂಧ್ಯಾಪ್ರಜ್ಞಾಭಿಃ ಶಕ್ತಿಭಿಃ ಪೂರ್ವಂ ಸೌರಮಧೀಯಾನಃ ಸರ್ವಫಲಮಶ್ನುತೇ ॥ ಸವ್ಯೋಮ್ನಿ ಪರಮೇ ಧಾಮನಿ ಸೌರೇ ನಿವಸತೇ ॥ ೧೮ ॥

ಗಣಾನಾಂತ್ವೇತಿ ತ್ರೈಷ್ಟುಭೇನ ಪೂರ್ವೇಣಾಧ್ವನಾ ಮನುನೈಕಾರ್ಣೇನ ಗಣಾಧಿಪಮಭ್ಯರ್ಚ್ಯ ಗಣೇಶತ್ವಂ ಪ್ರಾಪ್ನೋತಿ ॥ ೧೯ ॥

ಲೋಕದಲ್ಲಿರುವವನೂ, ಮಧ್ಯದಲ್ಲಿ ವಾಸಮಾಡುವ ಸರ್ವಪ್ರಾಣಿಗಳನ್ನೂ ಪ್ರಾಣವಂತರನ್ನಾಗಿ ವಾಸಮಾಡಿಸುವ ವಾಯುರೂಪನೂ, ಅಂತರಿಕ್ಷದಲ್ಲಿ ಸಂಚರಿಸುವವನೂ, ದೇವತೆಗಳನ್ನು ಯಜ್ಞದಲ್ಲಿ ಆಹ್ವಾನಿಸುವ, ಅಥವಾ ಹೋಮಮಾಡುವ ಋತ್ವಿಕ್ ರೂಪನೂ, ವೇದಿಯಲ್ಲಿ ಗಾರ್ಹಪತ್ಯಾದಿ ಅಗ್ನಿರೂಪದಿಂದ ಇರುವವನೂ, ಅತಿಥಿಯಂತೆ ಪೂಜ್ಯನೂ, ಗೃಹದಲ್ಲಿ ಲೌಕಿಕಾಗ್ನಿ ರೂಪದಿಂದ ವಾಸಿಸುವವನೂ, ಮನುಷ್ಯರಲ್ಲಿ ಚೇತನರೂಪದಿಂದ ವಾಸಿಸುವವನೂ, ಶ್ರೇಷ್ಠವಾದ ಆದಿತ್ಯಮಂಡಲದಲ್ಲಿ ವಾಸಿಸುವವನೂ, ಋತ-ಅಥವಾ ಸತ್ಯರೂಪವಾದ ಯಜ್ಞಕರ್ಮಗಳಲ್ಲಿ ವಾಸಿಸುವವನೂ ಆಕಾಶದಲ್ಲಿ ವಾಸಿಸುವವನೂ, ನೀರಿನಲ್ಲಿ ಉದಯಿಸಿ ಅಭಿವ್ಯಕ್ತಿ ಹೊಂದುವವನೂ ರಶ್ಮಿಸಮೂಹದಲ್ಲಿ ತನ್ಮಯನಾಗಿರುವವನೂ, ಸತ್ಯರೂಪನಾಗಿ ಸರ್ವರಿಗೂ ಕಾಣಿಸುವವನೂ, ಉದಯಾಚಲದಲ್ಲಿ ಹುಟ್ಟುವವನೂ ಆದ ಸೂರ್ಯದೇವನು, ಬೃಹತ್ = ಎಂದರೆ ದೇಶ-ಕಾಲ-ವಸ್ತುಗಳೆಂಬ ಮೂರು ವಿಧದ ಸಂಕೋಚಶೂನ್ಯನಾಗಿ ಮಹತ್ತಾದ, ಋತಂ = ಶಾಶ್ವತವಾದ ಬ್ರಹ್ಮರೂಪನು. || ೧೭ ||

ಹಂಸಃ ಶುಚಿಷತ್ ಎಂಬ ಮಂತ್ರದ ಅರ್ಥವನ್ನು ಉಪನಿಷತ್ತಿನ ಮೂಲವಾಕ್ಯವು ಸಂಗ್ರಹವಾಗಿ ವಿವರಿಸಿ ಇದರ ಉಪಾಸನೆಯ ಫಲವನ್ನು ಬೋಧಿಸುವುದು. ಹಂಸಃ ಎಂಬ ಮಂತ್ರಾದಿ ಭಾಗದಲ್ಲಿರುವ ಎರಡು ವರ್ಣಗಳ ಪದವು ಸೂರ್ಯಪ್ರಭಾಪುಂಜಮಯವಾದ ಸ್ವರೂಪವನ್ನೇ ಧರಿಸಿದ ನೀರಿನಲ್ಲಿ ಹುಟ್ಟುವ, ಕರ್ಮದಲ್ಲಿ ಸನ್ನಿಹಿತವಾದ, ಉದಯಪರ್ವತದಲ್ಲಿ ಕಾಣಿಸುವ, ಸೂರ್ಯ ಬಿಂಬದಲ್ಲಿ ಚೈತನ್ಯರೂಪದಿಂದ ಇರುವ ಶಾಶ್ವತವಾದ ಆತ್ಮನನ್ನು ಬೋಧಿಸುತ್ತದೆ. ಇಂತಹ ಸೂರ್ಯದೇವತಾತ್ಮನನ್ನು ಆ ದೇವತೆಯಲ್ಲಿ ಐಕ್ಯದಿಂದಿರುವ ಸತ್ಯ-ಪ್ರಜ್ಞೆಗಳೆಂಬ ಸ್ವಾಂಶ, ಅಪ್-ಪ್ರಭಾ ಎಂಬ ಭೌತಿಕಾಂಶ, ಉಷಾ-ಸಂಧ್ಯಾ ಎಂಬ ಕಾಲಾಂಶ ಶಕ್ತಿಗಳ ಪುಂಜದಿಂದ ಕೂಡಿರುವಂತೆ ಅನುಸಂಧಾನದಿಂದ ಸೌರಮಂತ್ರವನ್ನು ಪಠಿಸಿ ಉಪಾಸನೆಮಾಡಿದವನು ತನ್ನ ಅಭೀಷ್ಟಫಲವೆಲ್ಲವನ್ನೂ ಹೊಂದುವನು. ಮತ್ತು ಸೂರ್ಯದೇವತೋಪಾಸಕನು ಆ ದೇವಾತಾತ್ಮಭಾವವನ್ನು ಹೊಂದಿ ಆಕಾಶದಲ್ಲಿ ಪರಮತತ್ವರೂಪವಾದ ಸೂರ್ಯಧಾಮದಲ್ಲಿ ತನ್ನ ಅಧಿಕಾರಾವಧಿಯಾಗಿ ವಾಸಮಾಡಿ ಬ್ರಹ್ಮಭಾವವೆಂಬ ಮೋಕ್ಷವನ್ನೂ ಹೊಂದುವನು. || ೧೮ ||

ತ್ರಿಷ್ಟುಪ್ ಛಂದಸ್ಸಿನ ಗಣಾನಾಂತ್ವಾ ಎಂಬ ಮಂತ್ರದಿಂದಲೂ ಹಿಂದೆ ಹೇಳಿರುವಂತೆ ಏಕಾಕ್ಷರ ಮಂತ್ರವಾದ "ಗಂ" ಎಂಬ ಮಂತ್ರ ಪೂರ್ವಕವಾದ ಗಂಗಣೇಶಾಯನಮಃ ಎಂಬ ಮಂತ್ರದಿಂದಲೂ ಗಣೇಶನನ್ನು ಪೂಜಿಸಿ ಗಣೇಶ ದೇವತಾ ಐಕ್ಯವನ್ನು ಹೊಂದುತ್ತಾನೆ. ಯಾವ ದೇವತೆಯನ್ನು ಭಕ್ತಿಯಿಂದ ಯಥಾವಿಧಿಯಾಗಿ ಧ್ಯಾನಿಸಿ ಪೂಜಿಸುವನೋ ಆ ದೇವತೆಯ ತಾದಾತ್ಮ್ಯವೇ ಆ ಉಪಾಸನೆಗೆ ಫಲವಾಗಿ ಪ್ರಾಪ್ತವಾಗುತ್ತದೆಂಬುದು ಉಪಾಸನೆಯಲ್ಲಿ ಸಾಮಾನ್ಯವಾದ ನಿಯಮವು. || ೧೯ ||

ಅಥಗಾಯತ್ರೀ ಸಾವಿತ್ರೀ ಸರಸ್ವತ್ಯಜಪಾ ಮಾತೃಕಾಪ್ರೋಕ್ತಾ ತಯಾಸರ್ವಮಿದಂ ವ್ಯಾಪ್ತಮಿತಿ ॥ ೨೦ ॥

ಐಂ ವಾಗೀಶ್ವರಿವಿದ್ಮಹೇ ಕ್ಲೀಂ ಕಾಮೇಶ್ವರಿ ಧೀಮಹಿ । ಸೌಸ್ತನ್ನಃ ಶಕ್ತಿಃ ಪ್ರಚೋದಯಾತ್ ಇತಿ ಗಾಯತ್ರೀ ಪ್ರಾತಃ ಸಾವಿತ್ರೀ ಮಧ್ಯಂದಿನೇ ಸರಸ್ವತೀಸಾಯಮಿತಿ ನಿರಂತರ ಮಜಪಾ ಹಂಸ ಇತ್ಯೇವ ಮಾತೃಕಾ ಪಂಚಾಶದ್ವರ್ಣ ವಿಗ್ರಹೇಣಾಕಾರಾದಿಕ್ಷಕಾರಾಂತೇನ ವ್ಯಾಪ್ತಾನಿ ಭುವನಾನಿ ಶಾಸ್ತ್ರಾಣಿ ಛಂದಾಂಸೀತ್ಯೇವಂ ಭಗವತೀಸರ್ವಂವ್ಯಾಪ್ನೋತೀತ್ಯೇವ ತಸ್ಯೈ ವೈನಮೋನಮ ಇತಿ ॥ ೨೧ ॥

ತಾನ್ ಭಗವಾನ್ ಅಬ್ರವೀದೇತೈರ್ಮಂತ್ರೈ ರ್ನಿತ್ಯಂದೇವೀಂಸ್ತೌತಿ ಸಸರ್ವಂಪಶ್ಯತಿ ಸೋಽಮೃತತ್ವಂ ಚ ಗಚ್ಛತಿ ಯ ಏವಂ ವೇದೇತ್ಯುಪನಿಷತ್ ॥ ೨೨ ॥

॥ ಇತಿ ಚತುರ್ಥೋಽಪನಿಷತ್ ॥

ಈ ಎಲ್ಲ ಶೈವ, ವೈಷ್ಣವ, ಸೌರ, ಗಾಣೇಶ ಮಂತ್ರಗಳಿಂದ ಆಯಾಯ ದೇವರನ್ನು ಪೂಜಿಸಿದರೂ ಅಲ್ಲಲ್ಲಿ ಅಸಾಧಾರಣ ಶಕ್ತಿರೂಪದಿಂದಲೂ ಶಕ್ತಿಮತ್ತಾದ ರೂಪದಿಂದಲೂ ಭಗವತೀ ದೇವಿಯೇ ವ್ಯಾಪಿಸಿರುವುದರಿಂದ ದೇವಿಯ ಉಪಾಸನೆಯನ್ನೇ ನಡೆಸಿದಂತಾಗುವುದು. ಆ ದೇವಿಯು ಒಬ್ಬಳೇ ಗಾಯತ್ರೀ, ಸಾವಿತ್ರೀ, ಸರಸ್ವತೀ, ಅಜಪಾ, ಮಾತೃಕಾ ಮುಂತಾದ ಹಲವಾರು ನಾಮ, ಮತ್ತು ತತ್ಪ್ರತಿಪಾದ್ಯವಾದ ರೂಪಭೇದಗಳನ್ನು ಕಲ್ಪನಾ ದೃಷ್ಟಿಯಿಂದ ಹೊಂದಿರುವಳು. ಮತ್ತು ನಾನಾ ರೂಪಗಳಿಂದ ನಿಖಿಲ ಜಗತ್ತನ್ನೇ ವ್ಯಾಪಿಸಿರುವಳು. ॥ ೨೦ ॥

ಐಂ ವಾಗೀಶ್ವರಿ ಎಂಬುದು ಶಕ್ತಿಗಾಯತ್ರೀ ಮಂತ್ರವು. ಇದರಲ್ಲಿ ಮೂರು ಪಾದಗಳಲ್ಲಿ ಕ್ರಮವಾಗಿ ಐಂ, ಕ್ಲೀಂ, ಸೌಃ ಎಂಬ ಬೀಜಾಕ್ಷರಗಳು ಪ್ರತ್ಯೇಕವಾಗಿ ಸೇರಿಕೊಂಡಿವೆ. ವಾಗೀಶ್ವರಿ, ಕಾಮೇಶ್ವರೀ ಎಂಬುವು ದೇವಿಯ ಹೆಸರುಗಳು. ಅವುಗಳಿಂದ ದೇವಿಯನ್ನು ಸಂಬೋಧಿಸಿ ದೇವಿಯೇ ನಿನ್ನ ಸ್ವರೂಪವನ್ನು ಶಾಸ್ತ್ರಪ್ರಮಾಣದಿಂದ ಅರಿಯುವೆವು ಮತ್ತು ಅದರಂತೆ ಧ್ಯಾನಿಸುವೆವು. ಅಂತಹ ಜ್ಞಾನ-ಧ್ಯಾನಗಳಲ್ಲಿ ನಮ್ಮನ್ನು ಶಕ್ತಿದೇವತೆಯು ಪ್ರೇರೇಪಿಸಲಿ ಎಂದು ಗಾಯತ್ರೀ ಮಂತ್ರಾರ್ಥವು. ಈ ಮಂತ್ರ ಪ್ರತಿಪಾದ್ಯಳಾದ ಶಕ್ತಿದೇವಿಯೇ ಪ್ರಾತಃಕಾಲದಲ್ಲಿ ಗಾಯತ್ರೀ ರೂಪದಿಂದಲೂ ಮಧ್ಯಾಹ್ನಕಾಲದಲ್ಲಿ ಸಾವಿತ್ರೀರೂಪದಿಂದಲೂ, ಸಾಯಂಕಾಲದಲ್ಲಿ ಸರಸ್ವತೀರೂಪದಿಂದಲೂ ಸರ್ವಕಾಲಗಳಲ್ಲಿಯೂ ಅಜಪಾದೇವಿಯ ರೂಪದಿಂದಲೂ ಇರುವಳಲ್ಲದೇ ಮಾತೃಕಾರೂಪಿಣಿಯೂ ಆಗಿರುವಳು. ಮಾತೃಕಾ ಎಂದರೆ ವರ್ಣಮಾಲೆಯು. "ಹಂಸ" ಎಂಬ ಪರಮಾತ್ಮಬೋಧಕವಾದ ಪದದಲ್ಲಿರುವ ಹ-ಸಕಾರಗಳು ವರ್ಣಮಾಲೆಯಲ್ಲಿ ಅತ್ಯುತ್ತಮವಾದುವು. ಅವುಗಳನ್ನು ಗ್ರಹಿಸಿದ್ದರಿಂದ ಅಕಾರ ಮೊದಲಾದ ಕ್ಷಕಾರದವರೆಗಿನ ಪೂರ್ತಿ ವರ್ಣಗಳನ್ನು ಗ್ರಹಿಸಿದಂತಾಗುವುದರಿಂದ ಅಂತಹ ವರ್ಣಮಯವಾದ ಮೂರ್ತಿಯಿಂದ ನಿಖಿಲಭುವನಗಳೂ ಶಾಸ್ತ್ರಗಳೂ ವೇದಗಳೂ ವ್ಯಾಪಿಸಲ್ಪಟ್ಟಿವೆ. ಭಗವತೀ ದೇವಿಯು ಈ ಎಲ್ಲವನ್ನೂ ವ್ಯಾಪಿಸಿರುವಳು. ಆ ಭಗವತಿಗೆ ಪುನಃ ಪುನಃ ನಮಸ್ಕಾರವು. ॥ ೨೧ ॥

ಇದುವರೆಗೆ ದೇವತೆಗಳು ಪ್ರಶ್ನಿಸಿದ ವಿಷಯಗಳನ್ನು ಯಥಾವತ್ತಾಗಿ ವಿವರಣೆಯಿಂದುಪದೇಶಿಸಿ ಭಗವಂತನು ಉಪದೇಶವನ್ನು ಭಕ್ತಿಯಿಂದ ಗ್ರಹಿಸಿದ ಶಿಷ್ಯಭೂತರಾದ ದೇವತೆಗಳನ್ನು ಕುರಿತು ಈ ರೀತಿಯಾಗಿ ಹೇಳಿದನು :—ಈ ಮೇಲೆ ಹೇಳಿದ ಮಂತ್ರಗಳಿಂದ ಪ್ರತಿನಿತ್ಯವೂ ದೇವಿಯನ್ನು ಯಾರು ಸ್ತುತಿಸುವನೋ ಅವನು ಪರಮಾತ್ಮಜ್ಞಾನವನ್ನು ಹೊಂದಿ ಸರ್ವಜ್ಞನಾದ್ದರಿಂದ ಸರ್ವವನ್ನೂ ಸಾಕ್ಷಾತ್ಕರಿಸಿ ಅಮೃತತ್ವವೆಂಬ ಮರಣ ಧರ್ಮಾತೀತವಾದ ಮೋಕ್ಷವನ್ನೂ ಹೊಂದುತ್ತಾನೆ. ಮೇಲೆ ಹೇಳಿರುವ ದೇವೀಮಂತ್ರ ಪ್ರಭಾವಗಳನ್ನರಿತವನೂ ಮಹಾಫಲಭಾಗಿಯಾಗುತ್ತಾನೆ. ॥ ೨೨ ॥

ಚತುರ್ಥೋಪನಿಷತ್ತಿನ ಅನುವಾದವು ಮುಗಿದುದು.

॥ ಶ್ರೀರಸ್ತು ॥

# ॥ ಪಂಚಮೋಪನಿಷತ್ ॥

---

ದೇವಾ ಹ ವೈ ಭಗವಂತಮಬ್ರುವನ್ ಸ್ವಾಮಿನ್ನಃ ಕಥಿತಂ ಸ್ಫುಟಂ ಕ್ರಿಯಾಕಾಂಡಂ ಸವಿಷಯಂ ತ್ರೈಪುರಮಿತಿ। ಅಥಪರಮಂ ನಿರ್ವಿಶೇಷಂ ಕಥಯಸ್ವೇತಿ ॥ ೧ ॥

ತಾನ್ ಹೋವಾಚ ಭಗವಾನ್ ತುರೀಯಯಾಮಾಯಯಾಽಂತ್ಯಯಾ ನಿರ್ದಿಷ್ಟಂಪರಮಂ ಬ್ರಹ್ಮೇತಿ ಪರಮಪುರುಷಂ ಚಿದ್ರೂಪಂ ಪರಮಾತ್ಮೇತಿ। ಶ್ರೋತಾಮಂತಾದ್ರಷ್ಟಾಽದೇಷ್ಟಾಸ್ಪ್ರಷ್ಟಾಽಘೋಷ್ಟಾ ವಿಜ್ಞಾತಾ ಪ್ರಜ್ಞಾತಾ ಸರ್ವೇಷಾಂಪುರುಷಾಣಾಮಂತಃ ಪುರುಷಃ ಸ ಆತ್ಮಾ ಸವಿಜ್ಞೇಯ ಇತಿ ॥ ೨ ॥

ನತತ್ರ ಲೋಕಾಲೋಕಾಃ ನತತ್ರದೇವಾದೇವಾಃ ಪಶವೋಽಪಶವಸ್ತಾಪಸೋನತಾಪಸಃ ಪೌಲ್ಕಸೋನ ಪೌಲ್ಕಸೋವಿಪ್ರಾನವಿಪ್ರಾಃ ॥ ಸ ಇತ್ಯೇಕಮೇವ ಪರಂ ಬ್ರಹ್ಮ ವಿಭ್ರಾಜತಿ ನಿರ್ವಾಣಮ್ । ನತತ್ರ ದೇವಾ ಋಷಯಃ ಪಿತರಈಶತೇಪ್ರತಿಬುದ್ಧಃಸರ್ವವಿದ್ಯೇತಿ ॥ ೩ ॥

|| ಶ್ರೀ ||

# ಪಂಚನೋಪನಿಷತ್ತಿನ ಕನ್ನಡ ಅನುವಾದವು.

---

ದೇವೀತತ್ತ್ವಾಮೃತ ಶ್ರವಣಾಸ್ವಾದದಿಂದ ತೃಪ್ತರಾಗದ ದೇವತೆಗಳು ಇನ್ನೂ ಹೆಚ್ಚಾಗಿ ತಿಳಿಯುವ ಕುತೂಹಲದಿಂದ ಭಗವಂತನನ್ನು ಕುರಿತು ಸ್ವಾಮಿ :—ನಿನ್ನಿಂದ ಈ ವರೆಗೆ ತ್ರಿಪುರಾದೇವಿಯ ಉಪಾಸನಾದಿ ತತ್ತ್ವವನ್ನು ವಿಷಯೀಕರಿಸಿರುವ ಕ್ರಿಯಾಕಾಂಡವು ಸ್ಫುಟವಾಗಿ ಹೇಳಲ್ಪಟ್ಟಿತು. ಇದನ್ನು ಶ್ರವಣಮಾಡಿ ಉಪಾಸನಾದಿ ಕ್ರಿಯೆಯಲ್ಲಿ ಪ್ರವರ್ತಿಸಿ ಸಗುಣೋಪಾಸನೆಯನ್ನು ಮಾಡಿ ತತ್ಫಲವನ್ನು ಯಥಾಕಾಮವಾಗಿ ಅನುಭವಿಸಬಹುದಾದರೂ ಮುಖ್ಯವಾದ ಪುನರಾವೃತ್ತಿ ಶೂನ್ಯವಾದ ಮೋಕ್ಷವನ್ನು ಹೊಂದುವ ಆಶೆಯು ಇದರಿಂದ ಈಡೇರಲಾಗದು. ನಮಗೆ ಮೋಕ್ಷೋಪಾಯದ ಜಿಜ್ಞಾಸೆಯು ಪ್ರಬಲವಾಗಿದೆ. ಆದ್ದರಿಂದ ಶ್ರೇಷ್ಠವಾದ ನಿರ್ವಿಶೇಷ ಬ್ರಹ್ಮವಸ್ತುವನ್ನು ಹೇಳಿ ನಿರ್ವಿಶೇಷಜ್ಞಾನವನ್ನು ನಮಗೆ ದಾನಮಾಡಿ ಧನ್ಯರನ್ನಾಗಿ ಮಾಡಬೇಕೆಂದು ಪ್ರಶ್ನೆ ಮಾಡಿದರು. || ೧ ||

ಈ ಪ್ರಶ್ನೆಗೆ ಭಗವಂತನು ಈ ರೀತಿ ಉತ್ತರವನ್ನು ಉಪದೇಶಿಸಿದನು. ಮಾಯೆಯೆಂದರೆ ಜ್ಞಾನವೆಂದು ಅರ್ಥ. ಶ್ರವಣ, ಮನನ, ನಿದಿಧ್ಯಾಸನಗಳಿಂದ ಆಗುವ ಬ್ರಹ್ಮಜ್ಞಾನಗಳಿಗಿಂತಲೂ ಯಾವ ವಿಧದ ಅಸಂಭಾವನಾಶಂಕೆಗಳೂ ಇಲ್ಲದೆ ಕಡೆಯದಾಗಿ ಉಂಟಾಗುವ ನಾಲ್ಕನೆಯ ಬ್ರಹ್ಮಾನುಭವದಿಂದ ಸ್ಫುರಿಸುವ ಪರಮಾತ್ಮನೇ ಚಿದ್ರೂಪವೂ ಪರಮಪುರುಷರೂಪವೂ ಆದ ಪರಬ್ರಹ್ಮ ಜಿಜ್ಞಾಸೆಯಿಂದ ಕೇಳಬೇಕೆಂದಿರುವ ವಸ್ತುವೂ ಆಗಿದೆ. ಈ ಬ್ರಹ್ಮವಸ್ತುವು ಸಕಲ ಪುರುಷರ ಹೃದಯದಲ್ಲಿ ವಾಸಿಸಿ ಅಲ್ಲಿರುವ ಮನವೆಂಬ ಉಪಾಧಿಯವಶದಿಂದ ತಾನು ಪುರುಷನು ಎಂದೆನಿಸುತ್ತಾ ಶ್ರವಣ, ಮನನ, ದರ್ಶನ, ಆದೇಶ-ಅಪ್ಪಣೆ, ಸ್ಪರ್ಶನ, ಆಘೋಷಣ-ಕೂಗುವದು, ವಿಜ್ಞಾನ, ಪ್ರಜ್ಞಾನಗಳೆಂಬ ವಿವಿಧವಾದ ಇಂದ್ರಿಯಾಧೀನವಾದ ಕ್ರಿಯೆಗಳನ್ನು ಇಂದ್ರಿಯಗಳೆಂಬ ಉಪಾಧಿಯತಾದಾತ್ಮ್ಯ ಭ್ರಾಂತಿಯಿಂದ ತನ್ನಲ್ಲಿ ಅಭಿಮಾನಿಸುತ್ತಾ ಇರುವುದು. ಇಂತಹ ವಸ್ತುವನ್ನು ಉಪಾಧಿಸಂಪರ್ಕದಿಂದ ಶೋಧಿಸಿ ಆರೋಪಿತ ಧರ್ಮಗಳನ್ನು ದೂರಮಾಡಿ ಶುದ್ಧತತ್ತ್ವವನ್ನು ತನ್ನ ಆತ್ಮವೆಂದು ತಿಳಿಯಬೇಕು. || ೨ ||

ಇಂತಹ ನಿರ್ವಿಶೇಷ ಬ್ರಹ್ಮಜ್ಞಾನವು ಅನುಭವರೂಪವಾಗಿ ಬಂದ ತರುವಾಯ ಅದುವರೆಗೆ ಸಂತತವಾಗಿ ಬಂದಿರುವ ಲೋಕ-ವೇದ ಮುಂತಾದ ಪಂಗಡವೂ ತದ್ವಿರುದ್ಧವಾದ ಅಲೋಕ ಅದೇವ ಮುಂತಾದ ಪಂಗಡವೂ ಲಯಿಸಿ ಹೋಗುವುದು. ವರ್ಣ-ಆಶ್ರಮ ಮುಂತಾದ ಅಧ್ಯಾಸಗಳೆಲ್ಲವೂ ಬಾಹ್ಯವಸ್ತುಗಳೊಡನೆ ಅದೃಶ್ಯ

ತತ್ರೈತೇ ಶ್ಲೋಕಾ ಭವಂತಿ :—

ಅತೋನಿರ್ವಿಷಯಂ ನಿತ್ಯಂ ಮನಃ ಕಾರ್ಯಂಮುಮುಕ್ಷುಣಾ ।
ಯತೋನಿರ್ವಿಷಯೋ ನಾಮ ಮನಸೊಮುಕ್ತಿರಿಷ್ಯತೇ ॥ ೪ ॥

ಮನೋ ಹಿ ದ್ವಿವಿಧಂ ಪ್ರೋಕ್ತಂ ಶುದ್ಧಂಚಾಶುದ್ಧ ಮೇವ ಚ
ಅಶುದ್ಧಂ ಕಾಮ ಸಂಕಲ್ಪಂ ಶುದ್ಧಂ ಕಾಮವಿವರ್ಜಿತಮ್ ॥ ೫ ॥

ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।
ಬಂಧನಂ ವಿಷಯಾಸಕ್ತಿಃ ಮುಕ್ತ್ಯೈನಿರ್ವಿಷಯಂ ಮನಃ ॥ ೬ ॥

ವಾದ್ದರಿಂದ ತತ್ಪ್ರಯುಕ್ತವಾದ ವಿಭೇದ ಬುದ್ಧಿಯು ಅಸ್ತವಾಗುವುದು. ಆದುದರಿಂದ ಲೋಕಗಳು ಲೋಕವಲ್ಲ. ದೇವತೆಗಳು ದೇವತೆಗಳಲ್ಲ, ಪಶುಗಳು ಪಶುಗಳಲ್ಲ, ತಪಸ್ವಿಯು ತಪಸ್ವಿಯಲ್ಲ, ಚಂಡಾಲನು ಚಂಡಾಲನಲ್ಲ, ಬ್ರಾಹ್ಮಣನು ಬ್ರಾಹ್ಮಣನಲ್ಲ. ಹೀಗೆ ಈ ತತ್ವಜ್ಞಾನ ಬರುವವರೆಗೆ ಯಾವ ವಿಭಾಗ ಬುದ್ಧಿಯಿತ್ತೋ ಯಾವ ಹಿರಿದು ಕಿರಿದೆಂಬ ಬುದ್ಧಿಯಿತ್ತೋ ಉತ್ತಮ ಅಧಮ ಬುದ್ಧಿಯಿತ್ತೋ ಆ ಬುದ್ಧಿಗಳೆಲ್ಲವೂ ಭೇದವೆಲ್ಲವೂ ಉಪಾಧಿಕೃತವಾಗಿ ಉಪಾಧಿ ಧರ್ಮವು ಆತನಲ್ಲಿ ನಿಜವಾಗಿ ಸಂಗವುಳ್ಳ ದಲ್ಲವಾದ್ದರಿಂದ ಆಬ್ರಹ್ಮಸ್ತಂಬಪರ್ಯಂತ ಸಕಲರಲ್ಲಿಯೂ ಇರುವ ಆತ್ಮನು ನಿರ್ವಿ ಕಾರನೂ ಸತ್ಯಭೂತನೂ ಅದ್ವಿತೀಯನೂ ಆಗಿರುವನು. ಅವನೇ ನಿರ್ವಾಣ ಅಥವಾ ಮೋಕ್ಷರೂಪದಿಂದ ಪ್ರಕಾಶಿಸುವನು, ವ್ಯವಹಾರದಶೆಯಲ್ಲಿ ದ್ವೈತಸಾಮ್ರಾಜ್ಯದಲ್ಲಿ ವಾಸಿಸುವಾಗ ದೇವತೆಗಳು ಋಷಿಗಳು ಪಿತೃದೇವರು ಇವರೆಲ್ಲ ಮಾನವನಿಗೆ ವಿವಿಧ ಪೂಜಾ ಸತ್ಕಾರಗಳಿಂದ ಪೂಜ್ಯರಾಗಿ ತಮ್ಮ ಪ್ರಸಾದಾನುಸಾರವಾಗಿ ಫಲವನ್ನು ಕೊಡುತ್ತಾ ಹೇಗೆ ನಿಯಾಮಕತ್ವವನ್ನು ಹೊಂದಿದ್ದರೋ ಆ ವಿಧದ ನಿಯಾಮಕತ್ವವು ಬ್ರಹ್ಮಜ್ಞಾನಿಗಳ ಮೇಲೆ ಅವರಿಗೆಲ್ಲ ಇಲ್ಲವು, ದೇವಾದಿಗಳಿಗೂ ಜ್ಞಾನಿಗೂ ಪರ ಬ್ರಹ್ಮವೇ ಆತ್ಮಭೂತವಾದ್ದರಿಂದ ದ್ವೈತಮೂಲಕವಾದ ಯಾವ ಸಂಬಂಧಕ್ಕೂ ಅವಕಾಶವಿಲ್ಲ. || ೩ ||

ಹಿಂದೆ ಹೇಳಿರುವ ಅರ್ಥವನ್ನು ಸಮರ್ಥಿಸುವ ಪ್ರಮಾಣ ಭೂತವಾದ ಶ್ಲೋಕಗಳು ಈ ರೀತಿಯಾಗಿ ಅನೇಕವಾಗಿವೆ—ಮನಸ್ಸು ತನ್ನ ಪೂರ್ವ ಸಂಸ್ಕಾರ ವಶದಿಂದ ಉಂಟಾದ ಇಷ್ಟ, ಅನಿಷ್ಟಗಳೆಂಬ ಭೇದಭಾವನೆಯಿಂದ ಹುಟ್ಟಿದ ರಾಗ ದ್ವೇಷ ವಶವಾಗಿ ಅನೇಕ ವಿಷಯಗಳನ್ನು ಗ್ರಹಿಸುತ್ತಾ ತ್ಯಜಿಸುತ್ತಾ ಇರುವುದು. ಈ ರೀತಿಯಾಗಿ ಉಪಾದೇಯ ಹೇಯಗಳೆಂದಿರುವ ವಿಷಯಗಳ ಬಂಧನವು ಮನಸ್ಸಿಗೆ ಇರುವುದೇ ಪುರುಷನ ಬದ್ಧಾವಸ್ಥೆಯು. ಈ ಅವಸ್ಥೆಯಿಂದಲೇ ಪ್ರಾಣಿಯು ನಾನಾ ವಿಧದ ಕಷ್ಟಗಳನ್ನು ಅನುಭವಿಸುತ್ತಾ ಪಾರವಿಲ್ಲದ ದುಃಖಾರ್ಣವದಲ್ಲಿ ಮುಳುಗಿ ದಂತಾಗಿ ಬೇಸರಗೊಳ್ಳುತ್ತಾನೆ. ಯಾವದಾದರೊಂದು ವಿಷಯ ಸುಖವನ್ನು ಅನುಭವಿಸಿದರೂ ಕೂಡ ಆ ಸುಖವೂ ದುಃಖವೇ ಆಗಿರುವುದು. ವಿಷಯ ಸುಖದಲ್ಲಿ ಅನಿತ್ಯತ್ವವೂ ತಾರತಮ್ಯವೂ ತಪ್ಪಿದ್ದಲ್ಲ. ಆದುದರಿಂದ ಅಂತಹ ವಿಷಯಗಳನ್ನು ಮುಮುಕ್ಷುವು (ರಸ) ಇಚ್ಛಾಸಹಿತವಾಗಿ ಪರಿತ್ಯಜಿಸಬೇಕು. || ೪ ||

ನಾನಾ ವಿಧದ ಕಾಮ ಸಂಕಲ್ಪಗಳಿಂದ ತುಂಬಿದ ಮನಸ್ಸು ಅಶುದ್ಧವೆಂದೂ ಕಾಮಸಂಕಲ್ಪಗಳೆಂಬ ಕಶ್ಮಲ ರಹಿತವಾದ ಮನಸ್ಸು ಶುದ್ಧವೆಂದೂ ಮನಸ್ಸನ್ನು ತತ್ತ್ವವೇತ್ತರು ಎರಡು ವಿಧವಾಗಿ ವಿಂಗಡಿಸಿರುತ್ತಾರೆ. || ೫ ||

ಮನುಷ್ಯರಿಗೆ ಮನಸ್ಸು ಎಂಬುವುದೇ ತನ್ನ ಅವಸ್ಥಾಭೇದದಿಂದ ಬಂಧ ಮೋಕ್ಷಗಳನ್ನುಂಟುಮಾಡುವ ಕಾರಣವು. ವಿಷಯಗಳಲ್ಲಿ ಆಸಕ್ತಿಯನ್ನು ಹೊಂದಿದ

ನಿರಸ್ತ ವಿಷಯಾಸಂಗಂ ಸಂನಿರುದ್ಧಂ ಮನೋಹೃದಿ ।
ಯದಾಯಾತ್ಯಮನೀಭಾವ ಸ್ತದಾತತ್ಪರಮಂಪದಮ್ ॥ ೭ ॥

ತಾವದೇವ ನಿರೋದ್ಧವ್ಯಂ ಯಾವದ್ಧೃದಿಗತಂಕ್ಷಯಮ್ ।
ಏತಜ್ಜ್ಞಾನಂ ಚ ಧ್ಯಾನಂಚ ಶೇಷೋಽನ್ಯೋಗ್ರಂಥವಿಸ್ತರಃ ॥ ೮ ॥

ನೈವ ಚಿಂತ್ಯಂ ನಚಾಚಿಂತ್ಯಂ ನಚಿಂತ್ಯಂ ಚಿಂತ್ಯಮೇವಚ ।
ಪಕ್ಷಪಾತವಿನಿರ್ಮುಕ್ತಂ ಬ್ರಹ್ಮಸಂಪದ್ಯತೇ ಧ್ರುವಮ್ ॥ ೯ ॥

ಮನಸ್ಸು ಬಂಧಕ್ಕೆ ಕಾರಣವು. ವಿಷಯಗಳಲ್ಲಿ ಆಸಕ್ತಿಯಿಲ್ಲದ ಮನಸ್ಸು ಮುಕ್ತಿಯನ್ನು ಕೊಡುವುದು. ವಿವೇಕಿಯು ಮೋಕ್ಷಪ್ರದವಾದ ವಿಷಯಪರಿತ್ಯಾಗವನ್ನು ಮಾಡಿ ಮನಸ್ಸನ್ನು ಶುದ್ಧಿಪಡಿಸಿ ನಿರ್ವಿಷಯ ಮನಸ್ಸೆಂಬ ಕಾರಣದಿಂದ ಮುಕ್ತಿಯನ್ನು ಆರ್ಜಿಸುವುದು ಅಗತ್ಯವು. || ೬ ||

ಮನಸ್ಸು ಎಂದರೆ ಅಂತಃಕರಣವು. ಇದು ಸಾಕ್ಷಾತ್ತಾಗಿಯೂ ಬಾಹ್ಯ ಇಂದ್ರಿಯಗಳ ಮೂಲಕವೂ ವಿಷಯಗಳನ್ನು ಗ್ರಹಿಸುವಸಾಧನವು. ಇದು ವಿಷಯಗಳನ್ನು ಗ್ರಹಿಸಿ ಮನನವಮಾಡುವ ಶಕ್ತಿಯುಳ್ಳದ್ದು. ಆದುದರಿಂದ ಮನಸ್ಸು ಎಂಬ ಹೆಸರು ಬಂದಿದೆ. ಇದಕ್ಕೆ ಸ್ವಭಾವಸಿದ್ಧವಾದ ವಿಷಯಾಸಕ್ತಿಯನ್ನು ವೈರಾಗ್ಯದಿಂದ ನಿರೋಧಿಸಿ ತನ್ನ ಕೆಲಸಮಾಡಲು ಅವಕಾಶವಿಲ್ಲದ ಹಾಗೆ ಸ್ಥಿರವಾಗಿ ಹೃದಯ ದೇಶದಲ್ಲಿ ತಡೆದರೆ ಆ ಮನಸ್ಸು ತನ್ನ ಮನಸ್ತ್ವ ಧರ್ಮವನ್ನು ಬಿಟ್ಟಂತಾಗುವುದು. ಆಗ ಪರಮವೂ ದುರ್ಲಭವೂ ಆದ ಒಂದು ಮೋಕ್ಷಸಾಮಗ್ರಿಯು ಸಿದ್ಧವಾದುದರಿಂದ ಪರಮಪದವೆಂಬ ಮೋಕ್ಷವು ಕರಗತವಾದಂತೆಯೇ ಆಗುವುದು. || ೭ ||

ಹೀಗೆ ನಿರುದ್ಧವಾದ ಮನಸ್ಸು ವಿಷಯಗಳ ಗ್ರಹಣಮನನಗಳೆಂಬ ತನ್ನ ವೃತ್ತಿಗಳನ್ನು ಹೊಂದದೇ ಕ್ಷಯಿಸುವಷ್ಟರವರೆಗೆ ಅದನ್ನು ನಿರೋಧಿಸಬೇಕು. ಮೋಕ್ಷವೆಂಬ ಪುರುಷಾರ್ಥದ ಉಪಾಯವನ್ನೇ ತೋರಿಸಲು ಹೊರಟ ಸಮಸ್ತ ಗ್ರಂಥಗಳೂ ಜ್ಞಾನ-ಧ್ಯಾನ ಮುಂತಾದ ಮೋಕ್ಷಸಾಧನಗಳನ್ನೇ ಬೋಧಿಸುವುದರ ಮೂಲಕ ಸಂಕ್ಷೇಪವಾಗಿ ಮನೋನಿರೋಧವನ್ನೇ ಕರ್ತವ್ಯವನ್ನಾಗಿ ಬೋಧಿಸುವುವು. ಇದಾದರೆ ಮನಸ್ಸಿನ ಏಕಾಗ್ರತೆಯಿಂದ ಲಭ್ಯವಾದ ಧ್ಯಾನವೂ ಧ್ಯಾನೋಪಾಸನೆಗಳಿಂದ ಶುದ್ಧವಾದ ತತ್ತ್ವಜ್ಞಾನವೂ ಅವಶ್ಯವಾಗಿ ದೊರೆಯುವುದರಿಂದ ಜ್ಞಾನ ಧ್ಯಾನಗಳೆಂಬ ಮೋಕ್ಷೋಪಾಯಗಳೆಲ್ಲವೂ ಮನೋನಿರೋಧವೇ ಆಗಿರುವುದು. ಇತರ ಗ್ರಂಥಗಳಿಂದ ಪ್ರತಿಪಾದಿಸುವದೆಲ್ಲ ಇದರ ಪ್ರಪಂಚನವೇ ಹೊರತು ಅಪೂರ್ವ ತತ್ತ್ವವೇನೂ ಇರುವುದಿಲ್ಲ. || ೮ ||

ಪ್ರತಿಯೊಂದು ವಸ್ತುವು ಚಿಂತ್ಯ-ಅಚಿಂತ್ಯ-ಚಿಂತ್ಯಾಚಿಂತ್ಯಗಳೆಂಬ ಪಕ್ಷಗಳಲ್ಲಿ ಯಾವುದಾದರೂ ಒಂದು ಪಕ್ಷಕ್ಕೆ ಹೊಂದಿಕೆಯಾಗಿರುವುದು. ಬ್ರಹ್ಮವಸ್ತುವು ಮನಸ್ಸಿಗೆ ಅಗೋಚರವಾದ್ದರಿಂದ ಚಿಂತ್ಯವಲ್ಲವು. ಚಿಂತನೀಯ ವಸ್ತುಗಳ ಸ್ವರೂಪವೆಲ್ಲವೂ ಬ್ರಹ್ಮವೇ ಆಗಿರುತ್ತೆ. ಆದುದರಿಂದ ಅಚಿಂತ್ಯವೂ ಅಲ್ಲ. ಚಿಂತ್ಯಾಚಿಂತ್ಯವೆಂಬ ಪಕ್ಷವು ಪರಸ್ಪರ ವಿರುದ್ಧವಾದುದಾದ್ದರಿಂದ ಆ ಪಕ್ಷದಲ್ಲಿಯೂ ಬ್ರಹ್ಮವಸ್ತುವು ನಿಲ್ಲುವುದಿಲ್ಲ. ಹಾಗೆ ಯಾವುದೊಂದು ಕೋಟಿಯಲ್ಲಿಯೂ ಸಿಲುಕದಿರುವುದರಿಂದ ಪಕ್ಷಪಾತವಿನಿರ್ಮುಕ್ತವಾದ ನಿರ್ವಿಶೇಷವಾದ ಸ್ಥಿತಿಯು ಬ್ರಹ್ಮವಸ್ತುವಿಗೆ ಪಾರಮಾರ್ಥಿಕವಾದುದು. ಮತ್ತು ಸಂಸಾರದಲ್ಲಿರುವ ಪ್ರತಿಯೊಂದು ವ್ಯಾಕೃತ ಅವ್ಯಾಕೃತ ವಸ್ತುಗಳಿಗಿಂತಲೂ ವಿಲಕ್ಷಣವಾದುದು. ಬ್ರಹ್ಮಜ್ಞಾನಿಯು ಇಂತಹ ಬ್ರಹ್ಮಾಭೇದವನ್ನೇ ಹೊಂದುವನು. || ೯ ||

ಸ್ವರೇಣ ಸಲ್ಲಯೇದ್ಯೋಗೀ ಸ್ವರಂ ಸಂಭಾವಯೇತ್ ಪರಂ ।
ಅಸ್ವರೇಣತು ಭಾವೇನ ನಭಾವೋ ಭಾವ ಇಷ್ಯತೇ ॥ ೧೦ ॥

ತದೇವ ನಿಷ್ಕಲಂ ಬ್ರಹ್ಮ ನಿರ್ವಿಕಲ್ಪಂ ನಿರಂಜನಮ್ ।
ತದ್ಬ್ರಹ್ಮಾಹಮಿತಿಜ್ಞಾತ್ವಾ ಬ್ರಹ್ಮಸಂಪದ್ಯತೇಕ್ರಮಾತ್ ॥ ೧೧ ॥

ನಿರ್ವಿಕಲ್ಪಮನಂತಂಚ ಹೇತು ದೃಷ್ಟಾಂತ ವರ್ಜಿತಮ್ ।
ಅಪ್ರಮೇಯ ಮನಾದ್ಯಂಚ ಯಜ್ಜ್ಞಾತ್ವಾ ಮುಚ್ಯತೇಬುಧಃ ॥ ೧೨ ॥

ನನಿರೋಧೋನಚೋತ್ಪತ್ತಿ ರ್ನಬದ್ಧೋನಚಸಾಧಕಃ ।
ನ ಮುಮುಕ್ಷುರ್ನವೈಮುಕ್ತ ಇತ್ಯೇಷಾಪರಮಾರ್ಥತಾ ॥ ೧೩ ॥

ಏಕ ಏವಾತ್ಮಾಮಂತವ್ಯೋ ಜಾಗ್ರತ್ಸ್ವಪ್ನ ಸುಷುಪ್ತಿಷು ।
ಸ್ಥಾನತ್ರಯವ್ಯತೀತಸ್ಯ ಪುನರ್ಜನ್ಮ ನ ವಿದ್ಯತೇ ॥ ೧೪ ॥

ಹೀಗೆ ಬ್ರಹ್ಮಭಾವವನ್ನು ಹೊಂದಲು ಮುಮುಕ್ಷುವು ಮೊದಲು ಸವಿಶೇಷ ಬ್ರಹ್ಮೋಪಾಸನೆಯನ್ನಾಚರಿಸಬೇಕು. ಓಂಕಾರವೆಂಬ ಪ್ರತೀಕದಲ್ಲಿ ಬ್ರಹ್ಮೋಪಾಸನೆಯನ್ನು ಮಾಡಿ ಪ್ರತಿಯೊಂದು ದೃಶ್ಯ ಪ್ರಪಂಚವನ್ನೂ ಪ್ರವಿಲಾಪನಮಾಡಬೇಕು. ಎಂದರೆ ಸ್ಥೂಲಪ್ರಪಂಚವು ಸೂಕ್ಷ್ಮಪ್ರಪಂಚದಲ್ಲಿ ಅಂತರ್ಗತವಾದುದು, ಸೂಕ್ಷ್ಮಕ್ಕೆ ಅತಿರಿಕ್ತವಾಗಿಲ್ಲವೆಂದು ಭಾವಿಸಿದರೆ ಸ್ಥೂಲಪ್ರವಿಲಾಪನವಾಗುತ್ತದೆ. ಸೂಕ್ಷ್ಮವು ಕಾರಣಾತಿರಿಕ್ತವಾಗಿಲ್ಲವೆಂಬ ಭಾವನೆಯು ಸೂಕ್ಷ್ಮಪ್ರವಿಲಾಪನವು. ಕಾರಣಕ್ಕೆ ಇದೇ ರೀತಿ ತುರೀಯದಲ್ಲಿ ಪ್ರವಿಲಾಪನವು. ಹೀಗೆ ಯೋಗಿಯು ದೃಶ್ಯಪ್ರವಿಲಯವನ್ನು ಮಾಡುವುದಕ್ಕಾಗಿ ಓಂಕಾರಧ್ಯಾನವನ್ನು ಮಾಡಬೇಕು. ಹೀಗೆ ಓಂಕಾರಾವಲಂಬನದಿಂದ ಮಾಡುವ ಧ್ಯಾನವು ಸವಿಶೇಷ ವಸ್ತುವಿನ ಅನುಸಂಧಾನವಾಗುವುದು. ಓಂಕಾರ ಆಲಂಬನವಿಲ್ಲದ ಧ್ಯಾನವು (ಭಾವನೆಯು) ಭಾವನೆಯೇ ಆಗಲಾರದು ಎಂದರೆ ನಿರ್ವಿಶೇಷಪ್ರಾಪ್ತಿಗೂ ಸವಿಶೇಷಧ್ಯಾನವೇ ಕಾರಣವೇ ಹೊರತು ನಿರ್ವಿಶೇಷವಸ್ತುವನ್ನು ಧ್ಯಾನಮಾಡಲಾಗುವುದಿಲ್ಲ. ॥ ೧೦ ॥

ನಿರವಯವವೂ, ನಾನಾವಿಧ ವಿಕಲ್ಪವರ್ಜಿತವೂ, ನಿರ್ದೋಷವೂ ಆದ ಬ್ರಹ್ಮವಸ್ತುವನ್ನು "ಅಹಂ ಬ್ರಹ್ಮಾಸ್ಮಿ" ತಾನು ಅಂತಹ ಬ್ರಹ್ಮ ಸ್ವರೂಪನಾದವನು ಎಂದು ಸಾಕ್ಷಾತ್ಕಾರವನ್ನು ಹೊಂದಿ ಕ್ರಮವಾಗಿ ಬ್ರಹ್ಮಾಭೇದವನ್ನು ಹೊಂದುವನು. ॥೧೧॥

ಮತ್ತು ಜ್ಞಾನಿಯು ಮೋಕ್ಷವನ್ನು ಹೊಂದಲು ಸಾಕ್ಷಾತ್ಕರಿಸಬೇಕಾದ ಬ್ರಹ್ಮವಸ್ತುವು ವಿರುದ್ಧವಿಕಲ್ಪಗಳಾವುವೂ ಇಲ್ಲದುದಾಗಿಯೂ ದೇಶ-ಕಾಲ-ವಸ್ತು ಪರಿಚ್ಛೇದಗಳಿಲ್ಲದುದಾಗಿಯೂ, ಸಾಧನ ದೃಷ್ಟಾಂತಗಳಿಲ್ಲದುದಾಗಿಯೂ ವಿಶೇಷಧರ್ಮಸಂಬಂಧದಿಂದ ಜ್ಞಾನಕ್ಕೆ ವಿಷಯವಲ್ಲದುದಾಗಿಯೂ ಕಾರಣವಲ್ಲದುದಾಗಿಯೂ ಇರುವುದು. ॥ ೧೨ ॥

ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಬ್ರಹ್ಮ ಭಾವಾವಸ್ಥೆಯಲ್ಲಿರುವ ಜ್ಞಾನಿದೃಷ್ಟಿಗೆ ಸಚ್ಚಿದಾನಂದ ಘನವಾದ ಪರಿಪೂರ್ಣಬ್ರಹ್ಮವಸ್ತು ಒಂದು ವಿನಹ ಮಿಕ್ಕ ದ್ವೈತ ಪ್ರಪಂಚಸಾಮ್ರಾಜ್ಯವೆಲ್ಲವೂ ಅಸ್ತವಾಗಿರುವುದರಿಂದ ದ್ವೈತಾವಸ್ಥೆಯಲ್ಲಿ ತೋರಿಬರುವ ಪ್ರಲಯ, ಸೃಷ್ಟಿ, ಬದ್ಧಪುರುಷ, ಉಪಾಸಕ, ಮುಮುಕ್ಷು, ಮುಕ್ತ ಎಂಬುವು ಯಾವುವೂ ಇರಲಾರವು. ಇವಕ್ಕೆಲ್ಲ ಅಧಿಷ್ಠಾನವಾದ ಬ್ರಹ್ಮಪ್ರಕಾಶವೇ ಅದ್ವೈತ ರೂಪವಾಗಿರುವುದು. ॥ ೧೩ ॥

ಒಬ್ಬ ಆತ್ಮನೇ ಕ್ರಮವಾಗಿ ಜಾಗ್ರತ್-ಸ್ವಪ್ನ-ಸುಷುಪ್ತಿಗಳೆಂಬ ಅವಸ್ಥೆಗಳನ್ನು ಅನುಭವಿಸುವವನಾದ್ದರಿಂದ ಅವಸ್ಥೆಗಳು ಒಂದಾಗುತ್ತಲೊಂದು ಕ್ರಮವಾಗಿ ಬಂದರೂ ಆತ್ಮನು ಬೇರೆಯಾಗಲಾರನು. ಅವಸ್ಥಾತ್ರಯ ವಿನಿರ್ಮುಕ್ತನಾದರೆ ಅಂತಹ ಜೀವನು ಶೋಧಿತಾತ್ಮಸ್ವರೂಪನಾಗಿ ಬ್ರಹ್ಮರೂಪನೇ ಆಗಿರುವುದರಿಂದ ಪುನರ್ಜನ್ಮಕ್ಕೆ ಭಾಗಿಯಾಗುವುದಿಲ್ಲ. ॥ ೧೪ ॥

ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ ॥ ೧೫ ॥

ಘಟಸಂವೃತ ಮಾಕಾಶಂ ನೀಯಮಾನೇಘಟೇಯಥಾ ।
ಘಟೋನೀಯೇತ ನಾಕಾಶಂ ತಥಾಜೀವೋನಭೋಪಮಃ ॥ ೧೬ ॥

ಘಟವದ್ವಿವಿಧಾಕಾರಂ ಭಿದ್ಯಮಾನಂ ಪುನಃ ಪುನಃ ।
ತದ್ಭೇದೇಚ ನಜಾನಾತಿ ಸಜಾನಾತಿ ಚ ನಿತ್ಯಶಃ ॥ ೧೭ ॥

ಶಬ್ದಮಾಯಾವೃತೋ ಯಾವತ್ತಾವತ್ತಿಷ್ಠತಿ ಪುಷ್ಕಲೇ ।
ಭಿನ್ನೇ ತಮಸಿ ಚೈಕತ್ವಮೇಕ ಏವಾನುಪಶ್ಯತಿ ॥ ೧೮ ॥

ಶಬ್ದಾರ್ಣಮಪರಂ ಬ್ರಹ್ಮ ತಸ್ಮಿನ್ ಕ್ಷೀಣೇ ಯದಕ್ಷರಮ್ ।
ತದ್ವಿದ್ವಾನಕ್ಷರಂ ಧ್ಯಾಯೇದ್ಯದೀಚ್ಛೇಚ್ಛಾಂತಿಮಾತ್ಮನಃ ॥ ೧೯ ॥

ಒಬ್ಬ ಆತ್ಮನು ಭೂತ ಭೌತಿಕ ಪ್ರಪಂಚದ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಇರುವನು. ನಿರುಪಾಧಿಕರೂಪದಿಂದ ಅಭಿನ್ನನಾಗಿ ತತ್ತ್ವಜ್ಞಾನಿಗಳಿಂದ ಸಾಕ್ಷಾತ್ಕರಿಸಲ್ಪಟ್ಟಿದ್ದರೂ ಔಪಾಧಿಕ ರೂಪದಿಂದ ದ್ವೈತವಾಸನೆಯುಳ್ಳ ಜನರಿಗೆ ನಾನಾರೂಪವಾಗಿ ತೋರುತ್ತಾನೆ. ಪರಮಾರ್ಥರೂಪದಿಂದ ಒಂದೇ ಆಗಿಯೂ ಭ್ರಾಂತಿಕಲ್ಪಿತ ರೂಪದಿಂದ ನಾನಾಕಾರವಾಗಿಯೂ ತೋರುವುದಕ್ಕೆ ಜಲ ಚಂದ್ರನು ದೃಷ್ಟಾಂತವೆನ್ನಬಹುದು. ಜಲದಲ್ಲಿ ಪ್ರತಿಬಿಂಬಿಸಿರುವ ಚಂದ್ರನು ತನ್ನ ನಿಜರೂಪದಿಂದ ಗಗನದಲ್ಲಿ ಕಾಣಿಸುವ ಒಂದೇ ಪರಮಾರ್ಥ ಆಕಾರವುಳ್ಳವನೂ ನೀರಿನ ಪ್ರತಿಯೊಂದು ಅಲೆ ಮುಂತಾದ ಭಾಗಗಳಲ್ಲಿ ಬಿದ್ದಿರುವ ಪ್ರತ್ಯೇಕ ಪ್ರತಿಬಿಂಬಗಳ ಗಣನೆಯಿಂದ ಅನೇಕಾಕಾರವುಳ್ಳವನಾಗಿಯೂ ತೋರುವನು. || ೧೫ ||

ಗಡಿಗೆಯ ಒಳಭಾಗದಲ್ಲಿ ಅಡಕವಾಗಿರುವಷ್ಟು ಆಕಾಶಭಾಗವು ಘಟವನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಒಯ್ಯಲ್ಪಡುವಾಗ ನಯನವೆಂಬ ಆ ಕ್ರಿಯೆಗೆ ವಿಷಯವಾಗದೇ ಅಚಲವಾಗಿ ನಿಲ್ಲುವುದು. ಘಟವ್ಯಕ್ತಿಯೊಂದೇ ಆ ಕ್ರಿಯೆಗೆ ವಿಷಯವಾಗುವುದು. ಅದರಂತೆ ಜೀವಾತ್ಮವು ಆಕಾಶದಂತೆ ಶರೀರೊಪಾಧಿಯಲ್ಲಿ ಅಡಕವಾಗಿರುವುದೊಂದೇ ಹೊರತು ಶರೀರಕ್ಕೆ ಬರುವ ಜನ್ಮ-ಜರಾದಿ ವಿಕಾರಗಳು ಯಾವುವನ್ನೂ ಅಂಟಿಸಿಕೊಳ್ಳುವುದಿಲ್ಲ. || ೧೬ ||

ಶುದ್ಧನಾದ ಆತ್ಮನಿಗೆ ಉಪಾಧಿಯಾಗಿ ಅಂಟಿಕೊಂಡಿರುವ ವಿವಿಧಾಕಾರಗಳಿಂದ ಕೂಡಿದ ಶರೀರಾದಿಗಳು ಭೇದ–ನಾಶ ಮುಂತಾದ ಅವಸ್ಥೆಗಳನ್ನು ಹೊಂದುವಾಗ ಒಳಗಿನ ಆತ್ಮವು ಅನಿತ್ಯಜ್ಞಾನೋತ್ಪತ್ತಿಗೆ ಬೇಕಾದ ಸಾಮಗ್ರಿ-ಶರೀರ-ಇಂದ್ರಿಯಾದಿಗಳು ಭಿನ್ನವಾದ್ದರಿಂದ ಆ ಜ್ಞಾನವು ಮಾಯವಾಗುವುದು. ಆದರೆ ನಿತ್ಯವಾದ ಸ್ವಸ್ವರೂಪಜ್ಞಾನಮಾತ್ರ ತಪ್ಪದೇ ಇರುವುದು. || ೧೭ ||

ಮಾಯಾ–ಮತ್ತು ಮಾಯಾಕಾರ್ಯವಾದ ಶಬ್ದಾದಿ ಸಂಸ್ಪರ್ಶದಿಂದ ಆವೃತನಾಗಿರುವವರೆಗೂ ಆತ್ಮವು ನಾನಾವಿಧ ರೂಪ ಧಾರಿಯಾಗಿ ಪುಷ್ಕಲವಾದ ಪ್ರಪಂಚದಲ್ಲಿ ಕಾಣಿಸುವನು, ಮಾಯೆ ಯೆಂಬುದು ಒಂದು ತಮಸ್ಸು, ಇದಿರುವುದರಿಂದ ನಿಜ ಸ್ವರೂಪವು ಅರಿಯಲ್ಪಡದೇ ಇದೆ. ಆ ತಮಸ್ಸು ನಷ್ಟವಾದರೆ ಸಾಕ್ಷಿ ಚೈತನ್ಯವೊಂದೇ ಉಳಿಯುವುದರಿಂದ ತನ್ನನ್ನೂ ತನ್ನ ಏಕತ್ವವನ್ನೂ ತಾನೇ ಅರಿಯುವುದು. ಎಂದರೆ ಸಾಕ್ಷಿ ಚೈತನ್ಯವು ಮಾತ್ರ ಪ್ರಕಾಶಿಸುವುದೆಂದು ತಾತ್ಪರ್ಯವು. || ೧೮ ||

ಓಂಕಾರವೆಂಬುದು ಅಪರಬ್ರಹ್ಮವು (ಸಗುಣಬ್ರಹ್ಮವು). ಹಿಂದೆ ಹೇಳಿದ ಹಾಗೆ ಓಂಕಾರದಲ್ಲಿರುವ ಅ+ಉ+ಮಕಾರಗಳೆಂಬ ಮಾತ್ರೆಗಳನ್ನು ಕ್ರಮವಾಗಿ ಹಿಂದೆ ಹಿಂದಿನ ಮಾತ್ರೆಗಳಲ್ಲಿ ಪ್ರವಿಲಯಮಾಡಿದರೆ ಕ್ಷರತ್ವ (ನಾಶ) ವಿಲ್ಲದೇ ಶಾಶ್ವತವಾಗಿ ನಿಲ್ಲುವ ವಸ್ತು ನಿರ್ವಿಶೇಷ ಅಥವಾ ಪರಬ್ರಹ್ಮವು. ಜ್ಞಾನಿಯು ತನಗೆ ಶಾಂತಿಯನ್ನು ಅಪೇಕ್ಷಿಸುವುದಾದರೆ ಅಂತಹ ಅಕ್ಷರ ವಸ್ತುವನ್ನು ಧ್ಯಾನಿಸಬೇಕು. || ೧೯ ||

ದ್ವೇ ಬ್ರಹ್ಮಣೀ ಹಿ ಮಂತವ್ಯೇ ಶಬ್ದಬ್ರಹ್ಮ ಪರಂ ಚ ಯತ್ ।
ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ ॥ ೨೦ ॥

ಗ್ರಂಥಮಭ್ಯಸ್ಯಮೇಧಾವೀ ಜ್ಞಾನವಿಜ್ಞಾನತತ್ಪರಃ ।
ಪಲಾಲಮಿವ ಧಾನ್ಯಾರ್ಥೀ ತ್ಯಜೇದ್ಗ್ರಂಥಮಶೇಷತಃ ॥ ೨೧ ॥

ಗವಾಮನೇಕವರ್ಣಾನಾಂ ಕ್ಷೀರಸ್ಯಾಪ್ಯೇಕವರ್ಣತಾ ।
ಕ್ಷೀರವತ್ ಪಶ್ಯತಿ ಜ್ಞಾನಂ ಲಿಂಗಿನಸ್ತು ಗವಾಂ ಯಥಾ ॥ ೨೨ ॥

ಜ್ಞಾನನೇತ್ರಂ ಸಮಾಧಾಯ ಸಮುಹತ್ ಪರಮಂ ಪದಮ್ ।
ನಿಷ್ಕಲಂ ನಿಶ್ಚಲಂ ಶಾಂತಂ ಬ್ರಹ್ಮಾಹ ಮಿತಿ ಸಂಸ್ಮರೇತ್ ॥ ೨೩ ॥

ಇತ್ಯೇಕಂ ಪರಂ ಬ್ರಹ್ಮರೂಪಂ ಸರ್ವಭೂತಾಧಿವಾಸಂ ತುರೀಯಂ ।
ಜಾನೀತೇ ಸೋಽಕ್ಷರೇ ಪರಮೇ ವ್ಯೋಮನ್ಯಧಿವಸತಿ ॥ ೨೪ ॥

ಯ ಏತಾಂ ವಿದ್ಯಾಂ ತುರೀಯಾಂ ಬ್ರಹ್ಮಯೋನಿ ಸ್ವರೂಪಾಂ ತಾಮಿಹಾಯುಷೇ ಶರಣಮಹಂ ಪ್ರಪದ್ಯೇ ॥ ೨೫ ॥

ಪರ-ಅಪರಗಳೆಂಬ ಎರಡು ಬ್ರಹ್ಮ ವಸ್ತುಗಳನ್ನೂ ಮನನಮಾಡಬೇಕು. ಅವುಗಳಲ್ಲಿ ಓಂಕಾರವೆಂಬ ಶಬ್ದ ಬ್ರಹ್ಮವು ಅಪರ ವಸ್ತುವೆಂದು ಹಿಂದೆಯೇ ಹೇಳಿರುತ್ತೆ. ತನ್ಮೂಲಕವಾಗಿ ಸಾಕ್ಷಾತ್ಕಾರಿಸಲ್ಪಡಬೇಕಾದುದು ಪರವಸ್ತು. ಪರವಸ್ತುವೇ ಪ್ರಧಾನವಾಗಿ ನಮ್ಮ ಗುರಿಯಾಗಿದ್ದರೂ ತತ್ಪ್ರಾಪ್ತಿಗೆ ಉಪಾಯವಾಗಿರುವ ಅಪರ ವಸ್ತು ಧ್ಯಾನವನ್ನು ಬಿಡದೇ ಆಚರಿಸಲೇಬೇಕು. ಶಬ್ದಬ್ರಹ್ಮ ಉಪಾಸನೆಯಲ್ಲಿ ಆಸಕ್ತನಾದವನು ಪರಬ್ರಹ್ಮವನ್ನು ಹೊಂದುತ್ತಾನೆ. ॥ ೨೦ ॥

ಬ್ರಹ್ಮಜ್ಞಾನ ಪ್ರಾಪ್ತಿಯನ್ನು ಸಾಧಿಸುವ ಮೇಧಾವಿಯು ಮುಖ್ಯವಾದ ಬ್ರಹ್ಮ ವಸ್ತುವಿನ ಜ್ಞಾನ-ಅನುಭವಗಳಿಗಾಗಿ ಅದನ್ನು ಪ್ರತಿಪಾದಿಸುವ ವಿವಿಧ ಗ್ರಂಥಗಳನ್ನು ಅಭ್ಯಾಸಮಾಡಿ ಸಾರಾಂಶವನ್ನು ಗ್ರಹಿಸಿ ಅದರ ಜ್ಞಾನಾನುಭವಗಳಲ್ಲಿ ನಿರತನಾಗಿ ಅಶೇಷವಾಗಿ ಗ್ರಂಥ ಅಭ್ಯಾಸವನ್ನು ಬಿಡಬೇಕು. ಸಾರವಾದ ಅಕ್ಕಿಯನ್ನು ಭತ್ತ ದಿಂದ ಗ್ರಹಿಸಿದ ಅನಂತರ ನಿಸ್ಸಾರವಾದ ಹೊಟ್ಟನ್ನು ತಂಡುಲಾಪೇಕ್ಷಿಯು ಪರಿತ್ಯಾಗ ಮಾಡುವಂತೆ ಬ್ರಹ್ಮಸಾರ ಸಂಗ್ರಹಾನಂತರ ಇತರ ಗ್ರಂಥಗಳು ನಿಸ್ಸಾರವಾದ್ದರಿಂದ ಪರಿತ್ಯಾಗಕ್ಕೆ ಅರ್ಹವಾದುವು. ॥ ೨೧ ॥

ಹಾಲು ಕರೆಯುವ ಹಸುಗಳು ಬಿಳುಪು, ಕೆಂಪು ಮುಂತಾದ ಅನೇಕ ಬಣ್ಣ ವುಳ್ಳವುಗಳಾಗಿರುವುವು. ಹಸುವು ಯಾವ ಬಣ್ಣವಾಗಿದ್ದರೂ ಎಲ್ಲ ಹಸುಗಳ ಹಾಲು ಬಿಳುಪು ಬಣ್ಣದಿಂದ ಒಂದೇ ವಿಧವಾಗಿರುವುದು. ಹಸುಗಳ ಬಣ್ಣದಲ್ಲಿ ವ್ಯತ್ಯಾಸವು ಕಂಡಂತೆ ಹಾಲಿನಲ್ಲಿ ವ್ಯತ್ಯಾಸವಿಲ್ಲ. ಆ ರೀತಿಯಾಗಿ ಜ್ಞಾನಿಗೆ ಆತ್ಮವಸ್ತುವು ಸರ್ವಸ್ಥಳಗಳಲ್ಲಿಯೂ ಸಮತ್ವದಿಂದ ಕಾಣುವುದು. ವರ್ಣಾಶ್ರಮಾದಿ ಚಿಹ್ನೆಗಳಾಗಲಿ ನೈಸರ್ಗಿಕ ಜಾತಿವ್ಯಕ್ತಿ ಭೇದಗಳಾಗಲಿ ಹೊರಗಿನ ವ್ಯಕ್ತಿಯಲ್ಲಿ ಮಾತ್ರವಿರುವುವು. ಅನುಗತವಾದ ಚೈತನ್ಯದಲ್ಲಿ ಈ ವ್ಯತ್ಯಾಸವನ್ನು ಉಂಟುಮಾಡಲಾರವು. ॥ ೨೨ ॥

ಇಂತಹ ಪರಬ್ರಹ್ಮಪ್ರಾಪ್ತಿಗೆ ಸಾಧಕನು ತನ್ನ ಅಂತಃಕರಣದ ಬ್ರಹ್ಮಾಕಾರವೃತ್ತಿ ಯೆಂಬ ಪ್ರತ್ಯಕ್ಷಪ್ರಮಾಣವನ್ನು ಏಕಾಗ್ರತೆಯಲ್ಲಿರಿಸಿ ವಿಕಾರ-ಅವಯವ-ನಿಖಿಲ ದೋಷ ವರ್ಜಿತವಾಗಿಯೂ ಪರಮಪದವೆನಿಸಿದುದಾಗಿಯೂ ಇರುವ ಬ್ರಹ್ಮವನ್ನು ತಾನೇ ಆ ವಸ್ತುವೆಂಬ ಭಾವನೆಯಿಂದ "ಅಹಂಬ್ರಹ್ಮಾಸ್ಮಿ" ಎಂದು ಧ್ಯಾನಿಸಬೇಕು. ॥ ೨೩ ॥

ಹೀಗೆ ಅದ್ವಿತೀಯವಾದ, ಸರ್ವಭೂತಗಳಿಗೆ ಅಂತರ್ಯಾಮಿಯಾದ ವಿಶ್ವ-ತೈಜಸ-ಪ್ರಾಜ್ಞತ್ರಯಾತೀತವಾಗಿ ತುರೀಯವಾಗಿರುವ ಪರಮಾತ್ಮನನ್ನು ಸಾಕ್ಷಾತ್ಕರಿಸಿದನು ಪರಮಪದವಿಯೆಂಬ ಶಾಶ್ವತ ಸುಖರೂಪವಾದ ಮೋಕ್ಷಸಾಮ್ರಾಜ್ಯವನ್ನು ಪಡೆಯುತ್ತಾನೆ. ॥ ೨೪ ॥

ಹಿಂದೆ ಹೇಳಿದ ಅಂಶವನ್ನೇ ಪುನರನುವಾದಮಾಡಿ ಬ್ರಹ್ಮಜ್ಞಾನದ ಫಲವನ್ನೂ ಅದರಲ್ಲಿ ಶರಣಾಗತಿಯನ್ನೂ ತೋರಿಸುತ್ತದೆ. ಬ್ರಹ್ಮವಸ್ತುವನ್ನು ಸ್ವಸ್ವರೂಪದಿಂದ ಆವಿರ್ಭಾವವಾಗುವಂತೆ ತೋರಿಸಲು ಕಾರಣವಾದ ತುರೀಯ ಬ್ರಹ್ಮವಿದ್ಯೆಯನ್ನೂ ತತ್ಪ್ರಾಪ್ತಿಗಾಗಿ ಸಾಧನಗಳನ್ನೂ ಸಮಗ್ರವಾಗಿ ಅನುಷ್ಠಾನ ಮಾಡುವುದಕ್ಕಾಗಿ ಪೂರ್ಣಾಯುಷ್ಯವನ್ನು ಹೊಂದಲು ಶರಣಾಗತನಾಗಿರುವೆನು. ॥ ೨೫ ॥

ಆಕಾಶಾದ್ಯನುಕ್ರಮೇಣ ಸರ್ವೇಷಾಂ ವಾ ಏತದ್ಭೂತಾನಾ ಮಾಕಾಶಃ ಪರಾಯಣಂ ಸರ್ವಾಣಿಹವಾ ಇಮಾನಿ ಭೂತಾನ್ಯಾಕಾಶಾದೇವ ಜಾಯಂತೇ ಆಕಾಶ ಏವಲೀಯಂತೇ ತಸ್ಮಾದೇವ ಜಾತಾನಿ ಜೀವಂತಿ ತಸ್ಮಾದಾಕಾಶಂ ಬೀಜಂವಿದ್ಯಾತ್ ॥ ೨೬ ॥

ತದೇವಾಕಾಶಪೀಠಂ ಸ್ಪಾರ್ಶನಂ ಪೀಠಂ ತೇಜಃಪೀಠ ಮಮೃತಪೀಠಂ ರತ್ನಪೀಠಂ ಜಾನೀಯಾತ್ ಯೋ ಜಾನೀತೇ ಸೋಽಮೃತತ್ವಂಚಗಚ್ಛತಿ ॥ ೨೭ ॥

ತಸ್ಮಾದೇತಾಂ ತುರೀಯಾಂ ಶ್ರೀಕಾಮರಾಜೀಯಾಮೇಕಾದಶಧಾ ಭಿನ್ನಮೇಕಾಕ್ಷರಂ ಬ್ರಹ್ಮೇತಿ ಯೋಜಾನೀತೇ ಸ ತು ರೀ ಯಂ ಪ ದ ಂ ಪ್ರಾಪ್ನೋತಿ ಯಏವಂ ವೇದೇತಿ ಮಹೋಪನಿಷತ್ ॥ ೨೮ ॥

॥ ತ್ರಿಪುರಾತಾಪಿನ್ಯುಪನಿಷತ್ ಸಮಾಪ್ತಾ ॥

ನಿಖಿಲ ಪ್ರಪಂಚಕ್ಕೆ ಬೀಜವೂ ಪರಮಾತ್ಮ ತತ್ವವೇ ಆಗಿದೆ. ಅದರಿಂದ ಆಕಾಶ-ವಾಯು-ತೇಜಃ-ಜಲ-ಪೃಥಿವೀ ಎಂಬ ಕ್ರಮದಿಂದ ನಿಖಿಲಭೂತಗಳೂ ಉತ್ಪತ್ತಿಯಾಗಿ ಅದರಿಂದ ಭೌತಿಕವಸ್ತುಗಳೂ ಹುಟ್ಟಿರುತ್ತವೆ. ಆದ್ದರಿಂದ ಎಲ್ಲದಕ್ಕೂ ಮೂಲಕಾರಣವೂ ಕಾರ್ಯಾವಸ್ಥಾಪರಿತ್ಯಾಗದಿಂದ ಅನ್ವೇಷಣಮಾಡಿ ಪರಮ ಪ್ರಾಪ್ಯವಾದದ್ದೂ ಪರಮಾತ್ಮವಸ್ತುವೇ. ಅಂತಹ ಪರಮಾತ್ಮನು ಆ=ಸುತ್ತಲೂ, ಕಾಶತೆ-ಪ್ರಕಾಶಿಸುತ್ತಾನೆ ಎಂಬ ಅರ್ಥಗರ್ಭಿತವಾದ ಆಕಾಶ ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಾನೆ. ಹುಟ್ಟುವ ಪ್ರತಿಯೊಂದು ಭೂತವೂ ಈ ಆಕಾಶದಿಂದಲೇ ಜನ್ಮವೆತ್ತಿ ಅದರಿಂದಲೇ ಜೀವನವನ್ನು ನಡೆಸಿ ಅಂತಕಾಲದಲ್ಲಿ ಅದೇ ಕಾರಣದಲ್ಲಿಯೇ ಲಯ ಹೊಂದುತ್ತದೆ. ಹೀಗೆ ಆಕಾಶ ತತ್ವವಿಲ್ಲದೇ ಯಾವುದೂ ನಡೆಯದೇ ಅದಕ್ಕೆ ಅಧೀನವಾಗಿಯೇ ಸೃಷ್ಟಿ-ಸ್ಥಿತಿ-ಲಯಗಳೆಲ್ಲವೂ ಆಗುವುದರಿಂದ ಎಲ್ಲಕ್ಕೂ ಆಕಾಶವೇ ಬೀಜವೆಂದು ಮನಗಾಣಬೇಕು. ॥ ೨೬ ॥

ಮತ್ತು ಭೂತಭೌತಿಕಾದಿ ಸೃಷ್ಟಿಯನ್ನು ಮಾಡಿ ತಾನು ತಟಸ್ಥನಾಗಿ ನಿಲ್ಲದೇ ತಾನೇ ಜೀವಾತ್ಮರೂಪದಿಂದಲೂ ಸತ್ತಾಸ್ಫೂರ್ತಿಗಳೆಂಬ ಅಂಶಗಳಿಂದ ಚೇತನ-ಅಚೇತನ ವಸ್ತುಗಳನ್ನೆಲ್ಲ ವ್ಯಾಪಿಸಿ ಪ್ರತಿಯೊಂದು ಆಧಾರದಲ್ಲಿಯೂ ಅಂತರ್ಯಾಮಿಯಾಗಿಯೂ ಆಧಾರ-ಆಧೇಯ ಸಂಬಂಧವನ್ನು ಹೊಂದಿದವನಾಗಿರುವುದರಿಂದ ಆಕಾಶಪೀಠ, ವಾಯುಪೀಠ ತೇಜಃಪೀಠ, ಅಮೃತ (ಜಲ) ಪೀಠ, ರತ್ನ (ಪೃಥಿವೀ) ಪೀಠ, ರೂಪವೆಂದು ಪರಮಾತ್ಮನನ್ನು ತಿಳಿಯಬೇಕು. ॥ ೨೭ ॥

ಆದುದರಿಂದ ಕಾಮರಾಜ ಅಥವಾ ಪರಮೇಶ್ವರನ ಸಂಬಂಧವಾಗಿಯೂ ಓಂಕಾರವೆಂಬ ಏಕಾಕ್ಷರದಿಂದ ಧ್ಯೇಯವಾಗಿಯೂ ಅದರಲ್ಲಿ ಅವಾಂತರ ವಿಭಾಗ (ಒಳಪಂಗಡ) ಗಳ ಕಲ್ಪನೆಯಿಂದ ಅ-ಉ-ಮ-ಅರ್ಧಮಾತ್ರಾ-ಬಿಂದು-ನಾದ-ಕಲಾತೀತ-ಶಾಂತಿ-ಶಾಂತ್ಯತೀತ-ಉನ್ಮನೀ ಎಂಬ ಹನ್ನೊಂದು ರೂಪವುಳ್ಳದ್ದಾಗಿಯೂ ಇರುವ ತುರೀಯ ಬ್ರಹ್ಮ ವಿದ್ಯೆಯನ್ನು ಅಹಂಬ್ರಹ್ಮ ಎಂಬ ಭಾವನಾ ಮೂಲಕವಾಗಿ ಯಾರು ಹೊಂದುವನೋ ಅವನು ತುರೀಯಾವಸ್ಥೆ (ಮೋಕ್ಷ) ವನ್ನು ಹೊಂದುವನು. ಹೀಗೆ ಈ ಸಾಂಗ ಬ್ರಹ್ಮವಿದ್ಯೆಯ ಫಲವನ್ನರಿತವನು ಕೂಡ ಮೋಕ್ಷ ಫಲಕ್ಕೆ ಪಾತ್ರನಾಗುವನು. ॥ ೨೮ ॥

ಇಲ್ಲಿಗೆ ಐದನೆಯ ಉಪನಿಷತ್ತು ಮುಗಿದುದು. ಈ ಉಪನಿಷತ್ತು ತ್ರಿಪುರಾದೇವಿಯ ಆಂತರ ಬಾಹ್ಯಾರ್ಚನೆಗಳ ವಿಷಯವನ್ನು ಪ್ರತಿಪಾದಿಸುತ್ತಾ ತದಂಗವಾಗಿ ಶ್ರೀವಿದ್ಯೆ ಚಕ್ರ—ಮುದ್ರಾ ಮುಂತಾದುದನ್ನೆಲ್ಲ ಕ್ರಮವಾಗಿ ಬೋಧಿಸಿ ಕಡೆಯಲ್ಲಿ ಮುಮುಕ್ಷು ಜನಗಳಿಗೆ ಬೇಕಾದ ನಿರ್ವಿಶೇಷ ಬ್ರಹ್ಮ ತತ್ಪ್ರಾಪ್ತಿ ಸಾಧನೋಪಾಯಗಳನ್ನೂ ನಿರೂಪಿಸಿರುತ್ತದೆ.

ತ್ರಿಪುರಾತಾಪಿನೀ ಉಪನಿಷತ್ತಿನ ಕನ್ನಡ ಅನುವಾದವು ಮುಗಿದುದು.

॥ ಶ್ರೀರಸ್ತು ॥

## ॥ ಅಲ್ಲಾ ಉಪನಿಷತ್ ॥

---

ದಿವ್ಯಾನಿ ಧತ್ತೇ ಧತ್ತೇ ದಿವ್ಯಾನಿ ದಿವ್ಯಾನಿ ಧತ್ತೇ । ಧತ್ತ ಇಲಲ ಇಲಲೇ ಧತ್ತೇ ಧತ್ತ ಇಲಲೇ। ಧತ್ತ ಇತಿ ಧತ್ತೇ । ಇಲಲೇ ವರುಣೋ ವರುಣ ಇಲಲ ಇಲಲೇ ವರುಣಃ । ಇಲಲ ಇತಿ ಇಲಲೇ । ವರುಣೋ ರಾಜಾ ರಾಜಾ ವರುಣೋ ವರುಣೋ ರಾಜಾ । ರಾಜಾ ಪುನರ್ದುಃ ಪುನರ್ದೂರಾಜಾ ರಾಜಾ ಪುನರ್ದುಃ । ಪುನರ್ದುರಿತಿ ಪುನಃ ದುಃ । ಹ್ವಯಾಮಿ ಮಿತ್ರೋ ಮಿತ್ರೋ ಹ್ವಯಾಮಿ ಹ್ವಯಾಮಿ ಮಿತ್ರಃ । ಮಿತ್ರ ಇಲಾಮಿಲಾಂ ಮಿತ್ರೋ ಮಿತ್ರ ಇಲಾಮ್ । ಇಲಾಮಿಲಲ ಇಲಲ ಇಲಾಮಿಲಾಮಿಲಲೇ । ಇಲಲ ಇಲಾಮಿಲಾ ಮಿಲಲ ಇಲಲ ಇಲಾಮ್ । ಇಲಾಂ ವರುಣೋ ವರುಣ ಇಲಾ ಮಿಲಾಂ ವರುಣಃ । ವರುಣೋ ಮಿತ್ರೋ ಮಿತ್ರೋ ವರುಣೋ ವರುಣೋ ಮಿತ್ರಃ। ಮಿತ್ರಸ್ತೇಜಸ್ಕಾಮಸ್ತೇಜಸ್ಕಾಮೋ ಮಿತ್ರೋ ಮಿತ್ರಸ್ತೇಜಸ್ಕಾಮಃ। ತೇಜಸ್ಕಾಮ ಇತಿ ತೇಜಃ ಕಾಮಃ ॥೧॥

|| ಶ್ರೀ ||

# ಅಲ್ಲಾ ಉಪನಿಷತ್ತಿನ ಕನ್ನಡ ಅನುವಾದವು.

---

ಶಕ್ತಿದೇವತಾ ಪ್ರಧಾನವಾದ ಉಪನಿಷತ್ತುಗಳಲ್ಲಿ ಅಲ್ಲಾ ಉಪನಿಷತ್ತು ಒಂದು. ಇದರಲ್ಲಿ ಪ್ರತಿಪಾದ್ಯವಾದ ವಿಷಯವು ಅಲ್ಲಾದೇವತೆಯ ಮಾಹಾತ್ಮ್ಯವು. ಸಂಸ್ಕೃತದಲ್ಲಿ ಅಲ್ಲಾ ಎಂಬ ಶಬ್ದವು ಅಂಬಾ ಎಂಬ ಶಬ್ದಕ್ಕೆ ಸಮಾನವಾದ ಅರ್ಥದಿಂದ ಕೂಡಿದೆ. ಅಂಬಾ ಶಬ್ದವು ತಾಯಿ ಎಂಬ ಅರ್ಥವನ್ನು ಬೋಧಿಸುವಂತೆ ಅಲ್ಲಾ ಶಬ್ದವು ಪ್ರಪಂಚ ಮಾತೆಯಾದ ಶಕ್ತಿದೇವತೆಯನ್ನು ಬೋಧಿಸುತ್ತದೆ. ಮೇಲೆ ಕಂಡ ಮೂಲವಾಕ್ಯಗಳು ವೇದಗಳ ಸಂಹಿತಾಭಾಗದ ವಿಕೃತಿವಿಶೇಷವಾದ ಜಟಾಪಾಠ ಕ್ರಮದಂತೆ ಇವೆ. ಎಂದರೆ ವಾಕ್ಯದಲ್ಲಿ ಸೇರಿದ ಪದಗಳಲ್ಲಿ ಎರಡು ಪದಗಳನ್ನು ತೆಗೆದುಕೊಂಡು ಮೊದಲನೆಯ ಪದವನ್ನು ಒಂದುಸಲವೂ ಎರಡನೆಯ ಪದವನ್ನು ಎರಡು ಸಲವೂ ಮತ್ತೆ ಮೊದಲನೆಯ ಪದವನ್ನು ಎರಡುಸಲವೂ ಎರಡನೆಯ ಪದವನ್ನು ಒಂದು ಸಲವೂ ಹೇಳಿದರೆ ಜಟಾಪಾಠದ ಕ್ರಮವಾಗುವುದು. ವೃತ್ತ್ಯವಯವಾರ್ಥಗಳನ್ನು ಸ್ಪಷ್ಟಪಡಿಸಬೇಕಾದ ವಾಕ್ಯದ ಮಧ್ಯದಲ್ಲಿರುವ ಪದ ಮತ್ತು ಕಡೆಯ ಪದಗಳಿಗೆ ವೇಷ್ಟನವನ್ನು ತೋರಿಸುವುದೂ ಈ ಕ್ರಮದಲ್ಲಿ ಸೇರಿದೆ. ಈ ಜಟಾಪಾಠಕ್ರಮವು ವಿಕೃತಿಸಹಿತವಾದ ಪ್ರಕೃತಿ ಪಾರಾಯಣದಲ್ಲಿ ಉಪಯುಕ್ತವಾದುದು. ಅರ್ಥ ವಿಚಾರಕ್ಕೆ ಮೂಲಪ್ರಕೃತಿ ಪಾಠಕ್ರಮವನ್ನು ಅನುಸರಿಸಬೇಕು. ಅದರಲ್ಲಿ ಪ್ರತಿಯೊಂದು ಪದಗಳೂ ಒಂದೊಂದುಸಲವೇ ಪಠಿತಗಳಾಗಿವೆ. ಅವಕ್ಕೆ ಆವೃತ್ತಿಯಿಲ್ಲ. ಆವೃತ್ತಿಯನ್ನು ಬಿಟ್ಟು ಪದಗಳನ್ನು ಪಠಿಸಿದರೆ ವಾಕ್ಯಗಳ ಆನುಪೂರ್ವಿಯು ಈ ರೀತಿಯಾಗಿರುವುದು.

ದಿವ್ಯಾನಿ ಧತ್ತ ಇಲಲೇ ವರುಣೋ ರಾಜಾ ಪುನರ್ದುಃ |
ಹ್ವಯಾಮಿ ಮಿತ್ರ ಇಲಾಮಿಲಲ ಇಲಾಂ ವರುಣೋ ಮಿತ್ರಸ್ತೇಜಸ್ಕಾಮಃ ||

ಈ ಮಂತ್ರದಲ್ಲಿ "ಇಲಲೇ" ಎಂಬುದು ದೇವಿಯ ಸಂಬೋಧನವು. "ಇಲ ಪ್ರೇರಣೇ" ಎಂಬ ಧಾತುವಿನಿಂದ ಇಲಲಾಪದವು ರೂಪಹೊಂದಿದೆ. ಸರ್ವಪ್ರೇರಕಳಾದ ದೇವಿಯನ್ನು ಇಲಲೇ ಎಂದು ಮಂತ್ರದಲ್ಲಿ ಸಂಬೋಧಿಸಿದೆ. ದೇವಿಯೇ! ವರುಣರಾಜನೆಂಬ ದೇವತೆಯು ನಿನ್ನ ಮಾಹಾತ್ಮ್ಯವನ್ನರಿತು ಪುನಃ ಪುನಃ ಅನುಸಂಧಾನಮಾಡಿ ನಿನ್ನನ್ನು ಆಹ್ವಾನಿಸಿ ಶರಣಾಗತಿಯನ್ನು ಹೊಂದಿ ದೇವತಾಪದವಿಯನ್ನೂ ದಿವ್ಯವಾದ ರೂಪ ಆಕಾರಗಳನ್ನೂ ದಿವ್ಯಸುಖಭೋಗ ಸಾಮಗ್ರಿಗಳನ್ನೂ ಹೊಂದಿರುವನು. ಹಾಗೆಯೇ ಮಿತ್ರದೇವನು ತೇಜಸ್ಸನ್ನು ಹೊಂದಬೇಕೆಂಬ ಫಲಾಸಂಗವನ್ನಿಟ್ಟುಕೊಂಡವನಾಗಿ ವರುಣದೇವತೆಯಂತೆಯೇ

ಅಯೂಮಿಲಾಮಿಲಾಮಯೂಮಯೂಮಿಲಾಮ್ । ಇಲಾಂ ತ್ವಂ ತ್ವಮಿಲಾಮಿಲಾಂ ತ್ವಮ್ । ತ್ವಮರ್ಯಮಮರ್ಯಮಂ ತ್ವಂ ತ್ವಮರ್ಯಮಮ್ । ಅರ್ಯಮಂ ವರುಣೋ ವರುಣೋಽರ್ಯಮಮರ್ಯಮಂ ವರುಣಃ । ವರುಣೋ ದಧ್ಮ ದಧ್ಮ ವರುಣೋ ವರುಣೋ ದಧ್ಮ । ದಧ್ಮ ದೀರ್ಘಾಯುರ್ದೀರ್ಘಾಯುರ್ದಧ್ಮ ದಧ್ಮ ದೀರ್ಘಾಯುಃ। ದೀರ್ಘಾಯುರ್ವಹತೇ ವಹತೇ ದೀರ್ಘಾಯುರ್ದೀರ್ಘಾಯುರ್ವಹತೇ । ದೀರ್ಘಾಯುರಿತಿ ದೀರ್ಘ ಆಯುಃ । ವಹತೇ ಸುಯುಃ ಸುಯೋ ವಹತೇ ವಹತೇ ಸುಯುಃ । ಸುಯು ಇತಿ ಸುಯುಃ। ಹೋತಾರಮಿಂದ್ರ ಇಂದ್ರೋ ಹೋತಾರಂ ಹೋತಾರಮಿಂದ್ರಃ। ಇಂದ್ರೋ ಹೋತಾರಂ ಹೋತಾರಮಿಂದ್ರ ಇಂದ್ರೋ ಹೋತಾರಮ್ । ಇಂದ್ರೋ ಮಹಾಸುರೇಂದ್ರೋ ಮಹಾಸುರೇಂದ್ರ ಇಂದ್ರ ಇಂದ್ರೋ ಮಹಾಸುರೇಂದ್ರಃ । ಮಹಾಸುರೇಂದ್ರಃ ಸಪ್ತಋಷಯಃ ಸಪ್ತಋಷಯೋ ಮಹಾಸುರೇಂದ್ರೋ ಮಹಾಸುರೇಂದ್ರಃ ಸಪ್ತಋಷಯಃ । ಸಪ್ತಋಷಯಃ ಸಂ ಸಂ ಸಪ್ತಋಷಯಃ ಸಪ್ತಋಷಯಃ ಸಮ್ । ಸಪ್ತಋಷಯ ಇತಿ ಸಪ್ತ ಋಷಯಃ। ಸಂ ತುಷ್ಟ ತುಷ್ಟ ಸಂ ಸಂ ತುಷ್ಟ । ತುಷ್ಟ ದೇವಾ ದೇವಾಸ್ತುಷ್ಟ ತುಷ್ಟ ದೇವಾಃ। ದೇವಾ ಇತಿ ದೇವಾಃ ॥೨॥

ಪ್ರತ್ಯಕ್ಷವಾದ ಪೃಥಿವೀಭೂತಗಳಿಂದ ಉಪಲಕ್ಷಿತ ಸರ್ವಪ್ರಪಂಚಾತ್ಮಕಳಾದ ದೇವಿಯನ್ನು ಶರಣಾಗತಿಹೊಂದಿ ತನ್ನ ಇಷ್ಟಫಲವನ್ನು ಹೊಂದಿರುವನು. ವರುಣ ಮಿತ್ರ ಮುಂತಾದ ದೇವತೆಗಳಿಗೆ ಉಪಾಸ್ಯಳಾದ ನಿನ್ನನ್ನು ನಾನು ಶರಣಹೊಂದಿ ಕರೆಯುವವನಾಗಿದ್ದೇನೆ. ಇಲಲಾದೇವಿಯೇ, ನನ್ನಲ್ಲಿ ಅನುಗ್ರಹಿಸಿ ಭೂಮಿಯಲ್ಲಿ ನನ್ನ ಸನ್ನಿಧಿಗೆ ಬಂದು ನನ್ನ ಆಸಕ್ತಿ–ಅನಾಸಕ್ತಿಗಳೆಂಬ ರಾಗ–ವೈರಾಗ್ಯ ವೃತ್ತಿಗಳಿಗೆ ತಕ್ಕಂತೆ ಉತ್ತಮಫಲವನ್ನು ಕೊಡುವವಳಾಗು ಎಂದು ಉಪಾಸಕನ ಪ್ರಾರ್ಥನೆಯನ್ನು ತೋರಿಸುವ ವಾಕ್ಯವು. ||೧||

ಜಟಾ ಪಾಠಕ್ರಮವನ್ನು ಬಿಟ್ಟರೆ ಈ ಮೂಲವಾಕ್ಯವು ಈ ಕೆಳಗೆ ಕಂಡ ಆನುಪೂರ್ವಿಯನ್ನು ಹೊಂದಿ ಅರ್ಥವಿಚಾರಕ್ಕೆ ಯೋಗ್ಯವಾಗುವುದು.

ಅಯಾಮಿಲಾಂ ತ್ವಮರ್ಯಮಂ ವರುಣೋ ದಧ್ಮ ದೀರ್ಘಾಯುರ್ವಹತೇ ಸುಯಃ ।
ಹೋತಾರಮಿಂದ್ರೋ ಹೋತಾರಮಿಂದ್ರೋ ಮಹಾಸುರೇಂದ್ರಸ್ಸಪ್ತಋಷಯಃ ಸಂ ತುಷ್ಟ ದೇವಾಃ ||೨||

ದೇವಿಯೇ !

ಯಾವ ಅರ್ಯಮ–ವರುಣ ದೇವರು ದೀರ್ಘವಾದ ಆಯುಷ್ಯವನ್ನು ಹೊಂದಿಕೊಂಡು ಉತ್ಕೃಷ್ಟವಾದ ದೇವತಾಪದವಿಯಲ್ಲಿ ಚಿರಕಾಲವಿರುವರೋ ಅಂತಹವರಿಗೆ ದೀರ್ಘಾಯುಷ್ಯ ಮುಂತಾದ ಫಲಗಳನ್ನು ಅನುಗ್ರಹಿಸಿರುವ ದೇವತೆಯು ನೀನೇ ಆಗಿರುವೆ. ಆದ್ದರಿಂದ ಇಲಾಂ–ಸ್ತುತ್ಯಳೂ ಪಂಚಭೂತಾದಿಸರ್ವಾತ್ಮಕಳೂ ಆದ ನಿನ್ನನ್ನು ಶರಣ ಹೊಂದುವೆನು. ಮತ್ತು ಆ ದೇವತೆಗಳಂತೆ ದೀರ್ಘಾಯುಷ್ಯಾದಿಕಾಮಿತ ಸಮಸ್ತ ಫಲಗಳನ್ನು ಹೊಂದುವೆನು. ಇಂದ್ರನೂ, ಮಹಾ ಅಸುರರ ಅಧಿಪತಿಯೂ, ಅಥವಾ ಮಹಾತ್ಮನೂ ದೇವರಾಜನೂ ಆದ ಇಂದ್ರನೂ ಸಪ್ತಋಷಿಗಳೂ ಮತ್ತು ಇತರ ಸಮಸ್ತ ದೇವತೆಗಳೂ ಪೂಜಾಧ್ಯಾನಗಳಲ್ಲಿ ಆಸಕ್ತನಾದ ನನ್ನಲ್ಲಿ ಸಂತುಷ್ಟ ಚಿತ್ತರಾಗಲಿ. ಜಗತ್ತೆಲ್ಲವೂ ನಿನ್ನ ಅಂಶವೂ ನಿನ್ನಿಂದ ಅನುಗೃಹೀತವೂ ಆಗಿರುವುದರಿಂದ ಪ್ರಪಂಚ ಮೂಲಕಾರಣಳಾದ ನಿನ್ನನ್ನು ಸೇವಿಸಿರುವ ನನ್ನ ವಿಷಯದಲ್ಲಿ ಪ್ರಪಂಚಾಂತರ್ಗತ ದೇವಋಷ್ಯಾದಿ ಲೋಕಸಿಯಾಮಕರೆಲ್ಲರೂ ಪ್ರಸನ್ನಚಿತ್ತರಾಗಲಿ. ದೇವತೆಗಳು ಸಕಲ ಸೌಖ್ಯವನ್ನೂ ಕೊಡಲಿ. ಅಸುರಾದಿಗಳೂ ಯಾವ ವಿಘ್ನವನ್ನೂ ಉಂಟುಮಾಡದೇ ಇರಲಿ ಎಂದು ಅಭಿಪ್ರಾಯವು. ||೨||

ಇಲಾ ಮಿಲಾಮಿಲಾಮಿಲಾಮಿಲಾವ್ । ಇಲೇಲಾಕಬರ್ಹೋಽಕಬರ್ಹ ಇಲೇಲಾಕಬರ್ಹೋಽಕಬರ್ಹ ಇಲೇಲಾಕಬರ್ಹೋಽಕಬರ್ಹ ಇಲೇಲಾಕಬರ್ಹೋಽಕಬರ್ಹ ಇಲೇಲಾಕಬರ್ಹೋಽಕಬರ್ಹಃ । ಅಕಬರ್ಹೋಽಸ್ಮ್ಯಕಬರ್ಹೋಽಸ್ಮ್ಯಕಬರ್ಹೋಽಸ್ಮ್ಯಕಬರ್ಹೋಽಸ್ಮ್ಯಕಬರ್ಹೋಽಸ್ಮಿ ॥೩॥

ಅಲ್ಲೋಪನಿಷತ್ ಸಮಾಪ್ತಾ.



ಸಗುಣ ಉಪಾಸ್ಯದೇವತಾರೂಪವನ್ನು ಪುನಃಪುನಃ ಅನುಸಂಧಾನಮಾಡುವ ಭಾವದಿಂದ ದ್ವಿತೀಯಾ ವಿಭಕ್ತಿಯಿಂದ ಕೂಡಿದ ಇಲಾಂ ಎಂಬ ಪದವು ಆವೃತ್ತಿಯಿಂದ ಪಠಿತವಾಗಿದೆ. ಸ್ಮರಿಸುವೆನು ಎಂಬ ಅರ್ಥದ ಉಚಿತಕ್ರಿಯಾಪದವನ್ನು ಅಧ್ಯಾಹಾರವಿಟ್ಟುಕೊಳ್ಳಬೇಕು. ಪೂಜ್ಯಳಾದ ದೇವಿಯ ಚೈತನ್ಯಾಂಶದಲ್ಲಿ ಮುಕ್ತನು ನಿರಂಜನರೂಪದಿಂದ ಐಕ್ಯವನ್ನು ಹೊಂದುವುದರಿಂದ ಸಿದ್ಧವಾದ ಜೀವಬ್ರಹ್ಮಾಭೇದವನ್ನು "ಇಲೇಲಾಕಬರ್ಹಃ" ಎಂಬ ವಾಕ್ಯವು ಸೂಚಿಸುತ್ತದೆ. ಉಪಾಸನಾ ಪರಿಪಾಕದಿಂದ ನಿರ್ಗುಣಸಾಕ್ಷಾತ್ಕಾರವನ್ನು ಹೊಂದಿದ ಆತ್ಮಜ್ಞಾನಿಯು ತನ್ನ ಅನುಭವಗಳನ್ನು ಹೊರಗೆಡಹುವ ವಾಕ್ಯಗಳು ಮುಂದೆ ಪಠಿತಗಳಾಗಿವೆ. ಸಗುಣ ದೇವತೆಯ ಐಕ್ಯವನ್ನು ಹೊಂದಿದರೂ ಅಲ್ಲಿ ಲಭಿಸುವ ದಿವ್ಯಭೂಷಣಾದ್ಯಲಂಕೃತ ವಿಗ್ರಹಾದಿಗಳೂ ಕುತ್ಸಿತವೇ ಆಗಿರುವುದರಿಂದ (ಕುತ್ಸಿತಕಳೇಬರವಿಧೂನನ) ಹೀನ ಶರೀರಪರಿತ್ಯಾಗ ಪೂರ್ವಕವಾಗಿ ವಿದೇಹ ಕೈವಲ್ಯವನ್ನು ಹೊಂದುವ ಅವಸ್ಥೆಯಲ್ಲಿ ನಾನು ಅಕಬರ್ಹಃ—ಸಮಸ್ತೋಪಾಧಿ ವಿಶೇಷ ಸಂಪರ್ಕತ್ಯಾಗದಿಂದ ನಿರ್ವಿಶೇಷ ಆತ್ಮಚೈತನ್ಯದಲ್ಲಿ ಐಕ್ಯಹೊಂದಿದವನಾಗಿರುವೆನು. ನಿರ್ವಿಶೇಷಾತ್ಮಚೈತನ್ಯ ಐಕ್ಯದಿಂದಿರುವ ನಾನು ಕಲ್ಪಿತೋಪಾಧಿಗಳ ಲೇಶದಿಂದಲೂ ಸಂಗರಹಿತನು – ಎನ್ನುವುದನ್ನು ಆದರವಿಸ್ಮಯದಿಂದ ಪುನಃ ಪುನಃ ಹೇಳುವ ಅಭಿಪ್ರಾಯದಿಂದ ಅಕಬಹ್ಮೋಽಸ್ಮಿ ಎಂದು ಆವೃತ್ತಿಯಿಂದ ಪಠಿತವಾಗಿರುವುದು. ||೩||

ಅಲ್ಲಾ ಉಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



|| ಶ್ರೀರಸ್ತು ||

## || ಆಥರ್ವಣ ದ್ವಿತೀಯೋಪನಿಷತ್ ||

---

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅಣಿಮಾಸಿದ್ಧ್ಯಾದಿದಶಕಂ ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅಣಿಮಾ ಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಲಘಿಮಾ ಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಮಹಿಮಾ ಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಈಶಿತ್ವಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ವಶಿತ್ವಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪ್ರಾಕಾಮ್ಯಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಭುಕ್ತಿಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಇಚ್ಛಾಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪ್ರಾಪ್ತಿಸಿದ್ಧಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪ್ರಕಾಮಸಿದ್ಧಿಸ್ತಸ್ಯೈ ವೈ ನಮೋ ನಮಃ ||೧||

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಬ್ರಾಹ್ಮ್ಯಷ್ಟಕಂ ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅಂ ಬ್ರಾಹ್ಮೀಶಕ್ತಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಈಂ ಮಾಹೇಶ್ವರೀ ಶಕ್ತಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಊಂ ಕೌಮಾರೀ ಶಕ್ತಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಋಂ ವೈಷ್ಣವೀ ಶಕ್ತಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಌಂ ವಾರಾಹೀ ಶಕ್ತಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಐಂ ಇಂದ್ರಾಣೀ ಶಕ್ತಿಸ್ತಸ್ಯೈ

|| ಶ್ರೀ ||

# ಆಥರ್ವಣ ದ್ವಿತೀಯೋಪನಿಷತ್ತಿನ ಕನ್ನಡ ಅನುವಾದವು.

---

ಶ್ರೀಚಕ್ರಾರ್ಚನೆಯಲ್ಲಿ (ಶ್ರೀ ವಿದ್ಯಾಪೂಜಾವಿಧಿಯಲ್ಲಿ) ತದಂಗವಾದ ಆವರಣಾರ್ಚನೆಯ ಸಂದರ್ಭದಲ್ಲಿ ಅನೇಕ ಪರಿವಾರದೇವತೆಗಳ ಆವಾಹನಾದಿ ಪೂಜೆಯು ಪ್ರಸಕ್ತವಾಗುವುದು. ಚಕ್ರಲೇಖನ ಪ್ರಕಾರದಲ್ಲಿ ಆಯಾಯ ರೇಖೆಗಳಲ್ಲಿ ಈ ದೇವತೆಗಳ ಸ್ಥಾನಗಳು ಇರುವುವು. ಅಂತಹ ಪರಿವಾರದೇವತೆಗಳಲ್ಲಿ ಅಣಿಮಾದಿದಶಸಿದ್ಧಿಗಳ ಅಭಿಮಾನಿದೇವತೆಗಳೂ ಸೇರಿರುವರು. ಅಂತಹ ದೇವತೆಗಳ ಪೂಜಾದಿ ಸಮಯದಲ್ಲಿ ನಮಸ್ಕಾರವಿಧಿಯ ಅಂಗವಾಗಿ ಉಚ್ಚರಿಸಲು ಅನುಕೂಲವಾದ, ನಮಃಪದವು ಅಂತದಲ್ಲಿರುವ ಮಂತ್ರಗಳು ಈ ಉಪನಿಷತ್ತಿನಲ್ಲಿ ಸೇರಿವೆ. ಯಾವ ಭಗವತಿಯು ಸರ್ವಮಂಗಲರೂಪಳೂ ಅಣಿಮಾದಿಸಿದ್ಧಿದಶಕಸ್ವರೂಪಳೂ ಆಗಿರುವಳೋ ಅಂತಹವಳಿಗೆ ಪುನಃ ಪುನಃ ನಮಸ್ಕಾರವು. ಪ್ರತ್ಯೇಕವಾಗಿ ಎಲ್ಲ ಸಿದ್ಧಿಗಳನ್ನು ಉಲ್ಲೇಖಿಸಿ ತತ್ಸ್ವರೂಪಳಾದ ದೇವಿಗೆ ನಮಸ್ಕಾರವೆಂಬ ಅರ್ಥಯುಕ್ತವಾಗಿ ಪ್ರತ್ಯೇಕವಾಗಿ ಮುಂದೆ ಪಠಿಸುವ ವ್ಯಷ್ಟಿವಾಕ್ಯಗಳಿಗೆ ಇದು ಆದಿಯಲ್ಲಿರುವ ಸಮಷ್ಟಿರೂಪವಾದ ಮಂತ್ರವಾಕ್ಯವು. ಇದರ ಆದಿಯಲ್ಲಿ ಇರುವ ಎರಡು ವರ್ಣಗಳು ಬೀಜಾಕ್ಷರಗಳು. ಈ ಅಕ್ಷರಗಳು ಪ್ರಾಯಶಃ ಈ ಉಪನಿಷತ್ತಿನ ಎಲ್ಲವಾಕ್ಯಗಳ ಆದಿಯಲ್ಲಿಯೂ ಉಚ್ಚರಿಸಲ್ಪಟ್ಟಿವೆ. ಅಣಿಮಾ, ಲಘಿಮಾ, ಮಹಿಮಾ, ಈಶಿತ್ವಂ, ವಶಿತ್ವಂ, ಪ್ರಾಕಾಮ್ಯಂ, ಭುಕ್ತಿಃ, ಇಚ್ಛಾ, ಪ್ರಾಪ್ತಿಃ, ಪ್ರಕಾಮಃ ಅಥವಾ ಸರ್ವಕಾಮಃ ಎಂಬ ಸಿದ್ಧಿಗಳು ಹತ್ತು ಇವೆ. ಇವಕ್ಕೆ ಅಭಿಮಾನಿಯೂ ಸರ್ವಮಂಗಳಸ್ವರೂಪಳೂ ಆದ ದೇವತೆಗೂ ನಮಸ್ಕಾರವೆಂದು ಒಂದೊಂದು ಸಿದ್ಧಿ ದೇವತಾವಿಷಯದಲ್ಲಿ ಒಂದೊಂದು ಮಂತ್ರವು ಇದೆ. ಈ ದೇವತೆಗಳು ಚತುರಶ್ರಮಂಡಲದ ಪ್ರಥಮರೇಖೆಯಲ್ಲಿ ಪೂಜಿಸಲ್ಪಡುವರು. ||೧||

ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ, ಮಹಾಲಕ್ಷ್ಮೀ ಎಂಬ ಈ ಎಂಟು ದೇವತೆಗಳೂ ಮಹಾದೇವಿಯ ವಿಭೂತಿರೂಪರು. ನಿತ್ಯಳಾದ ದೇವಿಗೆ ಔಪಾಧಿಕವಾಗಿ ಅನೇಕ ವಿಧದ ಉತ್ಪತ್ತಿಯನ್ನು ಪ್ರತಿಪಾದಿಸುವ ಸಂದರ್ಭಗಳಲ್ಲಿ ಅಸುರರವಧಾರ್ಥವಾಗಿ ಬ್ರಹ್ಮಾದಿ ದೇವತೆಗಳಿಂದ ಆವಿರ್ಭವಿಸಿರುವ ಶಕ್ತಿಪೂರ್ಣರಾದ ದೇವತೆಗಳೆಂದು ದೇವೀರಹಸ್ಯಮಂತ್ರಗಳಲ್ಲಿ ಹೇಳಲ್ಪಟ್ಟಿದೆ. ಬ್ರಹ್ಮಾದಿ ದೇವತೆಗಳ ಆಯುಧ-ವಾಹನಗಳಿಂದಲೇ ಈ ಶಕ್ತಿದೇವತೆಗಳೂ ಅಲಂಕೃತವಾಗಿರುವರು. ಅಂತಹ ದೇವತೆಗಳ ಸಮಷ್ಟಿರೂಪಳಾದ ದೇವಿಗೆ ನಮಸ್ಕಾರವನ್ನು ಮಾಡುವಂತೆ ಮೊದಲು ಸಮಷ್ಟಿಮಂತ್ರವೂ ತರುವಾಯ ವ್ಯಷ್ಟಿ

ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಔಂ ಚಾಮುಂಡಾ ಶಕ್ತಿಸ್ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಮಹಾಲಕ್ಷ್ಮೀಸ್ತಸ್ಯೈ ವೈ ನಮೋ ನಮಃ ॥೨॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಮುದ್ರಾದಶಕಂ ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ದ್ರಾಂ ಸರ್ವಸಂಕ್ಷೋಭಿಣೀ ಮುದ್ರಾ ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ದ್ರೀಂ ದ್ರಾವಿಣೀ ಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕ್ಲೀಂ ಸರ್ವಾಕರ್ಷಿಣೀ ಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಬ್ಲೂಂ ಸರ್ವವಶಂಕರೀ ಮುದ್ರಾ ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸಃ ಉನ್ಮಾದಿನೀ ಮುದ್ರಾ ತಸ್ಯೈ ವೈ ನಮೋ ನಮಃ। ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕ್ರೋಂ ಮಹಾಂಕುಶಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸ್ ಖ್ ಫ್ರೇಂ ಖೇಚರೀ ಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸೌಂ ಬೀಜಮುದ್ರಾ ತಸ್ಯೈ ವೈ ನಮೋ ನಮಃ। ಹ್ರೀ ಶ್ರೀಂ ಯಾ ವೈ ಶಿವಾ ಭಗವತೀ ಐಂ ಸರ್ವಯೋನಿಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸೌಂ ತ್ರಿಖಂಡಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪ್ರಥಮಚಕ್ರೇಶ್ವರೀ ತ್ರಿಪುರಾ ದೇವೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅಣಿಮಾದಿಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸಂಕ್ಷೋಭಿಣೀ ಮುದ್ರಾ ತಸ್ಯೈ ವೈ ನಮೋ ನಮಃ ॥೩॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕಾಮಾಕರ್ಷಿಣ್ಯಾದಿಷೋಡಶಕಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕಾಮಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಬುದ್ಧ್ಯಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾಭಗವತೀ ಅಹಂಕಾರಾಕರ್ಷಿಣೀ ತಸ್ಯೈ ವೈ ನಮೋ ನಮಃ । ಯಾ ವೈ ಶಿವಾ ಭಗವತೀ ಶಬ್ದಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸ್ಪರ್ಶಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ರೂಪಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ರಸಾಕರ್ಷಿಣೀ

ಯಾಗಿ ನಮಸ್ಕಾರ ವಿಧಿಗೆ ಅನುಕೂಲವಾಗುವಂತಹ ಪ್ರತ್ಯೇಕವಮಾತೃದೇವತಾ ನಾಮಧೇಯದಿಂದ ಕೂಡಿದ ಎಂಟು ಮಂತ್ರಗಳೂ ಕ್ರಮವಾಗಿರುವುವು. ಈ ದೇವತೆ ಗಳು ದ್ವಿತೀಯ ರೇಖೆಯಲ್ಲಿ ಪೂಜಾರ್ಹರು. ॥೨॥

ಇವು ಮುದ್ರಾದಶಕಸ್ವರೂಪಳಾದ ದೇವಿಯನ್ನು ನಮಸ್ಕರಿಸಲು ಅಂಗವಾದ ಮಂತ್ರಗಳು. ಇಲ್ಲಿ ಹತ್ತು ಮುದ್ರೆಗಳು ಸಮಷ್ಟಿ (ಸಂಕ್ಷೇಪ) ಉಕ್ತಿಯಿಂದ ಹೇಳಲ್ಪಟ್ಟಿ ರುತ್ತವೆ. ಮುಂದೆ ಒಂದೊಂದು ಮುದ್ರೆಯು ವಿಶೇಷ ನಾಮಪದದಿಂದ ಕೂಡಿ ನಮ ಸ್ಕಾರ ಬೋಧಕವಾದ ಹತ್ತು ಮಂತ್ರಗಳು ಕ್ರಮವಾಗಿವೆ. ಆ ಹತ್ತು ಮುದ್ರೆಗಳು:— ಸರ್ವಸಂಕ್ಷೋಭಿಣೀ, ಸರ್ವವಿದ್ರಾವಿಣೀ, ಸರ್ವಾಕರ್ಷಿಣೀ, ಸರ್ವವಶಂಕರೀ, ಉನ್ಮಾದಿನೀ, ಮಹಾಂಕುಶಃ, ಖೇಚರೀ, ಬೀಜಮ್, ಸರ್ವಯೋನಿಃ, ತ್ರಿಖಂಡಾ ಎಂಬ ಹೆಸರುಗಳನ್ನು ಹೊಂದಿವೆ. ಈ ಮುದ್ರಾಸ್ವರೂಪಗಳನ್ನು ಮಂತ್ರಶಾಸ್ತ್ರಗ್ರಂಥ ಗಳಲ್ಲಿಯೂ ತ್ರಿಪುರಾತಾಪಿನೀ ಮುಂತಾದ ಉಪನಿಷತ್ತುಗಳಲ್ಲಿಯೂ ತಿಳಿಯಬಹುದು. ಈ ಮಂತ್ರಗಳಲ್ಲಿ ಆಯಾಯ ಮುದ್ರೆಗಳ ನಾಮಪದದ ಹಿಂದೆ ದ್ರಾಂ, ದ್ರೀಂ ಮುಂತಾದ ಬೀಜಾಕ್ಷರಗಳು ಯಥಾವಿಧಿಯಾಗಿ ಸೇರಿಸಲ್ಪಟ್ಟಿವೆ. ಪ್ರತಿಯೊಂದು ಆವರ ಣಾರ್ಚನೆಯ ಸಮಾಪ್ತಿಯಲ್ಲಿ ಇವುಗಳಲ್ಲಿ ಒಂದೊಂದು ಮುದ್ರೆಯನ್ನು ರಚಿಸಿ ಅದರ ಮಹಿಮೆಯನ್ನು ಮಂತ್ರದಿಂದ ಸ್ಮರಿಸಬೇಕು. ಮತ್ತು ಒಂದೊಂದು ಸಿದ್ಧಿಯನ್ನೂ ಮಾತೃಗಣವನ್ನೂ ಅರ್ಚಿಸಬೇಕು. ಶಿವಸ್ವರೂಪಳೂ ಭಗವತಿಯೂ ಪ್ರಥಮ ಚಕ್ರೇಶ್ವರಿಯೂ ಆದ ತ್ರಿಪುರಾದೇವಿಗೆ ನಮಸ್ಕಾರವು. ಈ ತ್ರಿಪುರಾದೇವಿಯು ಹಿಂದೆ ಹೇಳಿರುವ ಅಣಿಮಾ ಸಿದ್ಧಿಸ್ವರೂಪಳೂ, ಸರ್ವಸಂಕ್ಷೋಭಿಣೀ ಎಂಬ ಮುದ್ರಾ ಸ್ವರೂಪಳೂ ಆಗಿರುವಳು. ॥೩॥

ಮುಂದೆ ಕಾಮಾಕರ್ಷಿಣೀ ಮುಂತಾದ ಹದಿನಾರು ಶಕ್ತಿ ದೇವತಾ ಸ್ವರೂಪ ಗಳನ್ನು ಮಂತ್ರಗಳು ಬೋಧಿಸುತ್ತವೆ. ಪ್ರತಿಯೊಂದು ವಾಕ್ಯದ ಆದಿಯಲ್ಲಿ ಹ್ರೀಂ-ಶ್ರೀಂ ಎಂಬ ದೇವೀತಾರದ್ವಯ ರೂಪವಾದ ಬೀಜಾಕ್ಷರಗಳೂ ಶಿವಾ ಭಗವತೀ ಎಂಬ ವಿಶೇಷಣಗಳೂ ಹೇಳಲ್ಪಟ್ಟಿರುತ್ತವೆ. ಕಾಮಕರ್ಷಿಣೀ ಮುಂತಾದ ಹದಿನಾರು ದೇವತಾಸ್ವರೂಪಳೆಂದು ಸಮಷ್ಟಿರೂಪದಿಂದ ಒಂದು ಬಾರಿ ಹೇಳಿ ಅವನ್ನು ಆಯಾಯ ದೇವತಾನಾಮವನ್ನು ಪ್ರತ್ಯೇಕವಾಗಿ ಉಚ್ಚರಿಸಿ ಆಯಾಯ ದೇವತಾ ಸ್ವರೂಪಳೆಂಬುದನ್ನು ಮತ್ತೊಂದು ಬಾರಿ ವಿಸ್ತಾರವಾಗಿ ಮುಂದಿನ ವಾಕ್ಯಗಳು ವರ್ಣಿಸಿರುತ್ತವೆ. ಆ ದೇವತಾನಾಮಗಳನ್ನು ಕ್ರಮವಾಗಿ ಮುಂದಿನ ವಾಕ್ಯಗಳಿಂದ ಈರೀತಿಯಾಗಿ ತಿಳಿಯಬಹುದು. ಕಾಮಾಕರ್ಷಿಣೀ, ಬುದ್ಧ್ಯಾಕರ್ಷಿಣೀ, ಅಹಂಕಾರಾ

ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಗಂಧಾ-ಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಚಿತ್ತಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಧೈರ್ಯಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸ್ಮೃತ್ಯಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ನಾಮಾ ಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಬೀಜಾ ಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಆತ್ಮಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅಮೃತಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಶರೀರಾಕರ್ಷಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ದ್ವಿತೀಯಚಕ್ರೇಶ್ವರೀ ತಸ್ಯೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಐಂ ಕ್ಲೀಂ ಸೌಃ ತ್ರಿಪುರೇಶ್ವರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀದ್ರೀಂ ಸರ್ವವಿದ್ರಾವಿಣೀಮುದ್ರಾ ತಸ್ಯೈ ವೈ ನಮೋ ನಮಃ ॥೪॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅನಂಗಕುಸುಮಾಷ್ಟಕಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕಂ ಖಂ ಗಂ ಘಂ ಙಂ ಅನಂಗಕುಸುಮಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಚಂ ಛಂ ಜಂ ಝಂ ಞಂ ಅನಂಗಮೇಖಲಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಟಂ ಠಂ ಡಂ ಢಂ ಣಂ ಅನಂಗಮದನಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ತಂ ಥಂ ದಂ ಧಂ ನಂ ಅನಂಗಮದನಾತುರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪಂ ಫಂ ಬಂ ಭಂ ಮಂ ಅನಂಗರೇಖಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಯಂ ರಂ ಲಂ ವಂ ಅನಂಗವೇಗಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಶಂ ಷಂ ಸಂ ಹಂ ಅನಂಗಾಂಕುಶಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಲಂ ಕ್ಷಂ ಅನಂಗಮಾಲಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ರೀಂ ಕ್ಲೀಂ ಸೌಃ ತೃತೀಯಚಕ್ರೇಶ್ವರೀ ತ್ರಿಪುರಸುಂದರೀ ದೇವೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ಯಾ ವೈ ಶಿವಾ ಭಗವತೀ ಕ್ಲೀಂ ಸರ್ವಾಕರ್ಷಿಣೀ ಮುದ್ರಾ ತಸ್ಯೈ ವೈ ನಮೋ ನಮಃ ॥೫॥

ಕರ್ಷಿಣೀ, ಶಬ್ದಾಕರ್ಷಿಣೀ, ಸ್ಪರ್ಶಾಕರ್ಷಿಣೀ, ರೂಪಾಕರ್ಷಿಣೀ, ರಸಾಕರ್ಷಿಣೀ, ಗಂಧಾಕರ್ಷಿಣೀ, ಚಿತ್ತಾಕರ್ಷಿಣೀ, ಧೈರ್ಯಾಕರ್ಷಿಣೀ, ಸ್ಮೃತ್ಯಾಕರ್ಷಿಣೀ, ನಾಮಾಕರ್ಷಿಣೀ, ಬೀಜಾಕರ್ಷಿಣೀ, ಆತ್ಮಾಕರ್ಷಿಣೀ, ಅಮೃತಾಕರ್ಷಿಣೀ, ಶರೀರಾಕರ್ಷಿಣೀ ಎಂಬುದಾಗಿ ಇವೆ. ಈ ದೇವತೆಗಳು ಷೋಡಶದಲ ಪದ್ಮದಲ್ಲಿ ಪೂಜಿಸಲ್ಪಡುವರು. ಶಿವಸ್ವರೂಪಳೂ ಭಗವತಿಯೂ ಐಂ ಕ್ಲೀಂ ಸೌಃ ಎಂಬ ಮಹಾ ಮಂತ್ರವರ್ಣಗಳಿಂದ ಪ್ರತಿಪಾದ್ಯಳೂ ದ್ರೀಂ ಎಂಬ ಬೀಜಾಕ್ಷರದ ಸರ್ವವಿದ್ರಾವಿಣೀ ಎಂಬ ಮುದ್ರಾರೂಪಿಣಿಯೂ ದ್ವಿತೀಯ ಚಕ್ರೇಶ್ವರಿಯೂ ಆದ ತ್ರಿಪುರೇಶ್ವರೀ ದೇವಿಗೆ ನಮಸ್ಕಾರವು. ||೪||

ಅನಂಗಕುಸುಮಾ ಮುಂತಾದ ಎಂಟು ದೇವತಾಸ್ವರೂಪಗಳನ್ನು ಭಾವಿಸಿ ನಮಸ್ಕರಿಸಬೇಕು. ಅನಂಗಕುಸುಮಾದಿ ದೇವತಾ ನಾಮಗಳು ಹಿಂದಿನಂತೆ ಸಮಷ್ಟಿ ರೂಪದಿಂದ ಮೊದಲು ಒಂದು ವಾಕ್ಯದಿಂದ ಹೇಳಲ್ಪಟ್ಟು ತರುವಾಯ ಪ್ರತ್ಯೇಕವಾಗಿ ವಿವರಿಸಲ್ಪಟ್ಟಿವೆ. ಪ್ರತಿಯೊಂದು ದೇವತಾನಾಮ ಮಂತ್ರದ ಆದಿಯಲ್ಲಿ ವರ್ಣಮಾಲೆಯಲ್ಲಿನ ವ್ಯಂಜನಗಳನ್ನು ಕಾದಿಪಂಚವರ್ಗ ಯರಲವ, ಶಷಸಹ, ಳಕ್ಷ ಎಂಬ ತ್ರಿವರ್ಗಗಳನ್ನು ಎಂಟು ವರ್ಗಗಳನ್ನಾಗಿ ಭಾಗ ಮಾಡಿ ಪ್ರತಿಯೊಂದು ವ್ಯಂಜನಕ್ಕೂ "ಅಂ" ಎಂಬ ಸ್ವರವನ್ನು ಕೂಡಿಸಿ, ಅಂತಹ ಒಂದೊಂದು ಭಾಗವನ್ನೂ ಸೇರಿಸಿ ಪಠಿಸಲ್ಪಟ್ಟಿವೆ. ಅನಂಗಕುಸುಮಾ ಮುಂತಾದ ದೇವತಾನಾಮಗಳು ಅನಂಗಕುಸುಮಾ, ಅನಂಗಮೇಖಲಾ, ಅನಂಗಮದನಾ, ಅನಂಗಮದನಾತುರಾ, ಅನಂಗರೇಖಾ, ಅನಂಗವೇಗಾ, ಅನಂಗಾಂಕುಶಾ, ಅನಂಗಮಾಲಿನೀ ಎಂದು ಎಂಟು ವಿಧವಾಗಿ ತಿಳಿಯಬೇಕು. ಈ ದೇವತೆಗಳು ಅಷ್ಟದಲ ಪದ್ಮದಲ್ಲಿ ಪೂಜಿಸಲ್ಪಡುವರು. ಈ ಎಂಟು ದೇವತಾಸ್ವರೂಪಳೂ ಆಯಾಯ ಮುದ್ರಾಸಿದ್ಧಿ ಸ್ವರೂಪಳೂ ತೃತೀಯ ಚಕ್ರೇಶ್ವರಿಯೂ ಆದ ತ್ರಿಪುರಸುಂದರೀ ದೇವಿಗೆ ನಮಸ್ಕಾರವು. ||೫||

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸಂಕ್ಷೋಭಿಣ್ಯಾದಿ ಚತುರ್ದಶಕಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸಂಕ್ಷೋಭಿಣೀ ಶಕ್ತಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವವಿದ್ರಾವಿಣೀ ಶಕ್ತಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಾಕರ್ಷಿಣೀ ಶಕ್ತಿ-ಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಾಹ್ಲಾದಿನೀ ಶಕ್ತಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸಂಮೋಹಿನೀ ಶಕ್ತಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸ್ತಂಭಿನೀ ಶಕ್ತಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಜೃಂಭಿಣೀ ಶಕ್ತಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವರಂಜನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವವಶಂಕರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವೋನ್ಮಾದಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಾರ್ಥಸಾಧಕೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸಂಪತ್ತಿಪೂರಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವ-ಮಂತ್ರಮಯೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವದ್ವಂದ್ವಕ್ಷಯಂಕರೀ ದೇವೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಐಂ ಕ್ಲೀಂ ಸೌಃ ತ್ರಿಪುರವಾಸಿನೀ ದೇವೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಈಶಿತ್ವಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಬ್ಲೂಂ ಸರ್ವವಶಂಕರೀ ಮುದ್ರಾ ತಸ್ಯೈ ವೈ ನಮೋ ನಮಃ ॥೬॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸಿದ್ಧಿಪ್ರದಾದಿದಶಕಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವ-ಸಿದ್ಧಿಪ್ರದಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗ-ವತೀ ಸರ್ವಸಂಪತ್ಪ್ರದಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಪ್ರಿಯಂಕರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಮಂಗಳಕಾರಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಕಾಮಪ್ರದಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವದುಃಖ-

ದೇವಿಯುನ್ನು ಸರ್ವಸಂಕ್ಷೋಭಿಣೀ ಮುಂತಾದ ಶಕ್ತಿಸ್ವರೂಪಳೆಂದು ಈ ಮಂತ್ರಗಳು ಹಿಂದಿನಂತೆ ಸಮಷ್ಟಿವ್ಯಷ್ಟಿರೂಪಗಳಿಂದ ಹೇಳುತ್ತವೆ. ಸರ್ವಸಂಕ್ಷೋಭಿಣೀ ಮುಂತಾದ ಹದಿನಾಲ್ಕು ಶಕ್ತಿಗಳ ಹೆಸರುಗಳನ್ನು ಈ ರೀತಿಯಾಗಿ ತಿಳಿಯಬಹುದು :—ಸರ್ವಸಂಕ್ಷೋಭಿಣೀ, ಸರ್ವವಿದ್ರಾವಿಣೀ, ಸರ್ವಾಕರ್ಷಿಣೀ, ಸರ್ವಾಹ್ಲಾದಿನೀ, ಸರ್ವಸಂಮೋಹಿನೀ, ಸರ್ವಸ್ತಂಭಿನೀ, ಸರ್ವಜೃಂಭಿಣೀ, ಸರ್ವರಂಜನೀ, ಸರ್ವವಶಂಕರೀ, ಸರ್ವೋನ್ಮಾದಿನೀ, ಸರ್ವಾರ್ಥಸಾಧಕೀ, ಸರ್ವಸಂಪತ್ತಿಪೂರಣೀ, ಸರ್ವಮಂತ್ರಮಯೀ, ಸರ್ವದ್ವಂದ್ವಕ್ಷಯಂಕರೀ, ಎಂಬುವು ಹದಿನಾಲ್ಕು ಶಕ್ತಿಗಳ ಹೆಸರು. ಇಲ್ಲಿಯೂ “ಶಿವಾ-ಭಗವತೀ” ಎಂಬ ವಿಶೇಷಣಗಳೂ ಹ್ರೀಂ ಶ್ರೀಂ ಎಂಬ ಬೀಜಮಂತ್ರಗಳೂ ಸೇರಿವೆ. ಈ ಹದಿನಾಲ್ಕು ದೇವತೆಗಳು ಚತುರ್ದಶಾರಚಕ್ರದಲ್ಲಿ ಪೂಜಿಸಲ್ಪಡಬೇಕು. ಚತುರ್ಥ ಚಕ್ರೇಶ್ವರಿಯಾದ ತ್ರಿಪುರವಾಸಿನೀದೇವಿಯು, ಈಶಿತ್ವಸಿದ್ಧಿರೂಪಳೂ, ಸರ್ವವಶಂಕರೀ ಮುದ್ರಾರೂಪಳೂ ಆಗಿರುವಳು. ಆ ದೇವಿಗೆ ನಮಸ್ಕಾರವು. ||೬||

ಪಂಚಮಚಕ್ರೇಶ್ವರಿಯಾದ ತ್ರಿಪುರಾ ಶ್ರೀದೇವಿಯು ಸರ್ವಸಿದ್ಧಿಪ್ರದಾ ಮುಂತಾದ ಹೆಸರುಗಳುಳ್ಳ ಹತ್ತು ಆವರಣದೇವತಾಸ್ವರೂಪಳೂ, ವಶಿತ್ವಸಿದ್ಧಿ, ಉನ್ಮಾದಿನೀ ಮುದ್ರಾರೂಪಿಣಿಯೂ ಆಗಿರುವಳು. ಅಂತಹ ದೇವಿಗೆ ನಮಸ್ಕಾರವು ಎಂದು ಮಂತ್ರಕ್ಕೆ ಅರ್ಥ, ಹ್ರೀಂ ಶ್ರೀಂ ಮುಂತಾದ ಬೀಜಾಕ್ಷರಗಳ ಯೋಜನೆಯು ಮಂತ್ರವಾಕ್ಯಗಳಲ್ಲಿ ಮೊದಲಿನಂತೆ ಸಂಪ್ರದಾಯ ಸಿದ್ಧವಾದುದು. ಸರ್ವಸಿದ್ಧಿಪ್ರದಾ ಮುಂತಾದ ಹತ್ತು ದೇವತೆಗಳ ಹೆಸರುಗಳನ್ನು ಈ ರೀತಿಯಾಗಿ ವಿವರಿಸಿದೆ :— ಸರ್ವಸಿದ್ಧಿಪ್ರದಾ, ಸರ್ವಸಂಪತ್ಪ್ರದಾ, ಸರ್ವಪ್ರಿಯಂಕರೀ, ಸರ್ವಮಂಗಳಕಾರಿಣೀ, ಸರ್ವಕಾಮಪ್ರದಾ, ಸರ್ವದುಃಖವಿಮೋಚಿನೀ, ಸರ್ವಮೃತ್ಯುಪ್ರಶಮನೀ, ಸರ್ವ

ವಿಮೋಚನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಮೃತ್ಯುಪ್ರಶಮನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವವಿಘ್ನನಿವಾರಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಾಂಗಸುಂದರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಸೌಭಾಗ್ಯ-ದಾಯಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸ್ಯೈಂ ಹ್ ಸ್ ಲೀಂ ಹ್ ಸೌಃ ಪಂಚಮಚಕ್ರೇಶ್ವರೀ ತ್ರಿಪುರಾ ಶ್ರೀಃ ತಸ್ತ್ರೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ವಶಿತ್ವಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಉನ್ಮಾದಿನೀ ಮುದ್ರಾ ತಸ್ಯೈ ವೈ ನಮೋ ನಮಃ ॥೭॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಜ್ಞಾದಿದಶಕಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಜ್ಞಶಕ್ತಿ-ಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಶಕ್ತಿದೇವೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವೈಶ್ವರ್ಯಪ್ರದಾಯಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಜ್ಞಾನಮಯಿೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವವ್ಯಾಧಿ-ವಿನಾಶಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗ-ವತೀ ಸರ್ವಾಧಾರಸ್ವರೂಪಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಪಾಪಹರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಾನಂದಮಯಿೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವರಕ್ಷಾ-ಸ್ವರೂಪಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವೇಪ್ಸಿತಫಲಪ್ರದಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ರೀಂ ಕ್ಲೀಂ ಬ್ಲೇಂ ತ್ರಿಪುರಾಮಾಲಿನೀ ನಿತ್ಯಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪ್ರಾಕಾಮ್ಯಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕ್ರೋಂ ಮಹಾಂಕುಶಮುದ್ರಾ ತಸ್ಯೈ ವೈ ನಮೋ ನಮಃ ॥೮॥

ವಿಘ್ನನಿವಾರಿಣೀ, ಸರ್ವಾಂಗಸುಂದರೀ, ಸರ್ವಸೌಭಾಗ್ಯದಾಯಿನೀ, ಎಂಬುದಾಗಿವೆ. ಈ ದೇವತೆಗಳು ಬಹಿರ್ದಶಾರ ಚಕ್ರದಲ್ಲಿ ಪೂಜಿಸಲ್ಪಡುವರು. ||೭||

ಷಷ್ಠಚಕ್ರೇಶ್ವರಿಯು ತ್ರಿಪುರಾಮಾಲಿನೀ ನಿತ್ಯಾದೇವಿಯು. ಈ ದೇವತೆಯು ಸರ್ವಜ್ಞಾಶಕ್ತಿ ಮುಂತಾದ ಹತ್ತು ಶಕ್ತಿದೇವತಾಸ್ವರೂಪಳಾಗಿರುವಳು. ಆವರಣ ದೇವತಾ ಸ್ವರೂಪರಾದ ಆ ಹತ್ತು ಶಕ್ತಿದೇವತೆಗಳು ಯಾವುವೆಂದರೆ:—ಸರ್ವಜ್ಞಾ ಶಕ್ತಿ, ಸರ್ವಶಕ್ತಿ, ಸರ್ವೈಶ್ವರ್ಯಪ್ರದಾಯಿನೀ, ಸರ್ವಜ್ಞಾನಮಯೀ, ಸರ್ವವ್ಯಾಧಿ ವಿನಾಶಿನೀ, ಸರ್ವಾಧಾರಸ್ವರೂಪಿಣೀ, ಸರ್ವಪಾಪಹರಾ, ಸರ್ವಾನಂದಮಯೀ, ಸರ್ವರಕ್ಷಾಸ್ವರೂಪಿಣೀ, ಸರ್ವೇಪ್ಸಿತಫಲಪ್ರದಾ ಎಂದು ಪ್ರಸಿದ್ಧವಾಗಿರುವುವು. ಈ ದೇವತೆಗಳನ್ನು ಅಂತರ್ದಶಾರದಲ್ಲಿ ಪೂಜಿಸುವರು. ಈ ಆವರಣದೇವತಾ ಸ್ವರೂಪಳೂ ಪ್ರಾಕಾಮ್ಯವೆಂಬ ಸಿದ್ಧಿಗೆ ಅಧಿಪಳೂ, ಕ್ರೋಂಬೀಜಾಕ್ಷರಸಹಿತ ಅಂಕುಶ ಮುದ್ರಾ ಅಭಿಮಾನಿನಿಯೂ ಆಗಿರುವಳು. ಹ್ರೀಂ ಶ್ರೀಂ ಮುಂತಾದ ಬೀಜಾಕ್ಷರಗಳು ಹಿಂದಿನಂತೆ ಇಲ್ಲಿಯೂ ಸೇರಿರುವುವು. ||೮||

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ವಶಿನ್ಯಾದ್ಯಷ್ಟಕಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಅಂ ಆಂ ಇಂ ಈಂ ಉಂ ಊಂ ಋಂ ೠಂ ఌಂ ౡಂ ಏಂ ಐಂ ಓಂ ಔಂ ಅಂ ಅಃ ವಶಿನೀ ವಾಗ್ವಾದಿನೀ ದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕಂ ಖಂ ಗಂ ಘಂ ಙಂ ಕಲಹ್ರೀಂ ಕಾಮೇಶ್ವರೀ ವಾಗ್ದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಚಂ ಛಂ ಜಂ ಝಂ ಞಂ ಕ್ಲೀಂ ಮೋದಿನೀ ವಾಗ್ದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಟಂ ಠಂ ಡಂ ಢಂ ಣಂ ಹ್ಲ್ರೂಂ ವಿಮಲಾ ವಾಗ್ದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ತಂ ಥಂ ದಂ ಧಂ ನಂ ಅರುಣಾ ವಾಗ್ದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪಂ ಫಂ ಬಂ ಭಂ ಮಂ ಹಸಲವ್ರ್ಯೂಂ ಜಯಿನೀ ವಾಗ್ದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಯಂ ರಂ ಲಂ ವಂ ಹ್ ಸ್ಮ್ರ್ಯೂಂ ಸರ್ವೇಶ್ವರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಶಂ ಷಂ ಸಂ ಹಂ ಕ್ಷ್ಮ್ರೀಂ ಕೌಲಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ರೀಂ ಶ್ರೀಂ ಸೌಃ ಸಪ್ತಮಚಕ್ರೇಶ್ವರೀ ತಸ್ಯೈ ವೈ ನಮೋ ನಮಃ । ಹ್ರೀ ಶ್ರೀಂ ಯಾ ವೈ ಶಿವಾ ಭಗವತೀ ತ್ರಿಪುರಾಸಿದ್ಧಾ ನಿತ್ಯಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಭುಕ್ತಿಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸ್ ಖ್ ಫ್ರೇಂ ಖೇಚರೀ ತಸ್ಯೈ ವೈ ನಮೋ ನಮಃ ॥೯॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಯಾಂ ರಾಂ ಲಾಂ ವಾಂ ಶಾಂ ದ್ರಾಂ ದ್ರೀಂ ಕ್ಲೀಂ ಬ್ಲೂಂ ಸಃ ಬಾಣಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಧಂ ಥಂ ಸಂ ಮೋಹನಕೋದಂಡರೂಪಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಆಂ ಹ್ರೀಂ ಪಾಶರೂಪಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕ್ರೋಂ ಅಂಕುಶರೂಪಿಣೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸ್ಯೆಂ ಹ್ ಸ್ ಲೀಂ ಹ್ ಸೌಃ ತ್ರಿಪುರಜನನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ

ಸಪ್ತಮಚಕ್ರೇಶ್ವರಿಯ ನಮಸ್ಕಾರ ಮತ್ತು ಪೂಜಾಂಗ ಮಂತ್ರವಾಕ್ಯಗಳು. ವಶಿನ್ಯಾದಿಗಳು ಎಂಟು ರಹಸ್ಯಯೋಗಿನೀ ದೇವತೆಗಳು ಸಮಷ್ಟಿವ್ಯಷ್ಟಿ ರೂಪಗಳಿಂದ ಹೇಳಲ್ಪಟ್ಟಿರುವರು. ವಶಿನೀ, ಕಾಮೇಶ್ವರೀ, ಮೋದಿನೀ, ವಿಮಲಾ, ಅರುಣಾ, ಜಯಿನೀ, ಸರ್ವೇಶ್ವರೀ, ಕೌಲಿನೀ ಎಂದು ಕ್ರಮವಾದ ಎಂಟು ಹೆಸರುಗಳಿಂದ ಕೂಡಿದ ಎಂಟು ವಶಿನ್ಯಾದಿ ದೇವತಾಸ್ವರೂಪಳಾದ ತ್ರಿಪುರಾಸಿದ್ಧಾ ನಿತ್ಯಾತ್ಮಕಳಾದ ಸಪ್ತಮ ಚಕ್ರೇಶ್ವರಿಯು ಭುಕ್ತಿಸಿದ್ಧಿ ಅಧಿಪತಿಯೂ ಖೇಚರೀಮುದ್ರಾ ಅಭಿಮಾನಿನಿಯೂ ಆಗಿರುವಳು. ಹ್ರೀಂ ಶ್ರೀಂ ಮುಂತಾದ ದೇವೀ ಬೀಜಾಕ್ಷರಗಳೊಡನೆ ವಶಿನ್ಯಾದಿ ದೇವತಾ ಬೀಜಗಳಾದ ಅನುಸ್ವಾರಸಹಿತವಾದ ಮಾತೃಕಾವರ್ಣಗಳೂ ಮತ್ತು ದೇವೀ ಮಂತ್ರ–ಮುದ್ರಾ ಬೀಜಾಕ್ಷರಗಳೂ ಸಂಪ್ರದಾಯಪಾಠಾನುಸಾರವಾಗಿ ಬಂದಿರುವುವು. ಮಧ್ಯದ ಅಷ್ಟಾಸ್ರಚಕ್ರದಲ್ಲಿ ವಶಿನ್ಯಾದಿದೇವತೆಗಳು ಪೂಜಿಸಲ್ಪಡುವರು. ||೯||

ಅಷ್ಟಮಚಕ್ರೇಶ್ವರಿಯು ತ್ರಿಪುರಜನನೀದೇವಿಯು. ಈ ದೇವಿಯು ಬಾಣ, ಕೋದಂಡ, ಪಾಶ, ಅಂಕುಶವೆಂಬ ಆಯುಧಸ್ವರೂಪಳೂ ಇಚ್ಛಾಸಿದ್ಧಿ, ಬೀಜ ಮುದ್ರಾ ಅಭಿಮಾನಿದೇವತಾಸ್ವರೂಪಳೂ ಆಗಿರುವಳು. ತ್ರ್ಯಸ್ರಚಕ್ರದ ಹೊರ ಭಾಗದ ನಾಲ್ಕು ದಿಕ್ಕುಗಳಲ್ಲಿ ಈ ಆಯುಧದೇವತೆಗಳು ಪೂಜ್ಯರು. ಮತ್ತು ಮಧ್ಯ ತ್ರಿಕೋಣ ಬಿಂದುಗಳಲ್ಲಿ ವಾಗ್ಭವಕೂಟ ಅಧಿಷ್ಠಿತಳಾದ ಕಾಮೇಶ್ವರೀ, ಕಾಮರಾಜ ಕೂಟ ಅಧಿಷ್ಠಿತಳಾದ ವಜ್ರೇಶ್ವರೀ, ಶಕ್ತಿಕೂಟಾಧಿಷ್ಠಿತಳಾದ ಭಗಮಾಲಿನೀ ಎಂಬ ದೇವತೆಗಳನ್ನು ಪೂಜಿಸಬೇಕು. ಮತ್ತು ಕಾಮೇಶ್ವರ್ಯಾದಿ ದೇವತಾಸ್ವರೂಪಳೂ

ಯಾ ವೈ ಶಿವಾ ಭಗವತೀ ಇಚ್ಛಾಸಿದ್ಧಿಸ್ತಸ್ಯೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸೌಂ ಬೀಜಮುದ್ರಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕಾಮೇಶ್ವರ್ಯಾದಿದೇವತಾ-ತ್ರಯಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗ-ವತೀ ವಾಗ್ಭವಕೂಟೇ ಕಾಮೇಶ್ವರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಕಾಮರಾಜಕೂಟೇ ವಜ್ರೇಶ್ವರೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಶಕ್ತಿಕೂಟೇ ಭಗಮಾಲಿನೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ ಸ ಕ ಲ ರ ಡ್ಯೈಂ ಹ ಸ ಕ ಲ ರ ಡಾಂ ಹ ಸ ಕ ಲ ರ ಡ್ಯೈಂ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಪ್ರಾಪ್ತಿಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಐಂ ಯೋನಿಮುದ್ರಾ ತಸ್ಯೈ ವೈ ನಮೋ ನಮಃ ॥೧೦॥

ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಓಂಕಾರಪೀಠದೇವತಾ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಾತ್ಮಕೇನ ಸರ್ವೇಶ್ವರೀ ದೇವೀ ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಕಾಮಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ತ್ರಿಪುರಸುಂದರೀ ತ್ರಿಪುರ-ವಾಸಿನೀ ತ್ರಿಪುರಾಶ್ರೀಃ ತ್ರಿಪುರಮಾಲಿನೀ ತ್ರಿಪುರಾಸಿದ್ಧಿಸ್ತ್ರಿಪುರಜನನೀ ತ್ರಿಪುರ-ಭೈರವೀ ತಾಭ್ಯೋ ವೈ ನಮೋ ನಮಃ । ಹ್ರೀ ಶ್ರೀಂ ಯಾ ವೈ ಶಿವಾ ಭಗವತೀ ಸರ್ವಕಾಮಸಿದ್ಧಿಸ್ತಸ್ಯೈ ವೈ ನಮೋ ನಮಃ । ಹ್ರೀಂ ಶ್ರೀಂ ಯಾ ವೈ ಶಿವಾ ಭಗವತೀ ಹ್ ಸೌಂ ತ್ರಿಖಂಡಮುದ್ರಾ ತಸ್ಯೈ ವೈ ನಮೋ ನಮಃ ॥೧೧॥

ಪ್ರಾಪ್ತಿಸಿದ್ಧಿಗೆ ಅಧಿಪತಿಯೂ ಯೋನಿಮುದ್ರಾ ಅಭಿಮಾನಿನಿಯೂ ಆಗಿರುವಳು ಎಂದು ಧ್ಯಾನಿಸಬೇಕು. ಬೀಜ ಅಕ್ಷರಗಳ ಸಂಯೋಜನೆಯು ಹಿಂದಿನಂತೆ ಸಂಪ್ರದಾಯ ಬದ್ಧವು. ||೧೦||

ನವಮಚಕ್ರೇಶ್ವರಿಯಾದ ಮಹಾತ್ರಿಪುರಸುಂದರೀ ದೇವಿಯು ಓಂಕಾರ ಪೀಠಾಧಿಪತಿಯೂ ಸರ್ವೇಶ್ವರಿಯೂ, ಸರ್ವಕಾಮಸಿದ್ಧಿಗೆ ಅಭಿಮಾನಿಯೂ ತ್ರಿಪುರ ಸುಂದರೀ ಮೊದಲಾದ ನವಾವರಣದೇವೀಸ್ವರೂಪಳೂ ತ್ರಿಖಂಡಮುದ್ರಾಭಿಮಾನಿಯೂ ಆಗಿ ಇರುವಳೆಂದು ಈ ಮಂತ್ರಗಳ ಅರ್ಥವು. ಬೀಜಾಕ್ಷರಗಳು ಮೊದಲಿನಂತೆ ಇಲ್ಲಿಯೂ ಸೇರಿಕೊಂಡಿವೆ. ಇಲ್ಲಿಗೆ ಉಪನಿಷತ್ತಿನಲ್ಲಿ ಪ್ರತಿಪಾದಿಸಬೇಕಾದ ವಿಷಯಗಳು ಮುಗಿದಿವೆ. ಮುಖ್ಯವಾಗಿ ಶ್ರೀಚಕ್ರ ಅರ್ಚನೆಯ ಪದ್ಧತಿಯಲ್ಲಿ ಪೂಜಾಂಗವಾಗಿರುವ ತ್ರೈಲೋಕ್ಯಮೋಹನಾದಿ ಒಂಬತ್ತು ಚಕ್ರಗಳಲ್ಲಿಯೂ ಕ್ರಮವಾಗಿ ಯೋಗಿನೀ ದೇವತಾ, ಚಕ್ರ, ಚಕ್ರೇಶ್ವರೀ, ಸಿದ್ಧಿ, ಮುದ್ರಾ ಎಂಬ ಐದು ಪೂಜ್ಯ ವಸ್ತುಗಳನ್ನು ಪೂಜಾ ನಮಸ್ಕಾರಮಾಡಬೇಕಾಗಿರುವುದರಿಂದ ಆ ಪೂಜ್ಯ ಸ್ವರೂಪವನ್ನು ಕ್ರಮವಾಗಿ ಈ ಉಪನಿಷತ್ತು ತೋರಿಸಿರುತ್ತದೆ. ಇದನ್ನು ಅನುಸರಿಸಿ ಪ್ರಯೋಗದಲ್ಲಿ ಕಲ್ಪಸೂತ್ರಕಾರರು ಪೂಜಾಕ್ರಮವನ್ನು ತೋರಿಸಿರುತ್ತಾರೆ. ಈ ವಾಕ್ಯಗಳನ್ನು ಅಧ್ಯಯನಮಾಡುವಾಗ ಅದೇ ಕ್ರಮದಿಂದ ಆಯಾಯ ಪದಾರ್ಥಗಳು ಸ್ಮರಣವಿಷಯವಾಗುವುದರಿಂದ ಅದರಂತೆ ಅನುಷ್ಠಾನಮಾಡಲು ಅನುಕೂಲಿಸುವುದು. ಕೇವಲವಾಗಿ ಈ ಉಪನಿಷತ್ಪಾಠವೂ ಕೂಡ ಮಹಾಫಲಪ್ರದ ವಾಗುವುದು. ||೧೧||

ಬ್ರಹ್ಮ ಬ್ರಹ್ಮವಿದಿತ್ಯೇತೈರ್ಮಂತ್ರೈರ್ಭಗವತೀಂ ಯಜೇತ್ । ಇತ್ಯಾಹ ಭಗವಾನ್ । ತತೋ ದೇವೀ ಸ್ವಾತ್ಮಾನಂದರ್ಶಯತಿ । ತಸ್ಮಾದ್ಯ ಏತೈರ್ಮಂತ್ರೈರ್ಯಜತಿ ಸ ಬ್ರಹ್ಮ ಪಶ್ಯತಿ । ಸ ಸರ್ವಂ ಪಶ್ಯತಿ । ಸೋಽಮೃತತ್ವಂ ಚ ಗಚ್ಛತಿ । ಯ ಏವಂ ವೇದ । ಇತಿ ಮಹೋಪನಿಷತ್ ॥೧೨॥

ಆಥರ್ವಣ ದ್ವಿತೀಯೋಪನಿಷತ್ ಸಮಾಪ್ತಾ.



ಈ ಮಂತ್ರಗಳಿಂದ ಪೂಜಿಸಿದ ಉಪಾಸಕನು ಬ್ರಹ್ಮಜ್ಞಾನಿಯಾಗಿ ಬ್ರಹ್ಮಸ್ವರೂಪನೇ ಆಗುವನು. ಬ್ರಹ್ಮಾತ್ಮೈಕ್ಯಸಿದ್ಧಿಯೆಂಬ ಮೋಕ್ಷವೇ ಇದಕ್ಕೆ ಮಹಾಫಲವು ಎಂದು ಭಗವಂತನು ಶಿಷ್ಯರಿಗೆ ಉಪದೇಶಮಾಡಿರುವನು. ಉಪಾಸ್ಯದೇವತೆಯನ್ನು ಪರಬ್ರಹ್ಮರೂಪದಿಂದ ಧ್ಯಾನಿಸಿದ್ದರಿಂದ ದೇವಿಯು ಪ್ರತ್ಯಕ್ಷಳಾಗಿ ತನ್ನ ಸ್ವರೂಪವನ್ನು ತೋರಿಸುವಳು. ಆದರಿಂದ ಚಿನ್ಮಾತ್ರಬ್ರಹ್ಮಸ್ವರೂಪಳಾದ ದೇವಿಯ ಸ್ವಸ್ವರೂಪವು ಅಪರೋಕ್ಷಾನುಭವಕ್ಕೆ ವಿಷಯವಾಗುವುದು. ಆದ್ದರಿಂದ ಉಪಾಸಕನು ಸರ್ವಾತ್ಮಕ ಬ್ರಹ್ಮವನ್ನು ಸಾಕ್ಷಾತ್ಕರಿಸುವುದರಿಂದ ಸರ್ವವನ್ನೂ ಸಾಕ್ಷಾತ್ಕಾರಮಾಡಿದವನಂತೆ ಸರ್ವಜ್ಞನಾಗಿ ಮೋಕ್ಷವನ್ನು ಹೊಂದುವನು. ಇದು ಜ್ಞಾನದ ಫಲಕೀರ್ತನವು. ಇಲ್ಲಿಗೆ ಈ ಮಹೋಪನಿಷತ್ತು ಸಮಾಪ್ತವು. ||೧೨||

ಆಥರ್ವಣ ದ್ವಿತೀಯೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



|| ಶ್ರೀರಸ್ತು ||

# || ಕಾಮರಾಜಕೀಲಿತೋದ್ಧಾರೋಪನಿಷತ್ ||

---

ಅಥೋವಾಚ ಕಾಮರಾಜವಮ್ ||೧||

ತದುಪಾಸನಾತ್ ಕುಶಲಂ ಲಭೇತ್ । ಶ್ರಿಯಂ ಲಭೇತ್ । ಗುರ್ವಿಣೀಂ ವಾಣೀಂ ಲಭೇತ್ । ಸರ್ವಯುವತೀನಾಂ ಪ್ರಿಯೋ ಭವೇತ್ ||೨||

ಪ್ರಥಮಂ ಕಾಮಸ್ತತಃ ಶಕ್ತಿಸ್ತದನು ತುರೀಯಂ ದ್ವಾವೇತೌ ಪರೈತಾನಿ ಪಂಚಾಕ್ಷರಾಣಿ ಭವಂತಿ । ತತಃ ಶೂನ್ಯಂ ಚ ದ್ವೌ ದಿವಾಕರಹಕಾರೌ । ತದನು ಗೋತ್ರಭೃನ್ಮಾಯಾ । ಏತಾನಿ ಷಡಕ್ಷರಾಣಿ ಭವಂತಿ । ತತಶ್ಚಂದ್ರಃ ಪ್ರಜಾಪತಿಶಕ್ರೌ । ತತೋ ಮಾಯಾ । ಏತಾನಿ ಚತುರಕ್ಷರಾಣಿ ಭವಂತಿ । ಆದ್ಯಂ ವಾಗ್ಭವಂ ದ್ವಿತೀಯಂ ಕಾಮರಾಜಂ ತೃತೀಯಂ ಶಕ್ತಿಬೀಜಂ ಶುಕ್ಲಂ ತರುಣ ದಿವಾಕರಾಭಂ ಶಶಿಕಾಂತಂ ಕ್ರಮೇಣ ಸ್ಮರೇತ್ ||೩||

|| ಶ್ರೀ ||

# ಕಾಮರಾಜಕೀಲಿತೋದ್ಧಾರೋಪನಿಷತ್ತಿನ ಕನ್ನಡ ಅನುವಾದವು.

---

ಅಥರ್ವವೇದದ ಹಲವಾರು ಶಾಖೆಗಳಲ್ಲಿ ಒಂದು ಶಾಖೆಗೆ ಕಾಮರಾಜ ಕೀಲಿತೋದ್ಧಾರೋಪನಿಷತ್ ಎಂಬ ಒಂದು ಉಪನಿಷತ್ತು ಸೇರಿದೆ. ಇದರ ಹೆಸರಿನಿಂದ ಕಾಮರಾಜಮಂತ್ರಕ್ಕೆ ಸಂಭವಿಸುವ ಕೀಲಿತ (ಕೀಲನ) ವಿಧಿಯನ್ನೂ ಅದನ್ನು ಪರಿಹಾರಮಾಡುವ ಉತ್ಕೀಲನವೆಂಬ ಉದ್ಧಾರವನ್ನೂ ತೋರಿಸುವ ಉಪನಿಷತ್ ಎಂಬ ಅರ್ಥವಾಗುವುದು. ಮಂತ್ರಪ್ರತಿಪಾದ್ಯವಾದ ಕಾಮರಾಜದೇವತೆಗೆ ಪರಮ ಶಿವನು ಇದನ್ನು ಉಪದೇಶಿಸಿರುವುದರಿಂದ ಗುರುವಿನಿಂದ ಮಾಡಲ್ಪಟ್ಟ ಶಿಷ್ಯ ಉಪದೇಶ ರೂಪವಾಗಿ ಈ ಉಪನಿಷತ್ತು ಹೊರಟಿದೆ. ಆದುದರಿಂದ ಆದಿಯಲ್ಲಿ ಕಾಮರಾಜನನ್ನು ಕುರಿತು ಉಪದೇಶವಾದಂತೆ ಸೂಚಿಸಲ್ಪಟ್ಟಿದೆ. ಪರಮಶಿವನು ಕಾಮರಾಜನೆಂಬ ಶಿಷ್ಯನಿಗೆ ಉಪದೇಶಿಸಿದನೆಂದು ಮೊದಲನೆಯ ವಾಕ್ಯದ ಅರ್ಥವು. ||೧||

ಈ ಉಪನಿಷತ್ತಿನಲ್ಲಿ ಪ್ರತಿಪಾದ್ಯವಾದ ಮಂತ್ರೋಪಾಸನೆಯ ಅನುಷ್ಠಾನ-ಶ್ರವಣಗಳಲ್ಲಿ ಪ್ರವೃತ್ತಿ ಹುಟ್ಟುವುದಕ್ಕೋಸ್ಕರ ಉಪಾಸನಾಫಲಗಳನ್ನು ಇಲ್ಲಿ ಹೇಳಿದೆ. ಕಾಮರಾಜೋಪಾಸನೆಯಿಂದ ಕ್ಷೇಮಪ್ರಾಪ್ತಿಯೂ, ಸಂಪತ್ಪ್ರಾಪ್ತಿಯೂ, ಮಹತ್ತಾದ ಅಥವಾ ಗಂಭೀರವಾದ ಭಾಷಣಶಕ್ತಿಯೂ ಉಂಟಾಗುವುವು. ಮತ್ತು ಮನ್ಮಥ ದೇವನನ್ನು ಮೀರಿಸುವ ಸುಂದರಾಕಾರವನ್ನು ಹೊಂದಿ ತರುಣಿಯರಿಗೆ ಮೋಹಕನೂ ಪ್ರಿಯನೂ ಆಗುವನು. ಇಂತಹ ಅನೇಕ ದೃಷ್ಟಪ್ರಯೋಜನಗಳ ಸಮೂಹವನ್ನು ಈ ಮಂತ್ರೋಪಾಸನೆಯು ಸಾಧಿಸಿಕೊಡುತ್ತದೆ. ||೨||

ಮಂತ್ರದಲ್ಲಿರುವ ವರ್ಣಗಳನ್ನು ಉದ್ಧರಿಸಿ ಆ ವರ್ಣಸಮೂಹಗಳಿಂದ ಖಂಡತ್ರಯವನ್ನು ಕಲ್ಪಿಸಿ ಪ್ರತ್ಯೇಕಖಂಡಗಳಲ್ಲಿ ಧ್ಯಾನಿಸಬೇಕಾದ ವರ್ಣವಿಶೇಷ ಗಳನ್ನು ಇಲ್ಲಿ ನಿರ್ದೇಶಮಾಡಿದೆ. ಮಂತ್ರದಲ್ಲಿ ಕ್ರಮ್ಯವಾಗಿ ಐದು, ಆರು, ಮತ್ತು ನಾಲ್ಕು ವರ್ಣಗಳ ಮೂರು ಗುಂಪುಗಳಿಗೆ ಖಂಡಗಳೆಂದು ಹೆಸರು. ಮೊದಲನೆಯ ಗುಂಪಿನಲ್ಲಿ ಕಾಮ=ಕಕಾರ, ಶಕ್ತಿ=ಏಕಾರ, ತುರೀಯ=ಈಕಾರ, ದ್ವಾವೇತೌಪರಾ ? ಲ. ಹ್ರೀಂ ಎಂಬ ವರ್ಣಗಳು ಇವೆ. ಈ ಐದು ಅಕ್ಷರಗಳಿಂದ ಪ್ರಥಮಖಂಡವು ಏರ್ಪಟ್ಟಿರುವುದು. ಮತ್ತು ಶೂನ್ಯಂ ಚದ್ವೌ ?=ಹಕಾರ ಸಕಾರಗಳು, ದಿವಾಕರ ಹಕಾರೌ=ಕಕಾರ ಹಕಾರಗಳು, ಗೋತ್ರಭೃತ್=ಲಕಾರ, ಮಾಯಾ=ಹ್ರೀಂಕಾರ ಗಳೆಂಬ ಆರು ಅಕ್ಷರಸ್ವರೂಪವಾಗಿ ದ್ವಿತೀಯಖಂಡವು ಏರ್ಪಟ್ಟಿರುವುದು. ಚಂದ್ರಃ= ಸಕಾರ, ಪ್ರಜಾಪತಿ ಶಕ್ರೌ=ಕಕಾರ ಲಕಾರಗಳು, ಮಾಯಾ=ಹ್ರೀಂಕಾರ, ಈ

ಕಘಾರಾದಿತ್ವಾತ್ಕೀಲಿತಾ ? । ಕೋಟಿಜಪಾತ್ ಸಿದ್ಧಿರ್ನ ಜಾಯತೇ । ಯದಾ ಮನ್ಮಥಕಲಾದಿರ್ಭವತಿತದಾ ನಿಷ್ಕೀಲಿತಾ ಭವೇತ್ । ಸಿದ್ಧಿದಾ ಭವೇತ್ । ಸಾ ವೀರ್ಯವತೀ ಭವೇತ್ । ತ್ರೈಲೋಕ್ಯಂ ವಶಮಾನಯೇತ್ । ಪೂಜನಾತ್ ದೌರ್ಮನಸ್ಯ ನಾಶೋ ಭವೇತ್ । ಜಪಾತ್ ಸಿದ್ಧೀಶ್ವರೋ ಭವೇತ್ । ಇತಿ ಶಿವಮ್ ॥೪॥

ಅಥಾದ್ಯಂ ಶಾಂಭವಂ ದ್ವಿತೀಯಂ ಶಾಕ್ತಂ ಚೇತಿ ಗುರುಮುಖಾತ್ ಜ್ಞಾತವ್ಯಮ್ । ಅನ್ಯಥಾ ಶಾಪಮಾಪ್ನುಯಾತ್ ॥೫॥

ನಾಲ್ಕು ಅಕ್ಷರಗಳಿಂದ ಮೂರನೆಯ ಖಂಡವು ಸಿದ್ಧವಾಗಿರುವುದು. ಇವು ಕ್ರಮವಾಗಿ ಪಂಚಾಕ್ಷರ, ಷಡಕ್ಷರ, ಚತುರಕ್ಷರಗಳಿಂದ ಕೂಡಿದ ಮೂರು ಖಂಡಗಳು. ಇವುಗಳಲ್ಲಿ ಮೊದಲನೆಯದನ್ನು ವಾಗ್ಭವಖಂಡವೆಂದೂ ಎರಡನೆಯದನ್ನು ಕಾಮರಾಜಖಂಡ ವೆಂದೂ ಮೂರನೆಯದನ್ನು ಶಕ್ತಿಖಂಡವೆಂದೂ ಸ್ಮರಿಸಬೇಕು. ಮತ್ತು ಇವುಗಳಲ್ಲಿ ವಾಗ್ಭವಕೂಟಕ್ಕೆ ಶುಕ್ಲವರ್ಣ, ದ್ವಿತೀಯಕ್ಕೆ ಪ್ರೌಢನಾದ ಸೂರ್ಯನ ವರ್ಣ, ತೃತೀಯಕೂಟಕ್ಕೆ ಚಂದ್ರನ ಸೌಮ್ಯವಾದ ಶುಕ್ಲವರ್ಣಗಳು ಇರುವುವೆಂದು ಉಪಾಸನಾ ಸಮಯದಲ್ಲಿ ಧ್ಯಾನಿಸಬೇಕು. ॥೩॥

ಪೂರ್ವೋಕ್ತದ ಮಂತ್ರವು ಕಕಾರದಿಂದ ಪ್ರಾರಂಭವಾಗಿರುವುದರಿಂದ ಮಂತ್ರವು ಕೀಲಿತವಾಗುವುದು. ಮಂತ್ರಕ್ಕೆ ಸಿದ್ಧಿಯನ್ನು ತಡೆಗಟ್ಟುವ ಕೀಲನಗಳು ಇರುವುದಾದರೆ ಶಾಸ್ತ್ರೋಕ್ತವಿಧಾನದಿಂದ ಉತ್ಕೀಲನವನ್ನು ಮಾಡಿ ಅನುಷ್ಠಾನ ಮಾಡಬೇಕು. ಕಕಾರವೇ ಆದಿಯಾಗಿ ಕೀಲಿತವಾದ ಈ ಮಂತ್ರವನ್ನು ಕೋಟಿ ಜಪಮಾಡಿದರೂ ಪ್ರತಿಬಂಧಕವಿರುವುದರಿಂದ ಮಂತ್ರಸಿದ್ಧಿಯಾಗುವುದಿಲ್ಲ. ಅದೇ ಮಂತ್ರದಲ್ಲಿ ಮನ್ಮಥಕಲಾ—ಎಂದರೆ ಕಾಮಕಲಾಸ್ವರೂಪದಲ್ಲಿ ಬಿಂದುದ್ವಯ ರೂಪವಾದ ಹಕಾರವು ಆದಿಯಲ್ಲಿರುವ ಹಾದಿವಿದ್ಯಾ ಮಂತ್ರವನ್ನು ಉಪಾಸನೆ ಮಾಡಿದರೆ ವಿದ್ಯೆಯು ನಿಷ್ಕೀಲಿತವಾಗುತ್ತದೆ. ಇದೇ ಈ ಮಂತ್ರಕ್ಕೆ ಉತ್ಕೀಲನ ಎಂದು ಇಲ್ಲಿ ಹೇಳಿರುವ ವಿಧಾನವು. ನಿಷ್ಕೀಲಿತವಾದ್ದರಿಂದ ಉಪಾಸಕರಿಗೆ ಮಂತ್ರ ಸಿದ್ಧಿಯೂ ಸುಲಭವಾಗಿ ಆಗುವುದು. ವಿದ್ಯೆಯೂ ಅಧಿಕವೀರ್ಯದಿಂದ ಕೂಡಿರುವುದು. ಇದರ ಬಲದಿಂದ ಉಪಾಸಕನು ತ್ರೈಲೋಕ್ಯವನ್ನು ತನ್ನ ಅಧೀನವಾಗಿಟ್ಟುಕೊಳ್ಳಲು ಶಕ್ತನಾಗುವನು. ಈ ಮಂತ್ರ ಉಪಾಸನೆಯ ಮೂಲಕ ದೇವತಾರಾಧನೆಯನ್ನು ಮಾಡುವುದರಿಂದ ದುರ್ಭಗತ್ವ=ದಾರಿದ್ರ್ಯ, ದುರದೃಷ್ಟತಾ ಮುಂತಾದ ದೋಷಗಳು ನಶಿಸುವುವು. ಮಂತ್ರದ ಜಪಮಾತ್ರದಿಂದಲೇ ಅಣಿಮಾದಿಸಿದ್ಧಿಗಳಿಗೆ ಪ್ರಭು ವಾಗುವನು. ಇತಿಶಿವಂ। ॥೪॥

ಮೊದಲನೆಯ ವಾಗ್ಭವಕೂಟವು ಶಂಭು=ಹ ಕಾರಾದಿಯಾದ್ದರಿಂದ ಶಾಂಭವ ವೆಂದುಕರೆಯಲ್ಪಡುವುದು. ಅದನ್ನೂ ದ್ವಿತೀಯಕೂಟವನ್ನೂ ಸಕಾರಾದಿಯಾಗಿ ಶಾಕ್ತವೆಂದು ಕರೆಯಲ್ಪಡುವ ತೃತೀಯಕೂಟವನ್ನೂ ಗುರುಮುಖದಿಂದ ತಿಳಿದು ಉಪಾಸನೆಮಾಡಬೇಕು. ಗುರುವಿನ ಮೂಲಕ ವಿದ್ಯಾಶ್ರವಣ ಜ್ಞಾನೋಪಾಸನೆಗಳು ಮಾತ್ರ ಫಲದಾಯಕವಾಗುವುವು. ಉಪಾಯಾಂತರದಿಂದ ತಿಳಿಯಲು ಯತ್ನಿಸಿದವನು ಸತ್‌ಫಲಗಳನ್ನು ಎಂದಿಗೂ ಹೊಂದುವುದಿಲ್ಲ. ಮತ್ತು ಗುರು-ದೇವತಾ ಶಾಪವನೂ ಹೊಂದುವನು. ॥೫॥

ಉಪಾಸನಾ ದ್ವಿವಿಧಾ ಶಾಂಭವಂ ಶಾಕ್ತಂ ಚೇತಿ । ಏವಂ ಲೋಪನಾ ಲ್ಲೋಪಾ ॥೬॥

ಪ್ರಥಮಂ ಶಂಭುಚಂದ್ರೌ ತದನು ದಿವಾಕರೇಂದ್ರೌ । ತತಃ ಪರಾ-ಬೀಜಂ ವಾಗ್ಭವಮ್ । ತತಃ ಕಾಮರಾಜಂ ಶಿವ ಚಂದ್ರ ಕಾಮ ಶಂಭು ಹರಯಃ । ಪರಾಬೀಜಂ ಶಕ್ತಿಃ । ಕಾಮಪರಾಮಧ್ಯೇ ದೇವರಾಜ ಮೇತತ್ ಶಕ್ತಿಕೂಟಮ್ ॥೭॥

ಏತೇನ ಪಂಚದಶಾಕ್ಷರಾಣಿ ಭವಂತಿ । ಶಂಭುಪ್ರಧಾನತ್ವಾಚ್ಛಾಂ-ಭವಮ್ । ಪೂರ್ಣೋಽಹಂ ಶಿವೋಽಹಮದ್ವೈತರೂಪೋಽಹಂ ನಿತ್ಯಾನಂದ-ರೂಪೋಹಂ ಇತಿ ಸ್ಮರೇತ್ ॥೮॥

ನಾಪಿ ಪೂಜಾಯಾಂ ವ್ರತನಿಯಮಃ । ಸರ್ವದಾ ಜಪಂ ಚರೇತ್ । ವಿನೋದತಃ ಕಾಮಿನೀ ಮಧ್ಯೇ ಕಾಮಿನೀರ್ದೃಷ್ಟ್ವಾ ಚ ಸದಾನಂದ-ರೂಪೋ ಭವೇತ್ । ದಿವ್ಯಾಂಗರಾಗೈರ್ದೇಹಂ ಭೂಷಯೇತ್ ಸುಗಂಧ-ಮಾಲ್ಯಾಂಬರಾಲಂಕಾರಾದ್ಯೈಃ । ಮಾಂಸಾದ್ಯೈಃ ಶುದ್ಧೈಃ ಸುಮಧುರೈ-ರ್ಭೋಜಯೇತ್ । ಮ ಪಂಚಕೇನ ಪೂಜಾ ಕಾರ್ಯಾ । ಸದಾ ಕೌಲಿಕೋ ಭವೇತ್ । ಕುಲಾಚಾರಾತ್ ಸರ್ವಸಿದ್ಧೀಶ್ವರೋ ಭವೇತ್ । ಏಕಾಕೀ ಶಕ್ತಿಯುಕ್ತೋ ಭವೇತ್ । ಮಾದನಂ ಭುಕ್ತ್ವಾ ಶಕ್ತಿಭುಗ್ಭವೇತ್ । ಶಕ್ತಿ ಚಕ್ರಂ ಪೂಜಯೇತ್ । ಭೋಗೇನ ಮೋಕ್ಷಮಾಪ್ನುಯಾತ್ । ಶಕ್ತಿಹರ್ಷೋತ್ಪಾದನಾತ್ ಶಕ್ತಿಃ ಪ್ರೀತಾ ಭವತಿ । ಇತಿ ಶಿವಮ್ ॥೯॥

ಶಾಂಭವೋಪಾಸನೆಯೆಂದೂ ಶಾಕ್ತ ಉಪಾಸನೆಯೆಂದೂ ಉಪಾಸನೆಯು ದ್ವಿವಿಧವಾದುದು. ದೀಕ್ಷಾಕ್ರಮದಲ್ಲಿಯೂ ಶಾಂಭವ, ಶಾಕ್ತವೆಂದು ಎರಡು ವಿಧಗಳಿವೆ. ಚರಣವಿನ್ಯಾಸರೂಪವಾದ ದೀಕ್ಷೆಯು ಶಾಂಭವ ವಿಧಾನಕ್ಕೂ ಶಕ್ತಿಪ್ರವೇಶನರೂಪವಾದ ದೀಕ್ಷೆಯು ಶಾಕ್ತವಿಧಾನಕ್ಕೂ ಸೇರಿವೆ. ಆಯಾಯರೀತಿಯಲ್ಲಿ ದೀಕ್ಷಿತನಾಗಿ ಮಾಡುವ ಉಪಾಸನೆಗಳೂ ಎರಡುಬಗೆಯಾಗಿವೆ. ಇವುಗಳಲ್ಲಿ ಯಾವುದೊಂದನ್ನೂ ಆಚರಿಸದೇ ಲೋಪಮಾಡಿದರೆ ವಿದ್ಯೆಯೂ ಲೋಪಗ್ರಸ್ತವಾಗುವುದು. ||೬||

ಮುಖ್ಯವಾಗಿ ಉಪಾಸನೆಮಾಡಬೇಕಾದ ಹಾದಿವಿದ್ಯಾ ಮಂತ್ರದ ವರ್ಣ ರಚನೆಯು ಈ ರೀತಿಯಾಗಿದೆ. ಶಂಭು ಚಂದ್ರೌ=ಹಕಾರ ಸಕಾರಗಳು. ದಿವಾಕರೇಂದ್ರೌ=ಕಕಾರ ಲಕಾರಗಳು, ಪರಾಬೀಜ—ಹ್ರೀಂಕಾರ ಈ ವರ್ಣ ಸಮಷ್ಟಿಯು ವಾಗ್ಭವಕೂಟವು. ಶಿವಚಂದ್ರ ಕಾಮ ಶಂಭು ಹರಿ=ಹ, ಸ, ಕ, ಹ, ಲಕಾರಗಳೂ ಪರಾಬೀಜ=ಹ್ರೀಂಕಾರ ಇವುಗಳ ಸಮಷ್ಟಿಯು ಕಾಮರಾಜಕೂಟವು, ಶಕ್ತಿಕಾಮ ಪರಾಮಧ್ಯೇ ದೇವರಾಜ=ಸಕಾರ, ಲಕಾರ ಮಧ್ಯದಲ್ಲಿರುವ ಕಕಾರ–ಹ್ರೀಂ ಕಾರಗಳು ಎಂದರೆ ಸ, ಕ, ಲ, ಹ್ರೀಂ ಇವುಗಳ ಸಮಷ್ಟಿಯು ಶಕ್ತಿಕೂಟವು. ||೭||

ಕೂಟತ್ರಯದ ವರ್ಣಗಳು ಸೇರಿ ಹದಿನೈದು ಅಕ್ಷರಗಳ ಪಂಚದಶಾಕ್ಷರೀ ವಿದ್ಯೆಯು ಆಗುವುದು. ಇದು ಶಾಂಭವೋಪಾಸನೆಯ ಮಂತ್ರರೀತಿಯು. ಶಂಭುವೇ ಪ್ರಧಾನವಾಗಿರುವುದರಿಂದ ಶಾಂಭವವೆಂದು ಹೆಸರು. ಉಪಾಸಕನು ದೇವತಾ-ಆತ್ಮರ ಐಕ್ಯವನ್ನು ಭಾವಿಸಿ ದೇವತಾಸ್ವರೂಪಾವಿರ್ಭಾವದಿಂದ ತಾನು ಪರಿಪೂರ್ಣನೂ ಶಿವನೂ ಅದ್ವಿತೀಯ ಚಿಚ್ಛಕ್ತಿಸ್ವರೂಪನೂ ಮತ್ತು ನಿತ್ಯಾನಂದಸ್ವರೂಪನೂ ಆಗಿರುವೆನು ಎಂದು ಸ್ಮರಿಸುತ್ತಾ ಮಂತ್ರೋಪಾಸನೆಯನ್ನು ಮಾಡಬೇಕು. ಸೋಽಹಂಭಾವ ಭಾವನೆಯಲ್ಲಿ ಲೀನನಾಗಿರಬೇಕು. ||೮||

ಈ ಪ್ರಯೋಗಾನುಸಾರವಾಗಿ ದೇವೀಪೂಜಾ, ಮಂತ್ರೋಪಾಸನೆಗಳನ್ನು ಮಾಡುವಾಗ ಆಚರಿಸಬೇಕಾದ ವ್ರತಾಂಗನಿಯಮಗಳು ಯಾವುವೂ ಇಲ್ಲ. ಯಾವಾಗಲೂ ಜಪಿಸುತ್ತಾ ಇರಬೇಕು. ಸುಂದರಿಯರಾದ ಕಾಮಿನಿಯರ ಮಧ್ಯದಲ್ಲಿ ಇರುವಾಗ ವಿನೋದಭಾವನೆಯಿಂದ ಕಾಮಿನಿಯರನ್ನು ನೋಡಿ ಆನಂದಮಗ್ನನಾಗಿರ ಬೇಕು. ದಿವ್ಯವಾದ ಸುಗಂಧದ್ರವ್ಯಗಳ ಲೇಪನ, ಸುವಾಸನೆಯಿಂದ ಪೂರಿತವಾದ ಮಾಲ್ಯ, ವಸ್ತ್ರ, ಅಲಂಕಾರಧಾರಣ ಇವುಗಳಿಂದ ಶರೀರವನ್ನು ಅಲಂಕರಿಸಬೇಕು. ಶುದ್ಧವೂ ಮಧುರವೂ ಆದ ಮಾಂಸಾದಿಗಳಿಂದ ತೃಪ್ತಿಯಾಗಿ ಊಟಮಾಡಬೇಕು. ಮಪಂಚಕ=ಮಕಾರವೇ ಆದ್ಯಕ್ಷರವಾಗಿರುವ ಹೆಸರಿನಿಂದ ಕರೆಯಲ್ಪಡುವ ಮದ್ಯ ಮಾಂಸ ಮುಂತಾದ ಬಗೆಗಳಿಂದ ತನ್ನನ್ನೂ ಉಪಾಸ್ಯದೇವಿಯನ್ನೂ ತೃಪ್ತಿಪಡಿಸಬೇಕು.

ಅಥ ವಕುಲೈರರ್ಚಯೇತ್ । ರಕ್ತ ಪುಷ್ಪೈರರ್ಚಯೇತ್ । ತದಭಾವೇ ಜಲೈಸ್ತದಭಾವೇ ಮಾನಸೀಂ ಭಕ್ತಿಮಾಚರೇತ್ । ಇತಿ ಶಿವಮ್ ॥೧೦॥

ಇತಿ ಕಾಮರಾಜಕೀಲಿತೋದ್ಧಾರೋಪನಿಷತ್ ಸಮಾಪ್ತಾ.



ಇದು ಪೂಜೆಯ ವಿಧಾನವು. ಇಂತಹ ಉಪಾಸಕನು ಕೌಲಮಾರ್ಗತತ್ಪರನಾಗುವನು. ಕುಲಾಚಾರವನ್ನೂ ಪರಿಪಾಲಿಸುವುದರಿಂದ ಸರ್ವ ಅಣಿಮಾದಿ ಸಿದ್ಧಿಗಳಿಗೂ ಅಧಿಪತಿಯಾಗುವನು. ಏಕಾಕಿಯಾದ ಪ್ರಸಂಗದಲ್ಲಿ ಅಧಿಕಶಕ್ತಿಯುಳ್ಳವನಾಗಿ ಶಕ್ತಿಸಾಧ್ಯವಾದ ಕಾರ್ಯಗಳನ್ನು ಮಾಡಬಲ್ಲನು. ಮಾದಕ ಪದಾರ್ಥವನ್ನು ಸೇವಿಸುವುದರಿಂದ ಶಕ್ತಿವಂತನಾಗುವನು. ಇಂತಹ ಶಕ್ತಿದಾಯಕವಾದ ಮಂತ್ರವಿದ್ಯಾ ಮತ್ತು ಚಕ್ರಗಳನ್ನು ಪೂಜಿಸುವುದರಿಂದ ಭೋಗಗಳನ್ನು ಅನುಭವಿಸುತ್ತಾ ಸುಖವಾಗಿ ಮೋಕ್ಷವನ್ನು ಹೊಂದುವನು. ಶಕ್ತಿದೇವತೆಯನ್ನು ಪ್ರೀತಿಗೊಳಿಸಲು ಸಮುಸ್ತೋಪಚಾರಗಳನ್ನು ಸೇವಿಸಬೇಕು. ಇದೇ ಶಕ್ತಿಯನ್ನು ತೃಪ್ತಿಗೊಳಿಸುವ ಬಗೆಯು. ||೯||

ಮತ್ತು ದೇವಿಯನ್ನು ಪೂಜಿಸುವಾಗ ವಕುಲಪುಷ್ಪ, ಕೆಂಪುಬಣ್ಣದ ಪೂಜಾರ್ಹ ಪುಷ್ಪಗಳು ದೇವಿಗೆ ಇಷ್ಟವಾದುದರಿಂದ ವಿಶೇಷವಾಗಿ ಅಂತಹ ಪುಷ್ಪಗಳಿಂದ ಅರ್ಚನೆ ಮಾಡಬೇಕು. ಆ ಪೂಜಾದ್ರವ್ಯಗಳು ಸಿಕ್ಕದಿದ್ದರೆ ಎಲ್ಲ ಉಪಚಾರಗಳನ್ನರ್ಪಿಸುವುದಕ್ಕೆ ಬದಲು ಜಲದಿಂದಲೇ ಪೂಜೆಯನ್ನು ಮಾಡಬಹುದು. ಅದಕ್ಕೂ ಅನುಕೂಲತೆಯು ಲಭಿಸದಿರುವಾಗ ಮಾನಸಪೂಜಾ ವಿಧಾನದಿಂದಾದರೂ ಭಕ್ತಿಯುಕ್ತನಾಗಿ ದೇವೀಪೂಜೆಯನ್ನು ನೆರವೇರಿಸಬೇಕು. ಬಾಹ್ಯೋಪಕರಣಗಳಿಗಿಂತಲೂ ಮಾನಸವಾದ ಭಕ್ತಿಯೆಂಬುದು ಪ್ರಶಸ್ತವಾದುದು. ಲಭಿಸುವಷ್ಟು ಬಾಹ್ಯೋಪಕರಣಗಳ ಅರ್ಚನೆಯಲ್ಲಿ ಆಲಸ್ಯವನ್ನು ತೋರ್ಪಡಿಸಬಾರದು. ಈ ರೀತಿಯಲ್ಲಿ ಆಚರಿಸುವ ಪೂಜಾ—ಉಪಾಸನೆಗಳು ಸಾಂಗೋಪಾಂಗವಾಗಿ ಶಾಸ್ತ್ರೋಕ್ತವಾದ ಸಕಲ ಫಲಗಳನ್ನು ಕೊಡುವುವು. ಕಡೆಯಲ್ಲಿ ಮಂಗಳಾರ್ಥಕವಾಗಿ ಶಿವಶಬ್ದದಿಂದ ಕೂಡಿ ಉಪನಿಷತ್ತು ಸಮಾಪ್ತಿಗೊಂಡಿದೆ. ||೧೦||

**ಕಾಮರಾಜಕೀಲಿತೋದ್ಧಾರೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.**



॥ ಶ್ರೀರಸ್ತು ॥

## ॥ ಕಾಲಿಕೋಪನಿಷತ್ ॥

---

ಓಂ ಅಥ ಹೈನಂ ಬ್ರಹ್ಮರಂಧ್ರೇ ಬ್ರಹ್ಮರೂಪಿಣೀಮಾಪ್ನೋತಿ । ಸುಭಗಾಂ ತ್ರಿಗುಣಿತಾಂ ಮುಕ್ತಾಸುಭಗಾಂ ಕಾಮರೇಫೇಂದಿರಾಂ ಸಮಸ್ತ-ರೂಪಿಣೀಮೇತಾನಿ ತ್ರಿಗುಣಿತಾನಿ ತದನು ಕೂರ್ಚಬೀಜಂ ವ್ಯೋಮಷಷ್ಠ-ಸ್ವರಾಂ ಬಿಂದುಮೇಲನರೂಪಾಂ ತದ್ದ್ವಯಂ ಮಾಯಾದ್ವಯಂ ದಕ್ಷಿಣೇ ಕಾಲಿಕೇ ಚೇತ್ಯಭಿಮುಖಗತಾಂ ತದನು ಬೀಜಸಪ್ತಕಮುಚ್ಚಾರ್ಯ ಬೃಹದ್ಭಾನುಜಾಯಾಮುಚ್ಚರೇತ್ ॥೧॥

ಸ ತು ಶಿವಮಯೋ ಭವೇತ್। ಸರ್ವಸಿದ್ಧೀಶ್ವರೋ ಭವೇತ್। ಗತಿಸ್ತ-ಸ್ಯಾಸ್ತೀತಿ। ನಾನ್ಯಸ್ಯ ಗತಿರಸ್ತೀತಿ । ಸ ತು ವಾಗೀಶ್ವರಃ । ಸ ತು ನಾರೀಶ್ವರಃ। ಸ ತು ದೇವೇಶ್ವರಃ । ಸ ತು ಸರ್ವೇಶ್ವರಃ ॥೨॥

|| ಶ್ರೀಃ ||

# ಕಾಲಿಕೋಪನಿಷತ್ತಿನ ಕನ್ನಡ ಅನುವಾದವು.

ಆಥರ್ವಣಶಾಖೆಯಲ್ಲಿ ಇರುವ ದೇವೀ ಉಪನಿಷತ್ತುಗಳಲ್ಲಿ ಕಾಲಿಕೋಪನಿಷತ್ತು ಒಂದಾಗಿದೆ. ಈ ಉಪನಿಷತ್ತಿನಲ್ಲಿ ಪ್ರತಿಪಾದ್ಯಳಾದ ಕಾಲಿಕಾದೇವಿಯನ್ನು ಬ್ರಹ್ಮರಂಧ್ರದಲ್ಲಿ ಪರಬ್ರಹ್ಮರೂಪಿಣಿಯನ್ನಾಗಿ ಧ್ಯಾನಿಸುವುದರಿಂದ ಉಪಾಸಕನು ಹಾಗೆಯೇ ಸಾಕ್ಷಾತ್ಕಾರವನ್ನು ಹೊಂದುವನು. ಉಪಾಸನೆಯನ್ನು ಆಚರಿಸುವಾಗ ಮಹಾಮಂತ್ರದ ಬೀಜಾಕ್ಷರಗಳನ್ನು ಕ್ರಮವಾಗಿ ಉಚ್ಚರಿಸಿ ಅಂತದಲ್ಲಿ ಸ್ವಾಹಾಶಬ್ದವನ್ನು ಸೇರಿಸಬೇಕು. ಮಂತ್ರವನ್ನುಚ್ಚರಿಸುವಾಗ ಸೌಭಾಗ್ಯ ಮುಂತಾದ ದೇವಿಯ ಗುಣಸಮೂಹವನ್ನು ಮಂತ್ರಾರ್ಥವನ್ನಾಗಿ ಭಾವಿಸಬೇಕು. ಕಾಮ—ಕಕಾರ, ರೇಫ, ಇಂದಿರಾ—ಈಕಾರ, ಇವುಗಳ ಸಮಷ್ಟಿರೂಪದಿಂದ ಲಭಿಸುವ " ಕ್ರೀಂ " ಎಂಬುದನ್ನು ಮೂರುಸಲ ಪಠಿಸಬೇಕು. ಆಮೇಲೆ ವ್ಯೋಮ—ಹಕಾರ, ಷಷ್ಠಸ್ವರ—ಊಕಾರ, ಬಿಂದು—ಅನುಸ್ವಾರ ಇವುಗಳ ಮೇಲನದಿಂದಾಗುವ " ಹೂಂ " ಎಂಬುದನ್ನು ಎರಡು ಸಲ ಹೇಳುವುದು. ಮಾಯಾ—ಹ್ರೀಂಕಾರಗಳನ್ನು ಎರಡು ಸಲ ಹೇಳುವುದು. " ದಕ್ಷಿಣೇಕಾಲಿಕೇ " ಎಂದು ಉಚ್ಚರಿಸಿ ಪುನಃ ಮೂರುಸಲ " ಕ್ರೀಂ " ಎಂಬುದನ್ನೂ ಎರಡುಸಲ " ಹ್ರೀಂ " ಎಂಬುದನ್ನೂ ಉಚ್ಚರಿಸಿ ಕಡೆಯಲ್ಲಿ ಬೃಹದ್ಭಾನುಜಾಯಾ— " ಸ್ವಾಹಾ " ಎಂಬುದನ್ನು ಪಠಿಸಿದರೆ ಸಂಪೂರ್ಣಮಂತ್ರವು ಲಭಿಸುವುದು. ಈ ವರ್ಣಗಳನ್ನು ಸೇರಿಸಲಾಗಿ ಮಂತ್ರವು ಈ ರೀತಿಯಾಗುವುದು :—ಕ್ರೀಂ ಕ್ರೀಂ ಕ್ರೀಂ ಹೂಂ ಹೂಂ ಹ್ರೀಂ ಹ್ರೀಂ ದಕ್ಷಿಣೇ ಕಾಲಿಕೇ ಕ್ರೀಂ ಕ್ರೀಂ ಕ್ರೀಂ ಹೂಂ ಹೂಂ ಹ್ರೀಂ ಹ್ರೀಂ ಸ್ವಾಹಾ. ||೧||

ಈ ಮಂತ್ರವನ್ನು ಅರ್ಥಾನುಸಂಧಾನಪೂರ್ವಕ ಜಪಿಸಿದವನು ಜಪಾನುಷ್ಠಾನ ಬಲದಿಂದ ಶಿವಸ್ವರೂಪನೂ, ಅಣಿಮಾದಿ ಸಕಲಸಿದ್ಧಿಗಳಿಗೆ ಅಧಿಪತಿಯೂ ಆಗುವನು. ಮತ್ತು ಸ್ವರ್ಗಾಪವರ್ಗಗಳೆಂಬ ಪರಮಗತಿಯು ಈ ಉಪಾಸಕನಿಗೆ ಪ್ರಾಪ್ತವಾಗುವುದು. ಈ ಉಪಾಸನಾನುಷ್ಠಾನರಹಿತನಿಗೆ ಸದ್ಗತಿಯು ಬರಲಾರದು. ಇಷ್ಟೇ ಅಲ್ಲದೆ ಅನೇಕ ಕಾಮ್ಯಫಲಗಳನ್ನು ಕಾಮನಾನುಸಾರವಾಗಿ ಹೊಂದುವನು. ವಿದ್ಯೆಗಳಿಗೆ ಈಶ್ವರನಾಗಿ ಉತ್ತಮ ವಾಗ್ಮಿಯಾಗುವನು. ನಾರಿಯರಿಗೆಲ್ಲ ವಲ್ಲಭನಾದ ಪತಿಯಾಗುವನು. ದೇವತೆಗಳಿಗೆಲ್ಲ ಸ್ವಾಮಿಯಾಗುವನು. ಹೆಚ್ಚೇನು? ಸರ್ವಕ್ಕೂ ಈಶ್ವರನಾಗುವನು.||೨||

ಅಭಿನವಜಲದಸಂಕಾಶಾ ಘನಸ್ತನೀ ಕುಟಿಲದಂಷ್ಟ್ರಾ ಶವಾಸನಾ ಕಾಲಿಕಾ ಧ್ಯೇಯಾ ॥೩॥

ತ್ರಿಕೋಣಂ ಪಂಚಕೋಣಂ ನವಕೋಣಂ ಪದ್ಮಮ್ । ತಸ್ಮಿನ್ ದೇವೀಂ ಸರ್ವಾಂಗೇ ಅಭ್ಯರ್ಚ್ಯ ತದಿದಂ ಸರ್ವಾಂಗಂ ಓಂ ಕಾಲೀ ಕಪಾಲಿನೀ ಕುಲ್ಲಾ ಕುರುಕುಲ್ಲಾ ವಿರೋಧಿನೀ ವಿಪ್ರಚಿತ್ತಾ ಉಗ್ರಾ ಉಗ್ರಪ್ರಭಾ ದೀಪ್ತಾ ನೀಲಾ ಘನಾ ಬಲಾಕಾ ಮಾತ್ರಾ ಮುದ್ರಾ ಅಮಿತಾ ಚೈವ ಪಂಚದಶಕೋಣಗಾಃ । ಬ್ರಾಹ್ಮೀ ನಾರಾಯಣೀ ಮಾಹೇಶ್ವರೀ ಚಾಮುಂಡಾ ಕೌಮಾರೀ ಅಪರಾಜಿತಾ ವಾರಾಹೀ ನಾರಸಿಂಹಿಕಾ ಚೇತ್ಯಷ್ಟಪತ್ರಗಾಃ । ಷೋಡಶಸ್ವರಭೇದೇನ ಪ್ರಥಮೇನ ಮಂತ್ರವಿಭಾಗಃ ತನ್ಮೂಲೇನಾವಾಹನಂ ತೇನೈವ ಪೂಜನಮ್ ॥೪॥

ಯ ಏವಂ ಮಂತ್ರರಾಜಂ ನಿಯಮೇನ ವಾ ಲಕ್ಷಮಾವರ್ತಯತಿ । ಸ ಪಾಪ್ಮಾನಂ ಹಂತಿ । ಸ ಬ್ರಹ್ಮತ್ವಂ ಭಜತಿ । ಸ ಆಯುರಾರೋಗ್ಯಮೈಶ್ವರ್ಯಂ ಭಜತಿ । ಸದಾ ಪಂಚಮಕಾರೇಣ ಪೂಜಯೇತ್ । ಸದಾ ಗುರುಭಕ್ತೋ ಭವೇತ್ । ಸದಾ ದೇವಭಕ್ತೋ ಭವೇತ್ । ಧರ್ಮಿಷ್ಠತಾಂ ಪುಷ್ಟಿಮಹತವಾಚಂ ವಿಪ್ರಾ ಲಭಂತೇ । ಮಂತ್ರಜಾಪಿನೋ ಹ್ಯಾತ್ಮಾ ವಿದ್ಯಾಪ್ರಪೂರಿತೋ ಭವತಿ । ಸ ಜೀವನ್ಮುಕ್ತೋ ಭವತಿ । ಸ ಸರ್ವಶಾಸ್ತ್ರಂ ಜಾನಾತಿ । ಸ ಸರ್ವಪುಣ್ಯಕಾರೀ ಭವತಿ । ಸ ಸರ್ವಯಜ್ಞಯಾಜೀ ಭವತಿ । ರಾಜಾನೋ ದಾಸತಾಂ ಯಾಂತಿ । ಜಪ್ತ್ವಾ ಸ ಸರ್ವಮೇತಂ ಮಂತ್ರರಾಜಂ ಸ್ವಯಂ ಶಿವ ಏವಾಹಮಿತ್ಯಣಿಮಾದಿವಿಭೂತೀನಾಮೀಶ್ವರಃ ಕಾಲಿಕಾಂ ಲಭೇತ್ ॥೫॥

ಕಾಲಿಕಾದೇವಿಯನ್ನು ಧ್ಯಾನಿಸುವಾಗ ದೇವಿಯಲ್ಲಿ ಚಿಂತಿಸಬೇಕಾದ ವಿಶೇಷಣ ಧರ್ಮಗಳನ್ನು ಇಲ್ಲಿ ಹೇಳಿದೆ. ದೇವಿಯು ನವೀನವಾದ ಮೋಡದಂತೆ ಕೃಷ್ಣವರ್ಣ ವುಳ್ಳವಳೂ ಘನವಾದ ಸ್ತನಗಳಿಂದ ಕೂಡಿದವಳೂ ವಕ್ರವಾದ ಹಲ್ಲುಗಳನ್ನು ಧರಿಸಿದವಳೂ ಶವವೆಂಬ ಆಸನದಲ್ಲಿರುವವಳೂ ಆಗಿರುವಳೆಂದು ದೇವೀ ಸ್ವರೂಪನ್ನು ಸ್ಮರಿಸಬೇಕು. ||೩||

ಚಕ್ರವನ್ನು ಲೇಖನಮಾಡಿ ಅಲ್ಲಿ ದೇವಿಯನ್ನು ಪೂಜಿಸುವ ವಿಧಾನವು ಇಲ್ಲಿ ಹೇಳಲ್ಪಟ್ಟಿರುವುದು. ತ್ರಿಕೋಣ, ಪಂಚಕೋಣ, ನವಕೋಣಗಳಿಂದ ಕೂಡಿದ ಪದ್ಮಾಕಾರವಾದ ಚಕ್ರವು ದೇವಿಗೆ ಅಧಿಷ್ಠಾನಸ್ಥಾನವು. ಅದರಲ್ಲಿ ದೇವಿಯನ್ನು ಅಂಗಾವರಣದೇವತಾ ಸಹಿತವಾಗಿ ಪೂಜಿಸಬೇಕು. ಪೂಜಿಸಲ್ಪಡಬೇಕಾದ ಅಂಗ ದೇವತೆಗಳು– ಕಾಲೀ, ಕಪಾಲಿನೀ, ಕುಲ್ಲಾ, ಕುರುಕುಲ್ಲಾ, ವಿರೋಧಿನೀ, ವಿಪ್ರಚಿತ್ತಾ, ಉಗ್ರಾ, ಉಗ್ರಪ್ರಭಾ, ದೀಪ್ತಾ, ನೀಲಾ, ಘನಾ, ಬಲಾಕಾ, ಮಾತ್ರಾ, ಮುದ್ರಾ, ಅಮಿತಾ, ಎಂಬ ಹದಿನೈದು ದೇವತೆಗಳು ಚಕ್ರದ ಹದಿನೈದು ಕೋಣ (ಮೂಲೆ) ಗಳಲ್ಲಿರುವುವು. ಬ್ರಾಹ್ಮೀ, ನಾರಾಯಣೀ, ಮಾಹೇಶ್ವರೀ, ಚಾಮುಂಡಾ, ಕೌಮಾರೀ, ಅಪರಾಜಿತಾ, ವಾರಾಹೀ, ನಾರಸಿಂಹೀ, ಎಂಬ ದೇವತೆಗಳು ಪದ್ಮದ ಅಷ್ಟಪತ್ರಗಳಲ್ಲಿ ನಿವಾಸಿಗಳು, ಮಾತೃಕೆಗಳಲ್ಲಿ ಹದಿನಾರು ಸ್ವರಗಳಿರುವುದರಿಂದ ಒಂದೊಂದು ಅನುಸ್ವಾರಸಹಿತ ಸ್ವರವನ್ನು ಸೇರಿಸಲು ಮಂತ್ರಗಳು ಪ್ರತ್ಯೇಕವಾಗುವುವು. ಅಂತಹ ಪ್ರತ್ಯೇಕ ಮಂತ್ರಗಳಿಂದ ವಿಹಿತವಾದ ನ್ಯಾಸವನ್ನು ಆಚರಿಸಬೇಕು. ಮೂಲ ಮಂತ್ರದಿಂದ ಆವಾಹನ ಮತ್ತು ಪೂಜೆಗಳನ್ನು ನಡೆಸಬೇಕು. ||೪||

ಉಪಾಸಕನು ಈ ಉಪಾಸನೆಯಿಂದ ಹೊಂದಬಹುದಾದ ಫಲಸಮೂಹವನ್ನು ಹೇಳುವ ಫಲಸ್ತುತಿಯ ವಾಕ್ಯಗಳು. ಯಾರು ಈ ಮಂತ್ರವನ್ನು ನಿಯಮಪೂರ್ವಕ ವಾಗಿ ಲಕ್ಷ ಜಪಮಾಡುವನೋ ಅವನು ಸಂಚಿತಪಾಪಗಳನ್ನು ಕಳೆದುಕೊಳ್ಳುತ್ತಾನೆ. ಮತ್ತು ಬ್ರಹ್ಮೈಕ್ಯವನ್ನು ಹೊಂದುತ್ತಾನೆ. ಮರಣಬಾಧಾಶೂನ್ಯವಾದ ಮೋಕ್ಷವನ್ನು ಹೊಂದುತ್ತಾನೆ. ಮತ್ತು ಇಹಲೋಕದಲ್ಲಿ ಪೂರ್ಣಾಯುಷ್ಯ, ಆರೋಗ್ಯ, ಐಶ್ವರ್ಯ ಸೌಖ್ಯಗಳನ್ನು ಅನುಭವಿಸುತ್ತಾನೆ. ಯಾವಾಗಲೂ ದೇವಿಯನ್ನು ಮದ್ಯ, ಮಾಂಸಾದಿ ಐದು ದ್ರವ್ಯಗಳಿಂದ ಪೂಜಿಸಬೇಕು. ಯಾವಾಗಲೂ ಗುರುದೇವತೆಯಲ್ಲಿ ಅಮಿತಭಕ್ತಿ ಯಿಂದ ಕೂಡಿದವನಾಗಿರಬೇಕು. ಇದರಿಂದ ಧಾರ್ಮಿಕತ್ವ, ಸಮೃದ್ಧಿ, ಅಸ್ಖಲಿತ ಗಂಭೀರವಾಣೀ ಮುಂತಾದ ಫಲಗಳನ್ನು ಬ್ರಹ್ಮಿಷ್ಠರಾದ ಉಪಾಸಕನು ಹೊಂದುತ್ತಾನೆ. ಮಂತ್ರ ಜಪಮಾಡಿದವನ ಆತ್ಮವು ಸಕಲ ವಿದ್ಯಾ ಪರಿಪೂರ್ಣವಾಗುವುದು. ಮತ್ತು ಅವನು ಜೀವನ್ಮುಕ್ತಿಯನ್ನು ಪಡೆಯುವನು, ಸಕಲ ಶಾಸ್ತ್ರವಿದನಾಗುವನು. ಸಮಸ್ತ ಪುಣ್ಯಗಳನ್ನು ಮಾಡಿದವನೂ ಸರ್ವ ಯಜ್ಞಗಳನ್ನು ಮಾಡಿದವನೂ ಆಗುವನು.

ಆವಯೋಃ ಪಾತ್ರಭೂತಃ ಸನ್ ಸುಕೃತೀ ತ್ಯಕ್ತಕಲ್ಮಷಃ ।
ಜೀವನ್ಮುಕ್ತಃ ಸ ವಿಜ್ಞೇಯೋ ಯಸ್ಮೈಲಬ್ಧಾ ಹಿ ದಕ್ಷಿಣಾ ॥೬॥

ದಶಾಂಶಂ ಹೋಮಯೇತ್ತದನು ತರ್ಪಯೇತ್ । ಅಥ ಹೈಕೇ ಯಜ್ಞಾನ್ಕಾಮಾನದ್ವೈತಜ್ಞಾನಾದೀನನಿರುದ್ಧಸರಸ್ವತೀತಿ ॥೭॥

ಅಥ ಹೈಷಃ ಕಾಲಿಕಾಮನುಜಾಪೀ ಯಃ ಸದಾ ಶುದ್ಧಾತ್ಮಾ ಜ್ಞಾನ-ವೈರಾಗ್ಯಯುಕ್ತಃ ಶಾಂಭವೀದೀಕ್ಷಾಸು ರಕ್ತಃ ಶಾಕ್ತಾಸು । ಯದಿ ವಾ ಬ್ರಹ್ಮಚಾರೀ ರಾತ್ರೌ ನಗ್ನಃ ಸರ್ವದಾ ಮಧುನ್ಯಾಃಶಕ್ತೋ ಮನಸಾ ಜಪ-ಪೂಜಾದಿನಿಯಮವಾನ್ । ಯೋಷಿತ್ರಿಯಕರೋ ಭಗೋದಕೇನ ತರ್ಪಣಂ ತೇನೈವ ಪೂಜನಂ ಕುರ್ಯಾತ್ । ಸರ್ವದಾ ಕಾಲಿಕಾರೂಪಮಾತ್ಮಾನಂ ವಿಭಾವಯೇತ್ ॥೮॥

ಸ ಸರ್ವದಾ ಯೋಷಿದಾಸಕ್ತೋ ಭವೇತ್ । ಸ ಸರ್ವಹತ್ಯಾಂ ತರತಿ ತೇನ ಮಧುದಾನೇನ । ಅಥ ಪಂಚಮಕಾರೇಣ ಸರ್ವಮಾಯಾದಿವಿದ್ಯಾಂ ಪಶುಧನಧಾನ್ಯಂ ಸರ್ವೇಶತ್ವಂ ಚ ಕವಿತ್ವಂ ಚ । ನಾನ್ಯಃ ಪರಮಃ ಪಂಥಾ ವಿದ್ಯತೇ ಮೋಕ್ಷಾಯ ಜ್ಞಾನಾಯ ಧರ್ಮಾರ್ಥಮಾರ್ಯ ॥೯॥

ಅವನಿಗೆ ಆಶ್ರಿತರಾಜರು ದಾಸರಂತೆ ಅನುಕೂಲತೆಯಿಂದಿರುವರು. ಆದ್ದರಿಂದ ಇಂತಹ ಮಂತ್ರರಾಜವನ್ನು ಜಪಿಸಿ ಸೋಹಂಭಾವ ಭಾವನೆಯಿಂದ ಶಿವಐಕ್ಯವನ್ನು ಚಿಂತಿಸುತ್ತಾ ಅಣಿಮಾದಿ ಸಕಲ ಸಿದ್ಧಿಗಳಿಗೆ ಅಧಿಪತಿಯಾಗಿ ಕಾಲಿಕಾದೇವಿಯನ್ನು ಸಾಕ್ಷಾತ್ಕರಿಸಿ ದೇವತಾಪ್ತಿಫಲವನ್ನು ಹೊಂದುವನು. ||೫||

ತಂತ್ರಶಾಸ್ತ್ರೋಪದೇಷ್ಟೃವಾದ ಶಿವನು ಪಾರ್ವತಿಯನ್ನು ಕುರಿತು ಉಪದೇಶ ಮಾಡುವ ಸಂದರ್ಭವಾದ್ದರಿಂದ ಇಲ್ಲಿ "ಆವಯೋಃ" ಎಂದರೆ ಶಿವ ಪಾರ್ವತಿಯರಿಗೆಂದು ಅರ್ಥ. ಯಾವ ಉಪಾಸಕನಿಗೆ ದಕ್ಷಿಣಕಾಲಿಕಾದೇವಿಯು ಉಪಾಸನಾ ಬಲದಿಂದ ಸಾಕ್ಷಾತ್ಕಾರಕ್ಕೆ ಗೋಚರಳಾಗುವಳೋ ಅವನು ಶಿವ ಪಾರ್ವತಿಯರಿಗೆ ಅನುಗ್ರಹಪಾತ್ರನಾಗಿ ಪಾಪರಹಿತನಾಗಿ ಜೀವನ್ಮುಕ್ತನಾಗುವನು. ಅಂತಹ ಜೀವನ್ಮುಕ್ತಿ ಫಲಭಾಗಿಯಾಗುವ ಉಪಾಸಕನು ಮಹಾ ಕೃತಕೃತ್ಯನು. ||೬||

ಕಾಲೀ ಮಹಾಮಂತ್ರ ಜಪಪುರಶ್ಚರಣ ಮಾಡುವವನು ಜಪಸಂಖ್ಯೆಗೆ ಅನುಸಾರವಾಗಿ ದಶಾಂಶವಾಗಿ ಹೋಮವನ್ನು ಆಮೇಲೆ ಅದಕ್ಕೆ ದಶಾಂಶವಾಗಿ ತರ್ಪಣವನ್ನೂ ಕಾಲೀದೇವತಾ ತೃಪ್ತಿಗೋಸ್ಕರ ಮಾಡಬೇಕು. ಜೊತೆಗೆ ಕಾಮ್ಯ ಯಜ್ಞಾದಿಧರ್ಮಗಳನ್ನೂ ಅದ್ವೈತಜ್ಞಾನಾದಿನಿಷ್ಠೆಯನ್ನೂ ಸ್ವಾಧ್ಯಾಯ ಪಾರಾಯಣ ಮೊದಲಾದ ವಾಙ್ಮಯ ಸರಸ್ವತೀ ಉಪಾಸನಾ ಅನುಷ್ಠಾನವನ್ನೂ ಮಾಡಬೇಕೆಂದು ಕೆಲವರ ಮತವು. ||೭||

ಕಾಲಿಕಾಮಂತ್ರ ಜಪಪರನು ಸರ್ವಕಾಲದಲ್ಲಿಯೂ ಶುದ್ಧಾಂತಃಕರಣವುಳ್ಳನಾಗಿ ಜ್ಞಾನವೈರಾಗ್ಯದಿಂದ ಕೂಡಿ ಶಾಂಭವೀ ಅಥವಾ ಶಾಕ್ತದೀಕ್ಷೆಯನ್ನು ಕೈಗೊಳ್ಳಬೇಕು. ಮತ್ತು ಬ್ರಹ್ಮಚರ್ಯವನ್ನು ಆಚರಿಸುತ್ತಾ ರಾತ್ರಿಯಲ್ಲಿ ನಗ್ನನಾಗಿ ಯಾವಾಗಲೂ ಮದ್ಯದ್ರವ್ಯದಿಂದಲೂ ಅಶಕ್ತನಾದರೆ ಮಾನಸವಾದ ಮದ್ಯಾದಿ ಉಪಚಾರಗಳಿಂದಲೂ ಜಪಪೂಜಾದಿ ನಿಯಮವನ್ನು ಆಚರಿಸಬೇಕು. ಬ್ರಹ್ಮಚರ್ಯವ್ರತ, ಮಧುದಾನ ಪ್ರಾಶನಗಳು, ಮಾನಸಪೂಜಾದಿಗಳು ಈ ಪುರಶ್ಚರಣಕ್ಕೆ ಅಂಗಗಳೆಂದು ತಾತ್ಪರ್ಯವು. ಕಾಲಿಕಾದೇವಿಯ ತೃಪ್ತಿಗಾಗಿ ಸ್ತ್ರೀಯರಿಗೆ ಪ್ರಿಯವನ್ನು ಆಚರಿಸುತ್ತಾ ಭಗೇಂದ್ರಿಯ ಜಲದಿಂದ ತರ್ಪಣಪೂಜೆಗಳನ್ನು ಮಾಡಬೇಕು. ಸರ್ವಕಾಲದಲ್ಲಿಯೂ ತನ್ನನ್ನು ಕಾಲಿಕಾರೂಪನನ್ನಾಗಿ ಭಾವಿಸಬೇಕು. ||೮||

ಯಾವಾಗಲೂ ನಾರಿಯರಲ್ಲಿ ಆಸಕ್ತನಾಗಿರಬೇಕು. ಅಂತಹ ಕಾಲೀಭಕ್ತನು ಮಧುದಾನದಿಂದ ಸರ್ವಹತ್ಯಾದೋಷವನ್ನು ಕಳೆದುಕೊಳ್ಳುವನು. ಮತ್ತು ಮದ್ಯಾದಿ ಪಂಚ ಮಕಾರಾದಿ ದ್ರವ್ಯದಾನಸೇವನದಿಂದ ಮಾಯಾ ಮುಂತಾದ ಸರ್ವತತ್ತ್ವಗಳ ಜ್ಞಾನವನ್ನೂ ಪಶು, ಧನ, ಧಾನ್ಯ ಮುಂತಾದ ಸಂಪತ್ತಿಯನ್ನೂ ಸರ್ವೇಶ್ವರತ್ವವನ್ನೂ ಕವಿತಾಶಕ್ತಿಯನ್ನೂ ಹೊಂದುವನು. ಮೋಕ್ಷಜ್ಞಾನ ಧರ್ಮಾಧರ್ಮ ಪರಿಜ್ಞಾನ ಇವುಗಳಿಗೆ ಈ ಮಂತ್ರೋಪಾಸನೆಯ ಹೊರತು ಬೇರೊಂದು ಉತ್ಕೃಷ್ಟವಾದ ದಾರಿಯಿಲ್ಲ. ||೯||

ತತ್ ಸರ್ವಂ ಭೂತಂ ಭವ್ಯಂ ಯತ್ಕಿಂಚಿದ್ ದೃಶ್ಯಮಾನಂ ಸ್ಥಾವರ-ಜಂಗಮಂ ತತ್ಸರ್ವಂ ಕಾಲಿಕಾತಂತ್ರೇ ಓತಂ ಪ್ರೋತಂ ವೇದ। ಯ ಏವಂ ಮನುಜಾಪೀ ಸ ಪಾಪ್ಮಾನಂ ತರತಿ। ಸ ಭ್ರೂಣಹತ್ಯಾಂ ತರತಿ। ಸೋಽಗ-ಮ್ಯಾಗಮನಂ ತರತಿ। ಸರ್ವಸುಖಮವಾಪ್ನೋತಿ। ಸ ಸರ್ವಂ ಜಾನಾತಿ। ಸ ಸರ್ವಸನ್ನ್ಯಾಸೀ ಭವತಿ। ಸ ವಿರಕ್ತೋ ಭವತಿ। ಸ ಸರ್ವವೇದಾಧ್ಯಾಯೀ ಭವತಿ। ಸ ಸರ್ವಮಂತ್ರಜಾಪೀ ಭವತಿ। ಸ ಸರ್ವಶಾಸ್ತ್ರವೇತ್ತಾ ಭವತಿ। ಸ ಸರ್ವಜ್ಞಾನಕಾರೀ ಭವತಿ। ಸ ಆವಯೋರ್ಮಿತ್ರಭೂತೋ ಭವತಿ। ಇತ್ಯಾಹ ಭಗವಾನ್ ಶಿವಃ। ನಿರ್ವಿಕಲ್ಪೇನ ಮನಸಾ ಸ ವಂದ್ಯೋ ಭವತಿ ॥೧೦॥

ಅಥ ಹೈನಾಮ್ ।

ಮೂಲಾಧಾರೇ ಸ್ಮರೇದ್ದಿವ್ಯಂ ತ್ರಿಕೋಣಂ ತೇಜಸಾಂ ನಿಧಿಮ್ ।
ಶಿಖಾ ಆನೀಯ ತಸ್ಯಾಗ್ನೇರಥ ತೂರ್ಧ್ವಂ ವ್ಯವಸ್ಥಿತಾ ॥
ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ ।
ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ ॥೧೧॥

ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಸ ಬ್ರಹ್ಮಾ ಸ ಶಿವಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್ ॥
ಸ ಏವ ವಿಷ್ಣುಃ ಸ ಪ್ರಾಣಃ ಸ ಕಾಲೋಽಗ್ನಿಃ ಸ ಚಂದ್ರಮಾಃ ।
ಇತಿ ಕುಂಡಲಿನೀಂ ಧ್ಯಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥೧೨॥

ಮಹಾಪಾತಕೇಭ್ಯಃ ಪೂತೋ ಭೂತ್ವಾ ಸರ್ವಮಂತ್ರಸಿದ್ಧಿಂ ಕೃತ್ವಾ ಭೈರವೋ ಭವೇತ್ ॥೧೩॥

ಮಹಾಕಾಲಭೈರವೋಽಸ್ಯ ಋಷಿಃ। ಅನುಷ್ಟುಪ್ ಛಂದಃ। (ಉಷ್ಣಿಕ್ ಛಂದಃ) ಕಾಲಿಕಾ ದೇವತಾ। ಹ್ರೀಂ ಬೀಜಂ। ಹ್ರೂಂ ಶಕ್ತಿಃ। ಕ್ರೀಂ ಕೀಲಕಂ।

ವ್ಯವಹಾರಮಾರ್ಗದಲ್ಲಿ ಪ್ರಸಿದ್ಧವಾದ ಪ್ರತಿಯೊಂದು ಭೂತ ವರ್ತಮಾನ ಭವಿಷ್ಯತ್ ವಸ್ತುಗಳೂ ಸ್ಥಾವರಜಂಗಮವೆಂಬ ಪ್ರಾಣಿವರ್ಗವೂ ಕಾಲಿಕಾದೇವಿಗೆ ಅಭಿನ್ನವಾದ ತಂತ್ರದಲ್ಲಿ ಓತಪ್ರೋತಭಾವ (ಅಡ್ಡಉದ್ದವಾಗಿ ಹೆಣದಿರುವದು) ದಿಂದ ಸೇರಿದೆಯೆಂದು ಧ್ಯಾನಿಸಬೇಕು. ದೇವಿಯು ಸರ್ವಾತ್ಮಕಳೆಂದು ಭಾವವು. ಇಂತಹ ಸರ್ವಾತ್ಮಕತ್ವ ಭಾವನೆಯಿಂದ ಮಂತ್ರಜಪಕರ್ತನು ಸಮಸ್ತಪಾಪಗಳನ್ನೂ ವಿಶೇಷವಾಗಿ ಭ್ರೂಣಹತ್ಯಾ—ಅಗಮ್ಯಾಗಮನ ಪಾಪಗಳನ್ನೂ ಹೋಗಲಾಡಿಸಿಕೊಳ್ಳುವನು. ಮತ್ತು ಸರ್ವವಿಧಸುಖವನ್ನೂ, ಸರ್ವಜ್ಞತ್ವವನ್ನೂ ಸರ್ವಸನ್ನ್ಯಾಸಯೋಗವನ್ನೂ ವೈರಾಗ್ಯವನ್ನೂ ಸರ್ವವೇದಾಧ್ಯಯನ, ಸರ್ವಮಂತ್ರ ಜಪ, ಸರ್ವಶಾಸ್ತ್ರಾರ್ಥಪರಿಜ್ಞಾನ, ಇವುಗಳ ಮಹಾಫಲವನ್ನೂ ಹೊಂದಿ ಶಿವ (ಪಾರ್ವತಿ) ಶಕ್ತಿಗಳಿಗೆ ಮಿತ್ರನಾಗುವನೆಂದು ಭಗವಂತನಾದ—ಶಿವನು ಉಪದೇಶಿಸಿರುವನು. ವಿಕಲ್ಪರಹಿತವಾದ ಧ್ಯೇಯಾಕಾರದ ಮನಸ್ಸಿನಿಂದ ಧ್ಯಾನಿಸಿ ಉಪಾಸ್ಯದೇವತಾ ಅಭೇದವನ್ನು ಹೊಂದಿದ ಭಕ್ತನು ದೇವತೆಯಂತೆ ಸರ್ವರಿಗೂ ನಮಸ್ಕಾರಾರ್ಹನಾಗುವನು. ||೧೦||

ಕಾಲಿಕಾದೇವಿಯನ್ನು ಅಧ್ಯಾತ್ಮೋಪಾಸನೆಮಾಡುವ ಕ್ರಮವು ಈ ರೀತಿಯಾದುದು——ಮೂಲಾಧಾರ ಚಕ್ರದಲ್ಲಿ ದಿವ್ಯವೂ ತೇಜಃಪುಂಜರೂಪವೂ ಆದ ತ್ರಿಕೋಣಪದ್ಮವಿರುವಂತೆ ಸ್ಮರಿಸಿ ಅದರಮೇಲೆ ಅಗ್ನಿಶಿಖೆಯು ಊರ್ಧ್ವಜ್ವಾಲಾ ರೂಪವಾಗಿ ಇರುವುದೆಂದು ಸ್ಮರಿಸಬೇಕು. ಆ ಅಗ್ನಿಶಿಖೆ ನೀವಾರಧಾನ್ಯದ ಮುಳ್ಳಿನಂತೆ ಕೃಶರೇಖಾರೂಪವೂ ಅಣುರೂಪವುಳ್ಳದ್ದಾಗಿಯೂ, ಹೊಂಬಣ್ಣದಿಂದ ಪ್ರಕಾಶಿಸುವುದಾಗಿಯೂ ಇರುವುದಲ್ಲದೇ ಕಪ್ಪು ಮೇಘದ ಮಧ್ಯದಲ್ಲಿ ಥಳಥಳಿಸುವ ಮಿಂಚಿನಂತೆ ಭಾಸುರಾಕಾರದಿಂದ ಶೋಭಿಸುವುದು. ||೧೧||

ಆ ಅಗ್ನಿಶಿಖೆಯ ಮಧ್ಯದಲ್ಲಿ ಪರಮಾತ್ಮನು ವಾಸಿಸುವನು. ಆ ಪರಮಾತ್ಮನು ಚತುರ್ಮುಖ, ಶಿವ, ಇಂದ್ರ, ಶ್ರೇಷ್ಠನಾದ ಸ್ವರಾಟ್, ವಿಷ್ಣು, ಪ್ರಾಣ, ಕಾಲ, ಅಗ್ನಿ, ಚಂದ್ರ, ಮುಂತಾದ ಸ್ಥಾನಕರ್ಮಗಳಿಂದ ನಾನಾವಿಧ ಅಧಿಕಾರಗಳನ್ನು ಹೊಂದಿ ವಿಭಕ್ತರಾದಂತಿರುವ ಸಕಲದೇವತಾಸ್ವರೂಪನಾಗಿರುವನು. ಈ ವಿಧದಿಂದ ಮೂಲಾಧಾರ ತ್ರಿಕೋಣ ಪದ್ಮ ಕರ್ಣಿಕೆಯಲ್ಲಿರುವ ಅಗ್ನಿಶಿಖಾಮಧ್ಯಸ್ಥಪರಮಾತ್ಮರೂಪದಿಂದ ಕುಂಡಲಿನಿಯನ್ನು ಧ್ಯಾನಿಸುವುದರಿಂದ ಸರ್ವಪಾಪಗಳಿಂದ ಮುಕ್ತನಾಗುವನು. ||೧೨||

ಮಹಾಪಾತಕನಿರ್ಮುಕ್ತನಾಗಿ ಅತ್ಯಂತಪವಿತ್ರನಾಗಿ ಜಪಿಸಿದ ಈ ಮಂತ್ರದ ಸಿದ್ಧಿಯನ್ನು ಹೊಂದಿ ಮಂತ್ರದರ್ಶಿಯಾದ ಭೈರವಋಷಿಸ್ವರೂಪನೇ ತಾನಾಗಿ ಭೈರವನಂತೆ ತಾನು ಮಂತ್ರದ್ರಷ್ಟೃಪದವನ್ನು ಹೊಂದುತ್ತಾನೆ. ||೧೩||

ಈ ಮಂತ್ರ ಜಪದ ಆದಿಯಲ್ಲಿ ಸ್ಮರಿಸಬೇಕಾದ ಋಷಿ ಛಂದ ಮುಂತಾದುವುಗಳನ್ನು ಈ ವಾಕ್ಯಗಳು ತೋರಿಸುವುವು. ಮಹಾ ಕಾಲಭೈರವನು ಈ ಮಂತ್ರ ದರ್ಶನ ಮಾಡಿದ ಋಷಿಯು, ಅನುಷ್ಟುಪ್, ಅಥವಾ ಉಷ್ಣಿಕ್ ಎಂಬ ಛಂದಸ್ಸು, ಕಾಲಿಕಾ, ಅಥವಾ ಅನಿರುದ್ಧ ಸರಸ್ವತೀ ಎಂಬ ದೇವತೆ, ಹ್ರೀಂಕಾರವು ಬೀಜ,

(ಅನಿರುದ್ಧಸರಸ್ವತೀ ದೇವತಾ |) ಕವಿತ್ವೇ ಪಾಂಡಿತ್ಯಾರ್ಥೇ (ಧರ್ಮಾರ್ಥ ಕಾಮಮೋಕ್ಷಾರ್ಥೇ) ಜಪೇ ವಿನಿಯೋಗಃ | ಇತ್ಯೇವಮೃಷಿಚ್ಛಂದೋ ದೈವತಂ ಜ್ಞಾತ್ವಾ ಮಂತ್ರಸಾಫಲ್ಯಮಶ್ನುತೇ | ಅಥರ್ವವಿದ್ಯಾಂ ಪ್ರಥ-ಮಮೇಕಂ ದ್ವಯಂ ತ್ರಯಂ ವಾ ನಾಮದ್ವಯಸಂಪುಟಿತಂ ಕೃತ್ವಾ ಯೋಜಯೇತ್ | ಗತಿಸ್ತಸ್ಯಾಸ್ತೀತಿ | ನಾನ್ಯಸ್ಯ ಗತಿರಸ್ತೀತಿ | ಓಂ ಸತ್ಯಮ್ | ಓಂ ತತ್ಸತ್ ||೧೪||

ಅಥ ಹೈನಂ ಗುರುಂ ಪರಿತೋಷ್ಯ ಏನಂ ಮಂತ್ರರಾಜಂ ಗೃಹ್ಣೀ-ಯಾತ್ | ಮಂತ್ರರಾಜಂ ಗುರುಸ್ತಮಪಿ ಶಿಷ್ಯಾಯ ಸತ್ಕುಲೀನಾಯ ವಿದ್ಯಾಭಕ್ತಾಯ ಸುವೇಷಾಂ ಸ್ತ್ರಿಯಂ ಸ್ಪೃಷ್ಟ್ವಾ ಸ್ವಯಂ ನಿಶಾಯಾಂ ನಿರುಪದ್ರವಃ ಪರಿಪೂಜ್ಯ ಏಕಾಕೀ ಶಿವಗೇಹೇ ಲಕ್ಷಂ ತದರ್ಧಂ ವಾ ಜಪಿತ್ವಾ ದದ್ಯಾತ್ | ಓಂ ಓಂ ಓಂ ಸತ್ಯಂ ಸತ್ಯಂ ಸತ್ಯಂ ನಾನ್ಯ ಪ್ರಕಾರೇಣ ಸಿದ್ಧಿರ್ಭ ವತಿ | ಅಥಾಹ ವೈ ಕಾಲಿಕಾಮನೋಃ ತಾರಾಮನೋಃ ತ್ರಿಪುರಾಮನೋಃ ಸರ್ವದುರ್ಗಾಮನೋರ್ವಾ ಸ್ವರೂಪಸಿದ್ಧಿರೇವಮಿತಿ ಶಿವಮ್ ||೧೫||

ಇತಿ ಕಾಲಿಕೋಪನಿಷತ್ ಸಮಾಪ್ತಾ.



ಹ್ರೂಂಕಾರವು ಶಕ್ತಿ, ಕ್ರೀಂ ಎಂಬ ವರ್ಣವು ಕೀಲಕ, ಇವುಗಳಿಂದ ಕೂಡಿದ ಈ ಮಂತ್ರವನ್ನು ಕವಿತ್ವ, ಪಾಂಡಿತ್ಯ ಅಥವಾ ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕುಪುರುಷಾರ್ಥಗಳ ಸಿದ್ಧಿಗೆ ಅಂಗವಾಗಿ ಜಪಿಸಬೇಕು. ಈ ರೀತಿಯಾಗಿ ಋಷಿ ಛಂದೋ ದೇವತೆಗಳನ್ನು ಅರಿತು ಜಪಿಸುವವನಿಗೆ ಮಂತ್ರಸಿದ್ಧಿಯಾಗುವುದು. ಅಥರ್ವವೇದಪ್ರೋಕ್ತವಾದ ಹ್ರೀಂ ಹ್ರೂಂ ಕ್ರೀಂ ಎಂಬ ಬೀಜಮಂತ್ರ ಅಕ್ಷರಗಳನ್ನು ಒಂದು, ಎರಡು, ಅಥವಾ ಮೂರನ್ನು ತನ್ನ ಇಚ್ಛಾನುಸಾರವಾಗಿ ದಕ್ಷಿಣೇ ಕಾಲಿಕೇ ಎಂಬ ನಾಮದ್ವಯದಿಂದ ಆದ್ಯಂತಗಳಲ್ಲಿ ಸಂಪುಟಿತವಾಗುವಂತೆ ಸೇರಿಸಬೇಕು. ಇಂತಹ ವಿಧಿಜ್ಞನಿಗೆ ಸದ್ಗತಿಯು ಅಖಂಡಿತವಾಗಿರುವುದು. ಬೇರೆಯವನಿಗೆ ಗತಿಯು ದೊರೆಯುವುದಿಲ್ಲ. ಮಂತ್ರ ವಿಧಿಯನ್ನು ಉಪದೇಶಿಸಿ ಸಮಾಪ್ತಿಯಲ್ಲಿ ಪರಶಕ್ತಿವಾಚಕವಾದ "ಸತ್ಯ, ತತ್ಸತ್" ಪದಗಳನ್ನು ಪ್ರಣವ ಸಹಿತವಾಗಿ ಮಂಗಲಾರ್ಥವಾಗಿ ಪಾಠಮಾಡಿರುತ್ತದೆ. ॥೧೪॥

ಈ ಮಂತ್ರದ ಉಪದೇಶಾಕಾಂಕ್ಷಿಯಾದ ಶಿಷ್ಯನು ಸದ್ಗುರುವಿಗೆ ಪ್ರಣಿಪಾತ ಶುಶ್ರೂಷಾದಿಗಳಿಂದ ಪ್ರಿಯತಮನಾಗಿ ಗುರುವಿನ ಪರಿತೋಷವನ್ನುಂಟುಮಾಡಿ ಆತನಿಂದ ಉಪದೇಶವನ್ನು ತೆಗೆದುಕೊಳ್ಳಬೇಕು. ಹಾಗೆ ಉಪದೇಶಿಸಬೇಕೆಂದಿರುವ ಗುರುವು ಉಪದೇಶದ ಅದಿಯಲ್ಲಿ ಮಂತ್ರಸಿದ್ಧಿಗಾಗಿ ವಿಶೇಷ ಜಪವನ್ನು ಮುಂದೆ ಹೇಳುವ ವಿಧಾನದಿಂದ ಆಚರಿಸಬೇಕು. ಸತ್ಕುಲೋತ್ಪನ್ನನೂ ವಿದ್ಯಾದೇವತಾಭಕ್ತಿ ಸಂಪನ್ನನೂ ಆದ ಶಿಷ್ಯನಿಗೆ ಉಪದೇಶಿಸುವುದಕ್ಕಾಗಿ ಅಂದವಾಗಿ ಸುವೇಷಭಾಷೆಗಳಿಂದ ಅಲಂಕೃತಳಾದ ಸ್ತ್ರೀಯನ್ನು ಸ್ಪರ್ಶಮಾಡಿ ತಾನೇ ರಾತ್ರಿಯಲ್ಲಿ ಉಪದ್ರವಗಳಾವುವೂ ಸಂಭವಿಸದಂತೆ ಜಾಗರೂಕನಾಗಿ ಪೂಜಿಸಿ ಏಕಾಕಿಯಾಗಿ ಶಿವಾಲಯದಲ್ಲಿ ಮಂತ್ರವನ್ನು ಲಕ್ಷಸಂಖ್ಯೆ ಅಥವಾ ತದರ್ಧಸಂಖ್ಯೆಯಿಂದ ಜಪಿಸಿ ಶಿಷ್ಯನಿಗೆ ಈ ವಿದ್ಯೆಯನ್ನು ದಾನ ಮಾಡಬೇಕು. ಈ ಉಪನಿಷತ್ತಿನಲ್ಲಿ ಹೇಳಿರುವ ವಿಧಾನವೇ ಸದ್ಗತಿಪ್ರಾಪಕವೆಂದು ಮೂರುಸಲ ಶಪಥರೂಪವಾಗಿ ಹೇಳಿರುವ ನೆಪದಿಂದ ಪ್ರಣವಾದಿಯಾದ ಸತ್ಯ ಶಬ್ದದ ತ್ರಿರಾವೃತ್ತಿಯಿಂದ ಪ್ರಣವ ಸತ್ಯಶಬ್ದಾರ್ಥವಾದ ಪರಾದೇವತೆಯನ್ನು ಅನುಸಂಧಾನ ಮಾಡಿ ಮಂಗಲಾಂತದಿಂದ ಉಪನಿಷದ್ವಿಧಾನವನ್ನು ಮುಗಿಸಿದೆ. ಬೇರೆ ವಿಧಿಯನ್ನವ ಲಂಬಿಸಿದರೆ ನಿಜವಾಗಿ ಮಂತ್ರಸಿದ್ಧಿಯಾಗುವುದಿಲ್ಲ. ಈ ವಿಧಿಯನ್ನು ಕಾಲಿಕಾ, ತಾರಾ, ತ್ರಿಪುರಾ, ಸರ್ವದುರ್ಗಾ, ಎಲ್ಲ ಮಂತ್ರಪುರಶ್ಚರಣಗಳಲ್ಲಿಯೂ ಇಟ್ಟು ಕೊಳ್ಳಬೇಕು. ಈ ಮಂತ್ರದಲ್ಲಿ ಸೇರಿದ ವರ್ಣಗಳಿಂದಲೇ ತಾರಾಮಂತ್ರಾದಿಗಳು ಸಿದ್ಧವಾಗುವುವು. ಆದ್ದರಿಂದ ಆ ಮಂತ್ರಗಳ ಸಿದ್ಧಿಯು ಇದರ ಸಿದ್ಧಿಯಲ್ಲಿ ಅಂತರ್ಗತವಾಗುವುದು. ॥೧೫॥

ಕಾಲಿಕೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

## ॥ ಕಾಲೀ ಮೇಧಾ ದೀಕ್ಷಿತೋಪನಿಷತ್ ॥

---

ಅಥಾಹ ವೈ ದೇವಾನಾಂ ಪತ್ನೀಂ ಭಜತೇ ॥೧॥

ತಸ್ಯೋಪಾಸಕೋನ್ಯಾಂ ಗಚ್ಛನ್ ಓಂ ಅಥೈನಾಂ ಮೇಧಾದೀಕ್ಷಿತರೂಪಿಣೀಂ ಭಾವಯೇತ್ ॥೨॥

ಸ ಶಿವೋ ಭವೇತ್ । ಸ ಕಾಲೀರೂಪೋ ಭವೇತ್ । ಸೋಯಂ ಮೇಧಾಸ್ಪರ್ಶಮಣಿಕಾಲೀಂ ದೀಕ್ಷಯೇತ್ । ತತಶ್ಚಿಂತಾಮಣಿಕಾಲೀಂ ದೀಕ್ಷಯೇತ್ । ತತಃ ಸಿದ್ಧಕಾಲ್ಯಧಿಕಾರೀ ಭವೇತ್ ॥೩॥

ತತೋ ವಿದ್ಯಾರಾಜ್ಞೀಂ ಜಪೇತ್ । ತತಃ ಕಾಮಕಲಾಕಾಲೀಂ ಪರಾರೂಪಿಣೀಂ ಜಪೇತ್ । ತತಶ್ಚರಣದೀಕ್ಷಾರೂಪಿಣೀಂ ಹಂಸಕಾಲೀಂ ಯಜೇತ್ । ರಕ್ತಶುಕ್ಲಮಿಶ್ರನಿರ್ವಾಣರೂಪಿಣೀಂ ಯಜೇತ್ ॥೪॥

|| ಶ್ರೀಃ ||

# ಕಾಲೀ ಮೇಧಾ ದೀಕ್ಷಿತೋಪನಿಷತ್ತಿನ ಕನ್ನಡ ಅನುವಾದವು.

---

ಅಥರ್ವವೇದದ ಸೌಭಾಗ್ಯಕಾಂಡದ ಉಪನಿಷತ್ತುಗಳ ವರ್ಗದಲ್ಲಿ ಕಾಲೀ ಮೇಧಾದೀಕ್ಷಿತೋಪನಿಷತ್ ಎಂಬ ಒಂದು ಶಾಕ್ತಉಪನಿಷತ್ತು ಪ್ರಸಿದ್ಧವಾಗಿದೆ. ಕಾಲಿಕಾದೇವಿಯ ವಿವಿಧರೂಪಗಳಲ್ಲಿ ಒಂದೊಂದನ್ನು ಉದ್ದೇಶಿಸಿ ಆಚರಿಸಬೇಕಾದ ಉಪಾಸನಾಪ್ರಯೋಗ ಭೇದಗಳಲ್ಲಿ ಮೇಧಾದೀಕ್ಷೆಯೆಂಬ ದೀಕ್ಷಾವಿಧಿ, ಅದರ ಪಾರ್ಯಂತಿಕ ಪ್ರಯೋಜನ, ಮುಂತಾದುದು ಈ ಉಪನಿಷತ್ತಿನಲ್ಲಿ ಪ್ರತಿಪಾದಿಸಲ್ಪಡುವ ವಿಷಯ. ಒಬ್ಬ ಉಪಾಸಕನು ದೇವಪತ್ನೀರೂಪಳಾಗಿದ್ದ ಕಾಳೀದೇವಿಯನ್ನು ಸೇವಿಸುವನು. ಈ ಸಂದರ್ಭದಲ್ಲಿ ವಿಧಾನವನ್ನು ಶಿವನು ಪಾರ್ವತಿಗೆ ಕೆಳಗೆ ಕಂಡಂತೆ ಉಪದೇಶಿಸುವನು. ||೧||

ಅದೇ ಉಪಾಸನೆಯನ್ನು ಆಚರಿಸುವ ಉಪಾಸಕನು ಅದಕ್ಕೆ ಅಂಗವಾಗಿ ಪರಸ್ತ್ರೀಯೊಡನೆ ರಮಿಸುವಾಗ ಆ ನಾರಿಯನ್ನು ಮೇಧಾ ದೀಕ್ಷಿತರೂಪಳನ್ನಾಗಿ ಭಾವಿಸಬೇಕು. ||೨||

ಈ ಉಪಾಸನೆಯಫಲವಾಗಿ ಮೇಲಿನ ಉಪಾಸನಾಧಿಕಾರವನ್ನು ಹೊಂದಿ ತನ್ಮೂಲಕವಾಗಿ ಸಕಲದೇವತಾಗುರುವಾದ ಪರಮಶಿವನೂ, ಉಪಾಸ್ಯಕಾಲೀದೇವತಾಸ್ವರೂಪನೂ ಆಗುವನು. ಮತ್ತು ಈ ಉಪಾಸನಾನಂತರದಲ್ಲಿ ಮೇಧಾಸ್ಪರ್ಶ ಮಣಿಕಾಲೀ ದೀಕ್ಷೆಯಲ್ಲಿ ಅಧಿಕಾರಿಯಾಗುವನು. ಅಲ್ಲಿ ಹೊಂದಬೇಕಾದ ಸಿದ್ಧಿಯನ್ನು ಹೊಂದಿದಮೇಲೆ ಚಿಂತಾಮಣಿ ಕಾಲೀದೀಕ್ಷೆಯಲ್ಲಿಯೂ ಅಧಿಕಾರಿಯಾಗಿ ಆ ದೀಕ್ಷೆಯನ್ನು ಕೈಗೊಳ್ಳಬೇಕು. ತರುವಾಯ ಸಿದ್ಧಕಾಲೀತಂತ್ರದಲ್ಲಿ ಅಧಿಕಾರಿಯಾಗುತ್ತಾನೆ. ||೩||

ಈ ಉಪಾಸನಾಪ್ರಸಂಗದಲ್ಲಿ ಕಾಲೀಸಂಬಂಧವಾದ ವಿದ್ಯಾರಾಜ್ಞೀಮಂತ್ರವನ್ನು ಕಾಮಕಲಾ ಕಾಲೀದೇವೀಪರವಾದ ಪರಮಂತ್ರವನ್ನು ಜಪಿಸಬೇಕು. ಮತ್ತು ಚರಣದೀಕ್ಷಾರೂಪಿಣಿಯಾದ ಹಂಸಕಾಲೀದೇವಿಯನ್ನು ರಕ್ತ ಶುಕ್ಲ ಮಿಶ್ರ ಬಿಂದು ಸ್ವರೂಪ ನಿರ್ವಾಣರೂಪಿಣಿಯಾದ ದೇವಿಯನ್ನು ಜಪ ಪೂಜಾದಿವಿಧಿಯಿಂದ ಸೇವಿಸಬೇಕು. ||೪||

ಸರ್ವನಿರ್ವಾಣದೀಕ್ಷಿತೋ ಭವೇತ್ । ತತಃ ಶಾಂಭವೀದೀಕ್ಷಿತೋ ಭವೇತ್ । ಗುಹ್ಯಕಾಲ್ಯಧಿಷ್ಠಿತೋ ಭವೇತ್ । ಶಿವೋ ಭವೇತ್ । ಸ ಪರಾರೂಪೋ ಭವೇತ್ । ಪರಾತ್ಪರರೂಪೋ ಭವೇತ್ । ಪರಾತ್ಪರಾತೀತರೂಪೋ ಭವೇತ್ । ಚಿತ್ಪರಾರೂಪೋ ಭವೇತ್ । ಚಿತ್ಪರಾತ್ಪರಾರೂಪೋ ಭವೇತ್। ಚಿತ್ಪರಾತ್ಪರಾತೀತರೂಪೋ ಭವೇತ್। ಬ್ರಹ್ಮ ವಿಷ್ಣು ರುದ್ರೇಶ್ವರ ಸದಾಶಿವ ಮಹಾಕಾಲ ಚಿತ್ಪರಾಂಬಾರೂಪೋ ಭವೇತ್ ॥೫॥

ಸ ಬ್ರಹ್ಮತ್ವಂ ಗಚ್ಛತಿ । ಮೇಧಾದೀಕ್ಷಾಂ ಲಭೇತ್ । ಮೇಧಾದೀಕ್ಷಾತಃ ಪರಾ ದೀಕ್ಷಾ ನ ವಿದ್ಯತ ಇತ್ಯಾಹ ಭಗವಾನ್ ಶಿವಃ । ಸ್ಪರ್ಶವಿದ್ಯಯಾ ದೇಹಶುದ್ಧಿರ್ಭವೇತ್ । ತತಶ್ಚಿಂತಾಮಣಿವಿದ್ಯಾಧಿಕಾರೀ ವಿದ್ಯಾರಾಜ್ಞೀಂ ಲಭೇತ್ ॥೬॥

ವಿದ್ಯಾರಾಜ್ಞ್ಯಧಿಕಾರೀ ತು ಷೋಢಾಂ ಜಪೇತ್ । ತುರ್ಯಾಷೋಢಾಧಿಕಾರೀ ಕಾಮಕಲಾಂ ಜಪೇತ್। ಕಾಮಕಲಾಧಿಕಾರೀ ಚರಣರೂಪಿಣೀಂ ಜಪೇತ್ ॥೭॥

ಹಂಸದೀಕ್ಷಿತೋ ಭವೇತ್ । ಚರಣಾಧಿಕಾರೀ ಷಟ್‌ಛಾಂಭವಸಂಪನ್ನೋ ಭವೇತ್ । ಗುಹ್ಯಕಾಲ್ಯಧಿಷ್ಠಿತೋ ಭವೇತ್ । ತತೋ

ಅಂತಹ ಉಪಾಸಕನು ನಿರ್ವಾಣದೀಕ್ಷಿತನೂ ಆಮೇಲೆ ಶಾಂಭವೀ ದೀಕ್ಷಾ ಸಂಪನ್ನನೂ ಗುಹ್ಯಕಾಲೀಅಂಶದಿಂದ ಪರಿಪೂರ್ಣನಾದವನೂ ಆಗುವನು. ಅಂತಹವನು ಸಾಕ್ಷಾತ್ತಾಗಿ ಶಿವಸ್ವರೂಪನಾಗುವನು. ಮತ್ತು ದೇವಿಯ ವಿವಿಧ ರೂಪಗಳಲ್ಲಿ ಶ್ರೇಷ್ಠವೆನಿಸಿದ ದೇವಿಯ ಒಂದು ಆಕಾರಸ್ವರೂಪನೂ ಅದಕ್ಕಿಂತಲೂ ಶ್ರೇಷ್ಠವಾದ ದೇವೀ ಅಂಶಸ್ವರೂಪನೂ ಆಗಿ ಪರ ಅಪರಕೋಟಿಯನ್ನು ಮೀರಿದ ದೇವಿಯ ಐಕ್ಯವನ್ನು ಹೊಂದುವನು. ಇದೇ ಅಂಶವನ್ನು ದೇವಿಗೆ ಚೈತನ್ಯವೆಂಬ ವಿಶೇಷಣ ಧರ್ಮವನ್ನು ಬೋಧಿಸುವ "ಚಿತ್" ಎಂಬ ಪದವನ್ನು ಹೆಚ್ಚಾಗಿ ಸೇರಿಸಿ ಚಿತ್ಪರಾ ರೂಪನೂ ಚಿತ್ಪರಾತ್ಪರಾರೂಪನೂ ಚಿತ್ಪರಕ್ಕಿಂತ ಪರಾತೀತನೂ ಆಗುವನೆಂಬ ಪುನರುಕ್ತಿಯಿಂದ ಸ್ಪಷ್ಟಪಡಿಸಲ್ಪಟ್ಟಿದೆ. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಮಹಾಕಾಲ ಮತ್ತು ಚಿತ್ಪರಾಂಬಾ ಎಂಬ ನಿಖಿಲದೇವತಾ ಸ್ವರೂಪನು ಆಗುವನು. ಪರಾ, ಪರಾತ್ಪರಾ, ಪರಾತ್ಪರಾತೀತಾ, ಚಿತ್ಪರಾ, ಚಿತ್ಪರಾತ್ಪರಾ, ಚಿತ್ಪರಾತ್ಪರಾತೀತಾ ಎಂಬುವು ದೇವಿಯ ಷಟ್ಕಲೆಗಳು. ಒಂದೊಂದು ದೀಕ್ಷಾವಿಧಿ ಮಹಿಮೆಯಿಂದ ಒಂದೊಂದು ದೇವೀಕಲಾತ್ಮಕನಾಗುವನು. ॥೫॥

ಈ ಉಪಾಸನೆಯಿಂದ ಬ್ರಹ್ಮರೂಪವನ್ನು ಹೊಂದುತ್ತಾನೆ. ಮೇಧಾ ದೀಕ್ಷಾ ಎಂಬ ದೊಡ್ಡ ಸಿದ್ಧಿಯನ್ನು ಹೊಂದುತ್ತಾನೆ. ಮೇಧಾ ದೀಕ್ಷೆಗಿಂತಲೂ ದೊಡ್ಡ ದೀಕ್ಷೆಯೇ ಮತ್ತೊಂದು ಇಲ್ಲವೆಂದು ಶಿವನು ಉಪದೇಶಿಸಿರುವನು. ಮೇಧಾದೀಕ್ಷಾ ಲಾಭದಿಂದ ಪರಂಪರಾಕ್ರಮದಿಂದ ಮುಂದಿನ ಸಿದ್ಧಿಗಳನ್ನು ಸುಲಲಿತವಾಗಿ ಹೊಂದುವನು. ದೀಕ್ಷಾಬಲದಿಂದ ಸ್ಪರ್ಶವಿದ್ಯಾಮಹಿಮೆಯು ಗೋಚರವಾಗುವುದು. ದೀಕ್ಷಾಸಂಪನ್ನನ ಸ್ಪರ್ಶಮಾತ್ರದಿಂದ ದೇಹಶುದ್ಧಿಯು ಆಗುವುದು. ಆಮೇಲೆ ಚಿಂತಾಮಣಿ ವಿದ್ಯಾಧಿಕಾರಿಯಾಗಿ ವಿದ್ಯಾರಾಜ್ಞಿಯನ್ನು ಹೊಂದುವನು. ॥೬॥

ವಿದ್ಯಾರಾಜ್ಞಿಯಲ್ಲಿ ಅಧಿಕಾರಿಯಾದವನು ಷೋಢಾಮಂತ್ರವನ್ನು ಜಪಿಸಬೇಕು. ಅದರಲ್ಲಿ ಸಿದ್ಧಾಧಿಕಾರಿಯು ಕಾಮಕಲಾಮಂತ್ರವನ್ನು ಜಪಿಸಬೇಕು. ಅಲ್ಲಿ ಸಿದ್ಧನಾದವನು ಚರಣರೂಪಿಣೀ ವಿದ್ಯೆಯನ್ನು ಜಪಿಸಬೇಕು. ॥೭॥

ಮುಂದೆ ಹಂಸದೀಕ್ಷೆಯುಳ್ಳವನಾಗಬೇಕು. ಈ ರೀತಿ ಚರಣರೂಪಿಣೀ ವಿದ್ಯಾಧಿಕಾರಿಯು ಆರನೆಯ ಶಾಂಭವದೀಕ್ಷಾಸಂಪನ್ನನಾಗುವನು. ಈ ವಿಧಾನದಿಂದ ಗುಹ್ಯಕಾಲೀದೇವಿಯ ಅನುಗ್ರಹಕ್ಕೆ ಪಾತ್ರನಾಗಿ ದೇವತಾಂಶದಿಂದ ಕೂಡಿ ಗುಹ್ಯಕಾಲೀದೇವಿಯ ಅಧಿಷ್ಠಾನನಾಗುವನು. ಆದ್ದರಿಂದ ಮೊದಲು ಮೇಧಾ ದೀಕ್ಷೆಯನ್ನು ಆಚರಿಸಬೇಕು. ಮಂತ್ರಸಿದ್ಧಿ ಹೊಂದಿದವನು ಜೀವನ್ಮುಕ್ತನಾಗಿ ದುಂಬಿಯ ರೂಪವನ್ನು ಹೊಂದುವನು. ಪದ್ಮಕೋಶಗಳನ್ನು ಭೃಂಗವು ಭೇದಿಸಿ

ಮೇಧಾಂ ಚರೇತ್ । ಜೀವಕೋ ಹಿ ಭೃಂಗತ್ವಂ ಗಚ್ಛತಿ । ಭೃಂಗೀ ಭೂತ್ವಾ ಷಟ್ಚಕ್ರಾಣಿ ನಿರ್ಭಿಂದ್ಯಾತ್। ತತಃ ಪರಾಗಭುಗ್ಭವೇತ್। ಪರಕಾಯ ಪ್ರವೇಶವಾನ್ ವಯಃಸ್ಥೈರ್ಯಂ ಚರೇತ್ । ಕಾಮರೂಪತ್ವಂ ಗಚ್ಛತಿ । ಷಷ್ಟಿಸಿದ್ಧೀಶ್ವರೋ ಭವೇದಿತಿ ಶಿವಪ್ರೋಕ್ತಂ ವೇದ ॥೮॥

ಇತಿ ಕಾಲೀ ಮೇಧಾ ದೀಕ್ಷಿತೋಪನಿಷತ್ ಸಮಾಪ್ತಾ.



ದಂತೆ ಭೃಂಗರೂಪಿಯಾದ ಉಪಾಸಕನು ಮೂಲಾಧಾರಾದಿ ಷಟ್ಚಕ್ರಗಳನ್ನು ಭೇದಿಸುವನು. ಮತ್ತು ಪುಷ್ಪಧೂಳಿ ಮುಂತಾದ ರೇಣುಭೋಜಿಯೂ ಪರಕಾಯಪ್ರವೇಶ ಶಕ್ತಿಯುಳ್ಳವನೂ, ಸ್ಥಿರವಾದ ಆಯುಷ್ಯವುಳ್ಳವನೂ, ಸ್ವೇಚ್ಛಾ ಆಕಾರಗಳನ್ನು ಹೊಂದುವವನೂ ಅಲ್ಲದೇ ಅರವತ್ತುವಿಧ ಸಿದ್ಧಿಗಳಿಗೆ ಅಧಿಪತಿಯೂ ಆಗುವನು. ಶಿವೋಪದಿಷ್ಟಸಾರವನ್ನು ತಿಳಿದವನೂ ಈ ಫಲಭಾಗಿಯಾಗುವನು.

ಈ ರೀತಿಯಾಗಿ ಈ ಉಪನಿಷತ್ತಿನಲ್ಲಿ ಮೇಧಾದೀಕ್ಷಾ, ಮೇಧಾಸ್ಪರ್ಶಮಣಿ ಕಾಲೀದೀಕ್ಷಾ, ಚಿಂತಾಮಣಿ ಕಾಲೀದೀಕ್ಷಾ, ಚರಣಹಂಸಕಾಲೀದೀಕ್ಷಾ ಸರ್ವ ನಿರ್ವಾಣ ದೀಕ್ಷಾ, ಶಾಂಭವೀದೀಕ್ಷಾ ಎಂಬ ಆರು ದೀಕ್ಷಾಕ್ರಮಗಳು ಹೇಳಲ್ಪಟ್ಟಿವೆ. ಮೊದಲನೆಯ ದೀಕ್ಷೆಯು ಮುಂದಿನ ಎಲ್ಲ ಕ್ರಮಗಳಿಗೆ ಮೂಲವಾದ್ದರಿಂದ ಅದೇ ಮುಖ್ಯವು. ಅದರ ಪ್ರಯೋಗನೈಪುಣ್ಯದಿಂದ ಉತ್ತರೋತ್ತರ ಮಹಾಫಲಗಳೆಲ್ಲವೂ ಕರಗತವಾಗುವುವು. ಒಂದೊಂದು ದೀಕ್ಷೆಯಲ್ಲಿಯೂ ಧ್ಯೇಯರಾದ ದೇವಿಯರ ಪವಿತ್ರನಾಮಮಂತ್ರಗಳು ಬೇರೆಯಾಗಿ ತೋರಿಸಲ್ಪಟ್ಟಿವೆ. ಈ ರೀತಿಯಾಗಿ ಈ ಉಪನಿಷತ್ತು ಬಹು ನಿಗೂಢಾರ್ಥವನ್ನು ಪ್ರಕಟಿಸಿದೆ. ||೮||

ಕಾಲೀ ಮೇಧಾ ದೀಕ್ಷಿತೋಪನಿಷತ್ತಿನ ಕನ್ನಡ ಅನುವಾದವು ಮುಗಿದುದು.



॥ ಶ್ರೀರಸ್ತು ॥

## ॥ ಗುಹ್ಯಕಾಲ್ಯುಪನಿಷತ್ ॥

---

ಅಥರ್ವವೇದಮಧ್ಯೇ ತು ಶಾಖಾ ಮುಖ್ಯತಮಾ ಹಿ ಷಟ್ ।
ಸ್ವಯಂಭುವಾ ಯಾಃ ಕಥಿತಾಃ ಪುತ್ರಾಯಾಥರ್ವಣೇ ಪುರಾ ॥೧॥

ತಾಸು ಗುಹ್ಯೋಪನಿಷದಃ ತಿಷ್ಠಂತಿ ವರವರ್ಣಿನಿ ।
ನಾಮಾನಿ ಶೃಣು ಶಾಖಾನಾಂ ತತ್ರಾದ್ಯಾ ವಾರತಂತವೀ ॥೨॥

ಮೌಂಜಾಯನೀ ದ್ವಿತೀಯಾ ತು ತೃತೀಯಾ ತಾರ್ಣಬೈಂದವೀ ।
ಚತುರ್ಥೀ ಶೌನಕೀ ಪ್ರೋಕ್ತಾ ಪಂಚಮೀ ಪೈಪ್ಪಲಾದಿಕಾ ॥೩॥

ಷಷ್ಠೀ ಸೌಮನ್ತವೀ ಜ್ಞೇಯಾ ಸಾರಾತ್ಸಾರತಮಾ ಇಮಾಃ ।
ಗುಹ್ಯೋಪನಿಷದೋ ಗೂಢಾಃ ಸಂತಿ ಶಾಖಾಸು ಷಟ್ಸ್ವಪಿ ॥೪॥

ತಾ ಏಕೀಕೃತ್ಯ ಸರ್ವಾಸ್ತು ಮಯಾಸ್ಯಾಂ ವಿನಿವೇಶಿತಾಃ ।
ಸಂಹಿತಾಯಾಂ ಸಾಧಕಾನಾಮುದ್ಧಾರಾಯ ವರಾನನೇ ॥೫॥

ತಾಸ್ತೇ ವದಾಮಿ ಯತ್ಪ್ರೋಕ್ತಂ ಧ್ಯಾನಂ ಕುರ್ವಂತಿ ದೇವತಾಃ ।
ವಿರಾಟ್ಧ್ಯಾನಂ ಹಿ ತಜ್ಜ್ಞೇಯಂ ಮಹಾಪಾತಕನಾಶನಮ್ ॥೬॥

ಬ್ರಹ್ಮಾಂಡಾದ್ಬಹಿರೂರ್ಧ್ವಂ ಹಿ ಮಹತ್ತತ್ವಮಹಂಕೃತಿಃ ।
ರೂಪಾಣಿ ಪಂಚ ತನ್ಮಾತ್ರಾಃ ಪುರುಷಃ ಪ್ರಕೃತಿರ್ನವ ॥೭॥

|| ಶ್ರೀಃ ||

# ಗುಹ್ಯಕಾಳ್ಯುಪನಿಷತ್ತಿನ ಕನ್ನಡ ಅನುವಾದವು.

---

ಈ ಉಪನಿಷತ್ತು ಅಥರ್ವವೇದದ ಉಪನಿಷತ್ತುಗಳಲ್ಲಿ ಒಂದಾಗಿದೆ. ಶಿವ ಪಾರ್ವತಿಯರ ಸಂವಾದರೂಪದಿಂದ ಪ್ರಾರಂಭವಾಗಿದೆ; ಮತ್ತು ಉಪಕ್ರಮದಲ್ಲಿ ಇದರ ಉಪೋದ್ಘಾತವು ಸೇರಿದೆ. ಪೂರ್ವಕಾಲದಲ್ಲಿ ಬ್ರಹ್ಮನು ಅಥರ್ವನೆಂಬ ತನ್ನ ಮಗನಿಗೆ ಅಥರ್ವವೇದಕ್ಕೆ ಸೇರಿದ ಬಹುಮುಖ್ಯವಾದ ಆರು ವೇದದ ಶಾಖೆಗಳನ್ನು ಉಪದೇಶರೂಪವಾಗಿ ಹೇಳಿರುವನು. ||೧||

ಎಲೈ ಪಾರ್ವತಿಯೇ, ಆ ಶಾಖೆಗಳಲ್ಲಿ ಅನೇಕ ರಹಸ್ಯೋಪನಿಷತ್ತುಗಳು ಸೇರಿವೆ. ಆ ಶಾಖೆಗಳ ಹೆಸರನ್ನು ಕೇಳು. ವರತಂತುಶಾಖಾ ಎಂಬುದು ಮೊದಲನೆಯದು. ||೨||

ಮೌಂಜಾಯನೀ ಎಂಬುದು ಎರಡನೆಯ ಶಾಖೆಯು. ತೃಣಬಿಂದುಶಾಖಾ ಎಂಬುದು ಮೂರನೆಯದು. ಶೌನಕಶಾಖೆಯು ನಾಲ್ಕನೆಯ ಶಾಖೆಯು. ಪಿಪ್ಪಲಾದ ಶಾಖೆಯು ಐದನೆಯದು. ||೩||

ಸೌಮಂತವೀ ಎಂಬುದು ಆರನೆಯ ಶಾಖೆಯು. ಈ ಆರು ಶಾಖೆಗಳಲ್ಲಿಯೂ ಬಹುಮುಖ್ಯ ಸಾರವತ್ತಾದ ವಿಷಯಗಳನ್ನೇ ಪ್ರತಿಪಾದಿಸುವ ರಹಸ್ಯೋಪನಿಷತ್ತುಗಳು ಇಂದಿನವರೆಗೂ ಅತಿ ರಹಸ್ಯಗಳಾಗಿಯೇ ಇವೆ. ||೪||

ಸುಂದರವಾದ ಮುಖದಿಂದ ರಾಜಿಸುವ ಪ್ರಿಯೆಯೇ, ಎಲ್ಲ ಉಪನಿಷತ್ತುಗಳ ವಿಷಯಗಳನ್ನು ಉಪಾಸಕರಾದ ಭಕ್ತರು ಸುಲಭೋಪಾಯದಿಂದ ತಿಳಿದು ಶ್ರೇಯೋ ಭಾಜನರಾಗುವುದಕ್ಕೋಸ್ಕರ ಈ ಸಂಹಿತಾರೂಪವಾದ ಗ್ರಂಥದಲ್ಲಿ ಒಂದುಗೂಡಿಸಿ ಇರಿಸಲ್ಪಟ್ಟಿರುತ್ತವೆ. ||೫||

ದೇವತೆಗಳೆಲ್ಲರೂ ಈ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುವ, ಮುಖ್ಯವಾಗಿ ತಿಳಿಯಬೇಕಾದ, ಮಹಾಪಾತಕಗಳನ್ನು ನಾಶಮಾಡುವ ವಿರಾಟ್‌ಧ್ಯಾನವನ್ನು ಆಚರಿಸುತ್ತಾರೆ. ಅಂತಹ ಉಪನಿಷತ್ತುಗಳನ್ನು ನಿನಗೆ ಹೇಳುವೆನು. ||೬||

ಬ್ರಹ್ಮಾಂಡಕ್ಕಿಂತ ಪೃಥಗ್ಭೂತವಾಗಿಯೂ, ಬ್ರಹ್ಮಾಂಡಕ್ಕೆ ಕಾರಣವಾಗಿರು ವುದರಿಂದ ಉತ್ಕೃಷ್ಟವಾಗಿಯೂ ಇರುವ ಮಹತ್ತತ್ತ್ವ, ಅಹಂಕಾರ, ಪಂಚತನ್ಮಾತ್ರ ಗಳೆಂಬ ಸೂಕ್ಷ್ಮರೂಪಗಳು, ಪುರುಷ, ಪ್ರಕೃತಿ ಈ ರೀತಿಯಾದ ಒಂಭತ್ತು ತತ್ತ್ವಗಳ ಸಮಷ್ಟಿಯು ಉಪಾಸ್ಯವಾದುದು. ||೭||

ಮಹಾಪಾತಾಳಪಾದಾಂತ್ಸಲಂಬಾ ತಸ್ಯಾ ಜಯುಂ ಸ್ಮರೇತ್ ।
ಬ್ರಹ್ಮಾಂಡಾರ್ಧಂ ಕಪಾಲಂ ಹಿ ಶಿರಸ್ತಸ್ಯಾ ವಿಭಾವಯೇತ್ ॥೮॥

ದೇವಲೋಕೋ ಲಲಾಟಂ ಚ ಷಟ್ತ್ರಿಂಶಲ್ಲಕ್ಷಯೋಜನಮ್ ।
ಮೇರುಃ ಸೀಮನ್ತದಂಡೋಽಸ್ಯಾ ಗ್ರಹರತ್ನಸಮಾಕುಲಃ ॥೯॥

ಅಂತರ್ವೀಥೀ ನಾಗವೀಥೀ ಭ್ರುವಾವಸ್ಯಾಃ ಪ್ರಕೀರ್ತಿತೇ ।
ಶಿವಲೋಕಶ್ಚ ವೈಕುಂಠಲೋಕಃ ಕರ್ಣಾವುಭೌ ಮತೌ ॥೧೦॥

ಲೋಹಿತಂ ತಿಲಕಂ ಧ್ಯಾಯೇನ್ನಾಸಾ ಮಂದಾಕಿನೀ ತಥಾ ।
ಚಕ್ಷುಷೀ ಚಂದ್ರಸೂರ್ಯೌ ಚ ಪಕ್ಷ್ಮಾಣಿ ಕಿರಣಾಸ್ತಥಾ ॥೧೧॥

ಗಂಡೌ ಸ್ಯಾತಾಂ ತಪೋಲೋಕಸತ್ಯಲೋಕೌ ಯಥಾಕ್ರಮಮ್ ।
ಜನೋಲೋಕಮಹರ್ಲೋಕೌ ಕಪೋಲೌ ಪರಿಕೀರ್ತಿತೌ ॥೧೨॥

ಸ್ಯಾತಾಂ ಹಿಮಾದ್ರಿಕೈಲಾಸೌ ತಸ್ಯಾ ದೇವ್ಯಾಸ್ತು ಕುಂಡಲೇ ।
ಸ್ವರ್ಲೋಕಶ್ಚ ಭುವರ್ಲೋಕೋ ದೇವ್ಯಾ ಓಷ್ಠಾಧರೌ ಮತೌ ॥೧೩॥

ದಿಕ್ಪತೀನಾಂ ಗ್ರಹಾಣಾಂ ಚ ಲೋಕಾಶ್ಚಾಥ ರದಾವಳೀ ।
ಗಂಧರ್ವಸಿದ್ಧಸಾಧ್ಯಾನಾಂ ಪಿತೃಕಿನ್ನರರಕ್ಷಸಾಮ್ ॥೧೪॥

ಪಿಶಾಚಯಕ್ಷಾಪ್ಸರಸಾಂ ಮರೀಚೀಯಾಯಿನಾಂ ತಥಾ ।
ವಿದ್ಯಾಧರಾಣಾಮಾಜ್ಯೋಷ್ಮಪಾಣಾಂ ಸೋಮೈಕಪಾಯಿನಾಮ್ ॥೧೫॥

ಸರ್ವರ್ಷೀಣಾಂ ಧ್ರುವಸ್ಯಾಪಿ ಲೋಕಾ ಊರ್ಧ್ವರದಾವಳೀ ।
ಮುಖಂ ಚ ರೋದಸೀ ಜ್ಞೇಯಂ ದ್ಯೌರ್ಲೋಕಶ್ಚಿಬುಕಂ ತಥಾ ॥೧೬॥

ಮೇಲೆ ಉಪಾಸ್ಯವಾಗಿ ತೋರಿಸಿದ ಪ್ರಕೃತಿ ದೇವತೆಯು ಅಧೋಲೋಕದಿಂದ ಊರ್ಧ್ವಲೋಕದವರೆಗೂ ಸಮಸ್ತಲೋಕಗಳನ್ನೂ ವ್ಯಾಪಿಸಿರುವುದರಿಂದ ಮಹಾ ಪಾತಾಳಲೋಕವೆಂಬ ಪಾದಾಗ್ರದಿಂದ ಅಧೋಭಾಗದ ಎಲ್ಲೆಯನ್ನು ವ್ಯಾಪಿಸಿ ಲಂಬಾಯಮಾನಳಾಗಿ ಇರುವಂತೆ ಆ ದೇವಿಯು ವಿಶ್ವವ್ಯಾಪ್ತಿಯೆಂಬ ಜಯವನ್ನು ಸ್ಮರಿಸಬೇಕು. ಹಾಗೆಯೆ ಬ್ರಹ್ಮಾಂಡದ ಮೇಲುಭಾಗದ ಅರ್ಧಕಪಾಲವನ್ನು ಆ ದೇವಿಯ ತಲೆಯೆಂದು ಭಾವಿಸಬೇಕು. ||೮||

ದೇವಲೋಕವನ್ನು ಮೂವತ್ತಾರುಲಕ್ಷ ಯೋಜನ ವಿಸ್ತಾರವುಳ್ಳ ಹಣೆಯನ್ನಾಗಿಯೂ, ಗ್ರಹಮಂಡಲದಿಂದ ಸುತ್ತಲ್ಪಡುತ್ತಿರುವ ಮೇರುಪರ್ವತವನ್ನು ಅನೇಕ ರತ್ನಾಭರಣಗಳಿಂದ ಶೋಭಿತವಾದ ಸೀಮಂತರೇಖೆಯನ್ನಾಗಿಯೂ ಭಾವಿಸಬೇಕು. ||೯||

ತೇಜೋಮಂಡಲದ ಸಂಚಾರಮಾರ್ಗಗಳಲ್ಲಿ ಸೇರಿದ ಅಂತರ್ವೀಥೀ, ನಾಗವೀಥೀ ಎಂಬ ಎರಡು ವೀಥಿಸ್ಥಾನಗಳನ್ನು ದೇವಿಯ ಹುಬ್ಬುಗಳೆಂದೂ, ಶಿವಲೋಕ, ವೈಕುಂಠಲೋಕಗಳನ್ನು ಎರಡು ಕಿವಿಗಳೆಂದೂ ಭಾವಿಸಬೇಕು. ||೧೦||

ಅಂಗಾರಕ ಗ್ರಹವನ್ನು ಕೆಂಪುಬಣ್ಣದಿಂದ ಶೋಭಿಸುವ ತಿಲಕವನ್ನಾಗಿಯೂ, ಸ್ವರ್ಗಂಗಾನದಿಯನ್ನು ನಾಸಿಕಾಂಗ(ಮೂಗು)ವನ್ನಾಗಿಯೂ, ಚಂದ್ರ, ಸೂರ್ಯರನ್ನು ಕಣ್ಣುಗಳನ್ನಾಗಿಯೂ, ಕಿರಣಗಳನ್ನು ರೆಪ್ಪೆಗಳನ್ನಾಗಿಯೂ ಭಾವಿಸಬೇಕು. ||೧೧||

ತಪೋಲೋಕ, ಸತ್ಯಲೋಕಗಳನ್ನು ಗಂಡಸ್ಥಳಗಳನ್ನಾಗಿಯೂ, ಜನೋಲೋಕ, ಮಹರ್ಲೋಕಗಳನ್ನು ಕೆನ್ನೆಗಳನ್ನಾಗಿಯೂ ಭಾವಿಸಬೇಕೆಂದು ಹೇಳಲ್ಪಟ್ಟಿವೆ. ||೧೨||

ಆ ಉಪಾಸ್ಯದೇವಿಗೆ ಹಿಮಾಲಯ, ಕೈಲಾಸಪರ್ವತಗಳು ಎರಡು ಕುಂಡಲ (ಓಲೆ) ಗಳಾಗಿವೆಯೆಂದೂ, ಸ್ವರ್ಲೋಕ, ಭುವರ್ಲೋಕಗಳು ಎರಡು ತುಟಿಗಳಾಗಿವೆಯೆಂದೂ ಭಾವಿಸಬೇಕು. ||೧೩||

ಇಂದ್ರ ಮೊದಲಾದ ದಿಕ್ಪಾಲಕರ ಲೋಕಗಳೂ, ಗ್ರಹಮಂಡಲದ ಲೋಕಗಳೂ ದೇವಿಯ ಕೆಳಗಡೆಯ ದಂತಪಂಕ್ತಿಯು. ಗಂಧರ್ವ, ಸಿದ್ಧ, ಸಾಧ್ಯ, ಪಿತೃ, ಕಿನ್ನರ, ರಕ್ಷಸ್ಸು, ಪಿಶಾಚ, ಯಕ್ಷ, ಅಪ್ಸರಸ್ಸು, ತೇಜೋಮಯ, ವಿದ್ಯಾಧರ, ಆಜ್ಯಪ, ಊಷ್ಮಪ, ಸೋಮಪ ಇವರೆಲ್ಲರೂ ದೇವಯೋನಿ ವಿಶೇಷರು. ಇವರ ಲೋಕಗಳನ್ನೂ ಸಪ್ತರ್ಷಿಲೋಕವನ್ನೂ ದೇವಿಯ ಮೇಲುಭಾಗದ ದಂತಪಂಕ್ತಿಯೆಂದು ಭಾವಿಸಬೇಕು. ||೧೪, ೧೫||

ದ್ಯಾವಾಪೃಥಿವಿಗಳನ್ನು ಮುಖವನ್ನಾಗಿಯೂ, ದ್ಯುಲೋಕವನ್ನು ಚಿಬುಕವನ್ನಾಗಿಯೂ ಅರಿಯಬೇಕು. ||೧೬||

ಬ್ರಹ್ಮಲೋಕೋ ಗಲಃ ಪ್ರೋಕ್ತೋ ವಾಯವಃ ಪ್ರಾಣರೂಪಿಣಃ ।
ವನಸ್ಪತಯ ಓಷಧ್ಯೋ ಲೋಮಾನಿ ಪರಿಚಕ್ಷತೇ ॥೧೭॥

ವಿದ್ಯುದ್ದೃಷ್ಟಿರಹೋರಾತ್ರಂ ನಿಮೇಷೋನ್ಮೇಷಸಂಜ್ಞಕಮ್ ।
ವಿಶ್ವಂ ತು ಹೃದಯಂ ಪ್ರೋಕ್ತಂ ಪೃಥಿವೀ ಪಾದ ಉಚ್ಯತೇ ॥೧೮॥

ತಲಂ ತಲಾತಲಂ ಚೈವ ಪಾತಾಲಂ ಸುತಲಂ ತಥಾ ।
ರಸಾತಲಂ ನಾಗಲೋಕಾಃ ಪಾದಾಂಗುಲ್ಯಃ ಪ್ರಕೀರ್ತಿತಾಃ ॥೧೯॥

ವೇದಾ ವಾಚಃ ಸ್ಯಂದಮಾನಾ ನದಾ ನದ್ಯೋಽಮಿತಾ ಮತಾಃ ।
ಕಲಾಃ ಕಾಷ್ಠಾ ಮುಹೂರ್ತಾಶ್ಚ ಋತವೋಽಯನಮೇವ ಚ ॥೨೦॥

ಪಕ್ಷಾ ಮಾಸಾಸ್ತಥಾ ಚಾಬ್ದಾಶ್ಚತ್ವಾರೋಽಪಿ ಯುಗಾಃ ಪ್ರಿಯೇ ।
ಕಫೋಣಿರ್ಮಣಿಬಂಧಶ್ಚ ತದೂರುಕಟಿಬಂಧನಾಃ ॥೨೧॥

ಪ್ರಪದಾಶ್ಚ ಸ್ಫಿಚಶ್ಚೈವ ಸರ್ವಾಂಗಾನಿ ಪ್ರಚಕ್ಷತೇ ।
ವೈಶ್ವಾನರಃ ಕಾಲಮೃತ್ಯುರ್ಜಿಹ್ವಾತ್ರಯಮಿದಂ ಸ್ಮೃತಮ್ ॥೨೨॥

ಆಬ್ರಹ್ಮಸ್ತಂಬಪರ್ಯಂತಂ ತನುಮಸ್ಯಾಃ ಪ್ರಚಕ್ಷತೇ ।
ಪ್ರಲಯೋ ಭೋಜನೇ ಕಾಲಸ್ತೃಪ್ತಿಸ್ತೇನ ಚ ನಾಸಿಕಾ ॥೨೩॥

ಜ್ಞೇಯಃ ಪಾರ್ಶ್ವಪರೀವರ್ತೋ ಮಹಾಕಲ್ಪಾಂತರೋದ್ಭವಃ ।
ವಿರಾಡ್ರೂಪಸ್ಯ ತೇ ಧ್ಯಾನಮಿತಿ ಸಂಕ್ಷೇಪತೋಽರ್ಪಿತಮ್ ॥೨೪॥

ತಸ್ಯಾಃ ಸ್ವರೂಪವಿಜ್ಞಾನಂ ಸಪರ್ಯಾ ಪರಿಕೀರ್ತಿತಾ ।
ತದೇವ ಹಿ ಶ್ರುತಿಪ್ರೋಕ್ತಮವಧಾರಯ ಪಾರ್ವತಿ ॥೨೫॥

ಯಥೋರ್ಣನಾಭಿಃ ಸೂತ್ರಾಣಿ ಸೃಜತ್ಯಪಿ ಗಿಲತ್ಯಪಿ ।
ಯಥಾ ಪೃಥಿವ್ಯಾಮೋಷಧ್ಯಃ ಸಂಭವಂತಿ ಗಿಲಂತ್ಯಪಿ ॥೨೬॥

ಬ್ರಹ್ಮಲೋಕವು ದೇವಿಯ ಕಂಠವು. ವಾಯು ಪ್ರಾಣರೂಪವು. ಓಷಧಿ ಮತ್ತು ವನಸ್ಪತಿಗಳು ರೋಮಾವಳಿಯು. ಎಂದು ಉಪಾಸಕರು ಉಪದೇಶಿಸುತ್ತಾರೆ. ||೧೭||

ಮಿಂಚನ್ನು ನೋಟವೆಂದೂ, ಹಗಲು ಮತ್ತು ರಾತ್ರಿಗಳನ್ನು ಕಣ್ಣುರೆಪ್ಪೆಗಳನ್ನು ಹೊಡೆಯುವುದೆಂಬ ನಿಮೇಷ, ಉನ್ಮೇಷ ವ್ಯಾಪಾರವೆಂದೂ, ಜಗತ್ತನ್ನು ಹೃದಯ ವೆಂದೂ, ಪೃಥಿವಿಯನ್ನು ಪಾದವೆಂದೂ ಹೇಳುವರು. ||೧೮||

ಅಧೋಲೋಕಗಳೆಂದು ಪ್ರಸಿದ್ಧಿ ಹೊಂದಿರುವ ತಲ, ತಲಾತಲ, ಪಾತಾಲ, ಸುತಲ, ರಸಾತಲ, ನಾಗಲೋಕ ಮುಂತಾದ ಸಮಸ್ತಲೋಕಗಳೂ ಕಾಲಿನ ಬೆರಳುಗಳೆಂದು ಹೇಳಲ್ಪಟ್ಟಿವೆ. ||೧೯||

ವೇದ, ಇತರವಾಙ್ಮಯ, ಹರಿಯುವ ನದ ನದಿಗಳು, ಕಲಾ, ಕಾಷ್ಠಾ, ಮುಹೂರ್ತ, ಋತು, ಅಯನ, ಪಕ್ಷ, ಮಾಸ, ಅಬ್ದ, ಚತುರ್ಯುಗಗಳೆಂಬ ಸಮಸ್ತಕಾಲ ವಿಭಾಗಗಳು ಇವೆಲ್ಲವೂ ಕೂರ್ಪರ, ಮಣಿಬಂಧ, ಊರು, ನಿತಂಬ, ಪಾದಾಗ್ರ, ಸ್ಫಿಕ್ ಮುಂತಾದ ಇತರ ಸಮಸ್ತಾವಯವಗಳು, ಮತ್ತು ವೈಶ್ವಾನರ, ಕಾಲ, ಮೃತ್ಯುಗಳು ಮೂರು ನಾಲಿಗೆಗಳೆಂದು ಹೇಳಲ್ಪಟ್ಟಿದೆ. ||೨೦, ೨೧, ೨೨||

ಬ್ರಹ್ಮಾದಿ ಸ್ತಂಬವೆಂಬ ಸೂಕ್ಷ್ಮಕ್ರಿಮಿಪರ್ಯಂತವಿರುವ ಸಮಸ್ತ ವಸ್ತುಜಾಲ ವನ್ನೂ ದೇವಿಯ ಶರೀರಾಂಶಗಳೆಂದು ಹೇಳುತ್ತಾರೆ. ಪ್ರಲಯಕಾಲದಲ್ಲಿ ಆಗುವ ವಿಶ್ವಪ್ರಲಯವನ್ನು ದೇವಿಯ ಭೋಜನ ಮತ್ತು ಅದರಿಂದಾಗುವ ತೃಪ್ತಿರೂಪವನ್ನಾಗಿ ಭಾವಿಸಬೇಕು. ಅವುಗಳ ಮಧ್ಯಕಾಲವು ಸ್ಥಿತಿಯು. ||೨೩||

ಪ್ರಲಯಾನಂತರದಲ್ಲಿ ಸಂಭವಿಸುವ ಕಲ್ಪಾಂತರೋತ್ಪತ್ತಿಯು ದೇವಿಯ ಪಾರ್ಶ್ವಪರಿವರ್ತನವು. ಶಕ್ತಿ ದೇವಿಯೇ! ಈ ಬಗೆಯಿಂದ ನಿನ್ನ ವಿರಾಡ್ರೂಪದ ಧ್ಯಾನವು ಸಂಕ್ಷೇಪವಾಗಿ ವರ್ಣಿಸಲ್ಪಟ್ಟಿದೆ. ||೨೪||

ಪಾರ್ವತಿಯೇ! ದೇವಿಯ ಸ್ವರೂಪದ ತತ್ತ್ವಜ್ಞಾನವೇ ಪೂಜೆಯು. ಆದುದ ರಿಂದ ಅವಶ್ಯ ವಿಜ್ಞೇಯವಾದ ದೇವೀ ಸ್ವರೂಪವನ್ನು ಶ್ರುತಿಯಲ್ಲಿ ವಿವರಿಸಿರುವಂತೆ ನಾನು ಮಾಡುವ ವಿವರಣವನ್ನು ಕೇಳು. ||೨೫||

ಜೇಡರಹುಳುವು ಬಲೆಕಟ್ಟುವ ಸಲುವಾಗಿ ಸೂಕ್ಷ್ಮವಾದ ತಂತುಗಳನ್ನು ಸೃಷ್ಟಿ ಸುತ್ತಲೂ, ಕೆಲವು ಸಮಯದಲ್ಲಿ ಅವುಗಳನ್ನು ನುಂಗಿ ಉಪಸಂಹಾರ ಮಾಡುತ್ತಲೂ ಇರುವುದು. ಆಗ ತಂತುಗಳು ಹುಳುವಿನಿಂದಲೇ ಹುಟ್ಟಿ ಅಲ್ಲೇ ಲಯವನ್ನು ಹೊಂದುತ್ತವೆ. ವಿವಿಧ ಔಷಧಿಗಳು ಭೂಮಿಯಿಂದಲೇ ಹುಟ್ಟಿ ಬೆಳೆದು ಅಲ್ಲೇ ಲಯವನ್ನು ಹೊಂದುತ್ತವೆ. ||೨೬||

ಪುರುಷಾತ್ಕೇಶಲೋಮಾನಿ ಜಾಯಂತೇ ಚ ಕ್ಷರಂತ್ಯಪಿ ।
ಉತ್ಪದ್ಯಂತೇ ವಿಲೀಯಂತೇ ತಥಾ ತಸ್ಯಾಂ ಜಗತ್ಯಪಿ ॥೨೭॥

ಜ್ವಲತಃ ಪಾವಕಾದ್ಯದ್ವತ್ ಸ್ಫುಲಿಂಗಾಃ ಕೋಟಿಕೋಟಿಶಃ ।
ನಿರ್ಗತ್ಯ ಚ ವಿಸತ್ಯಂತಿ ವಿಶ್ವಂ ತಸ್ಯಾಸ್ತಥಾ ಪ್ರಿಯೇ ॥೨೮॥

ಋಚೋ ಯಜೂಂಷಿ ಸಾಮಾನಿ ದೀಕ್ಷಾ ಯಜ್ಞಾಃ ಸದಕ್ಷಿಣಾಃ ।
ಅಧ್ವರ್ಯುರ್ಯಜಮಾನಶ್ಚ ಭುವನಾನಿ ಚತುರ್ದಶ ॥೨೯॥

ಬ್ರಹ್ಮವಿಷ್ಣ್ವಾದಿಕಾ ದೇವಾ ಮನುಷ್ಯಾಃ ಪಶವೋ ಯತಃ ।
ಪ್ರಾಣಾಪಾನೌ ವ್ರೀಹಯಶ್ಚ ಸತ್ಯಂ ಶ್ರದ್ಧಾ ವಿಧಿಸ್ತಪಃ ॥೩೦॥

ಸಮುದ್ರಾ ಗಿರಯೋ ನದ್ಯಃ ಸರ್ವೇ ಸ್ಥಾವರಜಂಗಮಾಃ ।
ವಿಸೃಜ್ಯೇಮಾನಿ ಸರ್ಗಾದೌ ತ್ವಂ ಪ್ರಕಾಶಯಸೇ ತತಃ ॥೩೧॥

ಜಂಗಮಾನಿ ವಿಧಾಯಾಂಥೇ ವಿಶತ್ಯಪ್ರತಿಭೂತಕಮ್ ।
ನವದ್ವಾರಂ ಪುರಂ ಕೃತ್ವಾ ಗವಾಕ್ಷಾಣೀಂದ್ರಿಯಾಣ್ಯಪಿ ॥೩೨॥

ಸಾ ಪಶ್ಯತ್ಯತ್ತಿ ವಹತಿ ಸ್ಪೃಶತಿ ಕ್ರೀಡತೀಚ್ಛತಿ ।
ಶೃಣೋತಿ ಜಿಘ್ರತಿ ತಥಾ ರಮತೇ ವಿರಮತ್ಯಪಿ ॥೩೩॥

ತಯಾ ಮುಕ್ತಂ ಪುರಂ ತದ್ಧಿ ಮೃತಮಿತ್ಯಭಿಧೀಯತೇ ॥೩೪॥

ಯೇ ತಪಃಕ್ಷೀಣದೋಷಾಸ್ತೇ ನೈವ ಪಶ್ಯಂತಿ ಭಾವಿತಾಮ್ ।
ಜ್ಯೋತಿರ್ಮಯೀಂ ಶರೀರೇಂತರ್ಧ್ಯಾಯಮಾನಾಂ ಮಹಾತ್ಮಭಿಃ ॥೩೫॥

ಪುರುಷನ ಶರೀರದಿಂದ ಹುಟ್ಟಿ ಬೆಳೆಯುವ ಕೇಶಲೋಮಗಳು ಅಲ್ಲಿಯೇ ಲಯವನ್ನು ಹೊಂದುತ್ತವೆ. ಈ ವಿಧವಾದ ಅನೇಕ ನಿದರ್ಶನಗಳಿರುವಂತೆ ಉತ್ಪತ್ತಿ ನಾಶಗಳನ್ನು ಹೊಂದುವ ಎಲ್ಲ ಜಗತ್ತು ದೇವಿಯಿಂದಲೇ ಹುಟ್ಟಿ ಅಲ್ಲೇ ಲಯವನ್ನೂ ಹೊಂದುತ್ತವೆ. ಇತರ ಕಾರಣಸಾಮಗ್ರಿಯನ್ನು ಅಪೇಕ್ಷಿಸದೇ ಸ್ವತಂತ್ರಳಾಗಿ ದೇವಿಯು ಜಗತ್ತಿನ ಜನ್ಮ, ಸ್ಥಿತಿ, ಲಯಗಳನ್ನು ನಿರ್ವಹಿಸುವಳು. ||೨೭||

ಜ್ವಾಲಾಕಾರವಾಗಿ ಉರಿಯುತ್ತಿರುವ ಅಗ್ನಿಯಿಂದ ಸುತ್ತಲೂ ಅಸಂಖ್ಯಾತ ಗಳಾದ ಅಗ್ನಿಕಣ (ಬೆಂಕಿ ಕಿಡಿ) ಗಳು ಹೊರಟು ಸ್ವಲ್ಪಕಾಲದಲ್ಲಿಯೇ ಕಾಣದಂತೆ ನಶಿಸಿಹೋಗುವುವು. ಹಾಗೆಯೇ ಪ್ರಪಂಚವು ದೇವಿಯಿಂದ ಉತ್ಪತ್ತಿಯಾಗಿ ಬಂದಂತೆ ಕಾಣುವುದು. ಅಗ್ನಿಕಣದಂತೆ ಕಾಣದಹಾಗೆ ನಶಿಸಿ ಮಾಯವೂ ಆಗುವುದು. ||೨೮||

ಋಕ್, ಯಜುಸ್ಸು, ಸಾಮವೇದಗಳು, ಯಜ್ಞ ಮತ್ತು ಯಜ್ಞಾಂಗದೀಕ್ಷಾ ದಕ್ಷಿಣೆಗಳು. ಅಧ್ವರ್ಯು ಮುಂತಾದ ಋತ್ವಿಜರು, ಯಜಮಾನ, ಹದಿನಾಲ್ಕು ಭುವನಗಳು, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು, ಮನುಷ್ಯ, ಪಶು, ಪ್ರಾಣ, ಅಪಾನಗಳು, ವ್ರೀಹಿ ಮುಂತಾದ ಸಸ್ಯಗಳು, ಸತ್ಯ, ಶ್ರದ್ಧಾ, ವಿಧಿ, ತಪಸ್ಸು ಮುಂತಾದ ನಿಯಮಗಳು, ಸಮುದ್ರ, ಪರ್ವತ, ನದೀ ಇತರ ಸ್ಥಾವರಜಂಗಮವೆಂಬ ಪ್ರಾಣಿವರ್ಗ ಈ ಎಲ್ಲ ಪದಾರ್ಥಗಳನ್ನೂ ಸೃಷ್ಟಿಯ ಪ್ರಾರಂಭ ಸಮಯದಲ್ಲಿ ಸೃಷ್ಟಿ ಮಾಡಿ ನಿನ್ನ ಚೈತನ್ಯದಿಂದಲೇ ಪ್ರಕಾಶಿಸುವಂತೆ ಮಾಡಿರುವೆ. ||೨೯, ೩೦, ೩೧||

ಹೀಗೆ ಸೃಜಿಸಿ ಪ್ರಕಾಶಪಡಿಸಿದ ಜಂಗಮಪ್ರಾಣಿ ಶರೀರಗಳನ್ನು ದೇವಿಯು ಅಪ್ರತಿಹತವಾಗಿ ಪ್ರತಿಬಿಂಬರೂಪದಿಂದ ಪ್ರವೇಶಿಸುವಳು. ಅನಂತರದಲ್ಲಿ ತಾನು ಪ್ರವೇಶಮಾಡಿದ ನವದ್ವಾರಗಳಿಂದ ಕೂಡಿದ ಶರೀರವನ್ನು ಪುರವನ್ನಾಗಿ ರಚಿಸಿ ನಗರಾಧ್ಯಕ್ಷನು ನಗರದೊಳಗೆ ಪ್ರವೇಶಿಸಿ ಅಲ್ಲಿನ ಭೋಗಸಾಮಗ್ರಿಗಳನ್ನು ಸಾಕ್ಷಾತ್ಕರಿಸಿ ಭೋಗವನ್ನು ಅನುಭವಿಸುವಂತೆ ಅಲ್ಲಿರುವ ಸಕಲೇಂದ್ರಿಯಗಳನ್ನೂ ತನ್ನ ಭೋಗಸಾಮಗ್ರಿಯನ್ನಾಗಿ ಉಪಯೋಗಿಸುತ್ತಾ ಕಾಣುವುದು, ತಿನ್ನುವುದು, ಮುಟ್ಟುವುದು, ಆಡುವುದು, ಆಶಿಸುವುದು, ಶ್ರವಣಮಾಡುವುದು, ಮೂಸುವುದು, ರತಿಸುಖವನ್ನು ಅನುಭವಿಸುವುದು, ವಿಶ್ರಾಂತಿಯಾಗಿರುವುದು ಮುಂತಾದ ಸ್ವಾಮ್ಯರ್ಥವಾದ ವಿವಿಧ ಭೋಗಗಳನ್ನು ಸ್ವಾಮಿಯಾಗಿ ತಾನು ಅನುಭವಿಸುವಳು. ಆ ಪ್ರತಿಬಿಂಬಾತ್ಮ ಸ್ವರೂಪದಿಂದ ತ್ಯಜಿಸಲ್ಪಟ್ಟ ಪುರವನ್ನು ಮೃತವೆಂದು ಕರೆಯುತ್ತಾರೆ. ||೩೨, ೩೩, ೩೪||

ವಿವಿಧ ಕಾಯಕ್ಲೇಶಗಳನ್ನು ಸಹಿಸಿ ತಪವನ್ನಾಚರಿಸಿ ಯಾರು ತಮ್ಮ ಪ್ರತಿ ಬಂಧಕ ದುರಿತಗಳನ್ನು ನಿವೃತ್ತಿಮಾಡಿಕೊಳ್ಳಲಾರರೋ ಅಂತಹ ಮಾನವರು ಮಹಾತ್ಮರಿಂದ ಚಿತ್ತಗುಹೆಯಲ್ಲಿ ಧ್ಯಾನಿಸಲ್ಪಡುತ್ತಿರುವ ಜ್ಯೋತಿರ್ಮಯಳೂ, ಆದ ದೇವಿಯನ್ನು ತಮ್ಮ ಶರೀರದಲ್ಲಿ ಸಾಕ್ಷಾತ್ಕರಿಸಲು ಶಕ್ತರಾಗುವುದಿಲ್ಲ. ||೩೫||

ಬೃಹಚ್ಚ ತದ್ದಿವ್ಯಮಚಿಂತ್ಯರೂಪಂ
ಸೂಕ್ಷ್ಮಾಚ್ಚ ತತ್ ಸೂಕ್ಷ್ಮತರಂ ವಿಭಾತಿ ।
ದೂರಾತ್ ಸುದೂರೇ ತದಿಹಾಸ್ತಿ ಕಿಂಚಿತ್
ಪಶ್ಯೇತ್ತ್ವಿಹೈತನ್ನಿಹಿತಂ ಗುಹಾಯಾಮ್ ॥೩೬॥

ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ
ನಾನ್ಯೈರ್ಯೋಗೈರ್ನ ಹಿ ಸಾ ಕರ್ಮಣಾ ವಾ ।
ಜ್ಞಾನಪ್ರಸಾದೇನ ವಿಶುದ್ಧಸತ್ತ್ವ-
ಸ್ತತಸ್ತು ತಾಂ ಪಶ್ಯತಿ ನಿಷ್ಕಲಾಂ ಚ ॥೩೭॥

ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ
ಗಚ್ಛಂತ್ಯಸ್ತಂ ನಾಮರೂಪೇ ವಿಹಾಯ ।
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ
ಪರಾತ್ಪರಾಂ ಜಗದಂಬಾಮುಪೈತಿ ॥೩೮॥

ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದನ್ತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಬ್ರವೀಮಿ ಸೈವೈತತ್ ॥೩೯॥

ಏಷೈವಾಲಂಬನಂ ಶ್ರೇಷ್ಠಂ ಸೈಷೈವಾಲಂಬನಂ ಪರಮ್ ।
ಏಷೈವಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥೪೦॥

ಆ ದೇವೀ ಸ್ವರೂಪವು ಪರಿಚ್ಛೇದತ್ರಯಶೂನ್ಯವೂ, ಸರ್ವೋಪಾಧಿ ವರ್ಜಿತವೂ ಆಗಿರುವುದರಿಂದ ಅತಿ ಬೃಹತ್ಪರಿಮಾಣವುಳ್ಳದ್ದೂ, ದಿವ್ಯವೂ, ಮನೋವ್ಯಾಪಾರ ದಿಂದ ಚಿಂತಿಸಲು ಅಶಕ್ಯವೂ ಆಷ್ಟರೀದ ಅತಿಸೂಕ್ಷ್ಮವೆಂದರಿತ ವಸ್ತುಗಳಿಗಿಂತ ಹೆಚ್ಚಾಗಿ ಸೂಕ್ಷ್ಮವೂ ಆಗಿದೆ. ಆ ತತ್ತ್ವವು ಪಾಮರರಿಗೆ ನೂರಾರು ಜನ್ಮಗಳನ್ನು ಕಳೆದರೂ ಗೋಚರವಾಗದಿರುವುದರಿಂದ ಬಹುದೂರದಲ್ಲಿರುವುದಾಗಿದೆ. ವಿವೇಕಿಯು ಸಾಧನಾನುಷ್ಠಾನಬಲದಿಂದ ಶರೀರದೊಳಗಿನ ಹೃದಯಾಕಾಶದಲ್ಲಿಯೇ ಸಾಕ್ಷಾತ್ಕರಿಸು ವುದರಿಂದ ಅತಿ ಸನ್ನಿಹಿತವೂ ಆಗಿರುವುದು. ||೩೬||

ಆ ತತ್ತ್ವವು ರೂಪಾದಿರಹಿತವಾದ್ದರಿಂದ ಚಕ್ಷುರಾದಿ ಬಾಹ್ಯೇಂದ್ರಿಯ ಗೋಚರ ವಾಗುವುದಿಲ್ಲ. ಜಾತಿ ಮುಂತಾದ ಉಪಾಧಿಧರ್ಮಗಳಿಲ್ಲದಿರುವುದರಿಂದ ವಾಗಿಂದ್ರಿಯ ಗ್ರಾಹ್ಯವಾಗುವುದಿಲ್ಲ. ಯೋಗಶಾಸ್ತ್ರಗಳಲ್ಲಿ ಹೇಳಿದ ಇತರ ಅನೇಕ ವಿಧ ಯೋಗ ಮಾರ್ಗಗಳಿಂದಾಗಲಿ ಕರ್ಮಾನುಷ್ಠಾನ ಮಾರ್ಗದಿಂದಾಗಲಿ ಲಭ್ಯವಲ್ಲ. ಜ್ಞಾನ ಸಾಧನಗಳನ್ನು ಆಚರಿಸಿ ಬಂದ ಪ್ರಸನ್ನ ಜ್ಞಾನದಿಂದ ಚಿತ್ತಶುದ್ಧಿಯನ್ನು ಹೊಂದಿರುವ ಧೀರ ಮಾನವನು ಆ ಕಲಾತೀತ ಶುದ್ಧ ದೇವೀ ಸ್ವರೂಪವನ್ನು ಕಾಣುವನು. ಶುದ್ಧ ಚಿತ್ತವನ್ನು ಹೊರತು ದೇವೀತತ್ತ್ವಸಾಕ್ಷಾತ್ಕಾರಕ್ಕೆ ಇತರ ಉಪಕರಣಗಳಿಲ್ಲ. ||೩೭||

ಉತ್ಪತ್ತಿಸ್ಥಾನದಿಂದ ಸಮುದ್ರದವರೆಗೆ ಹರಿಯುವ ಗಂಗಾ, ಯಮುನಾ ಮುಂತಾದ ಮಹಾನದಿಗಳು ತಮ್ಮ ಮೇಲ್ಕಂಡ ಹೆಸರು ದೀರ್ಘಪ್ರವಾಹಾ ಕಾರಗಳನ್ನು ಬಿಟ್ಟು ಸಮುದ್ರದಲ್ಲಿ ಐಕ್ಯ ಹೊಂದುವಂತೆ ತತ್ತ್ವಜ್ಞಾನಿಯು ನಾಮ ರೂಪಾದಿ ನಿಖಿಲ ಪ್ರಪಂಚಾಭಿಮಾನವನ್ನು ಬಿಟ್ಟು ಶ್ರೇಷ್ಠಕ್ಕೂ ಶ್ರೇಷ್ಠವೆನಿಸಿದ ಜಗದಂಬಾ ತತ್ತ್ವದಲ್ಲಿ ಐಕ್ಯವನ್ನು ಹೊಂದುವನು. ||೩೮||

ಸಮಸ್ತ ವೇದಗಳೂ ಯಾವತತ್ತ್ವದ ಪಾದಕಮಲವನ್ನು ಆದರದಿಂದ ಪುನಃ ಪುನಃ ಪಠಿಸುತ್ತಿವೆಯೋ, ಕಾಯಕ್ಲೇಶಸಾಧ್ಯಗಳಾದ ವಿವಿಧ ತಪಸ್ಸುಗಳು ಯಾವ ತತ್ತ್ವ ಸಾಕ್ಷಾತ್ಕಾರ ಸಾಧನಗಳಾಗಿ ಫಲ ರಸಾಯನವನ್ನು ಸಾಧಿಸುತ್ತಿವೆಯೋ, ಯಾವ ತತ್ತ್ವಸಾಕ್ಷಾತ್ಕಾರಾರ್ಥಿಗಳಾಗಿ ಯಮಿಗಳು ಬ್ರಹ್ಮಚರ್ಯವನ್ನು ಆಚರಿಸು ವರೋ ಅಂತಹ ತತ್ತ್ವಕ್ಕೆ ಬೋಧಕವಾದ ಮತ್ತು ಉಪಾಸನೆಗೆ ಪ್ರತೀಕದಂತಿರುವ ಪದವನ್ನು ಸಂಗ್ರಹವಾಗಿ ಹೇಳುವೆನು. "ಸಾ" ಎಂಬುದೇ ಆ ಪದವು. ||೩೯||

ಸಾ ಎಂಬ ಆಲಂಬನವು ಶ್ರೇಷ್ಠವಾದ ಪರಬ್ರಹ್ಮಪ್ರಾಪ್ತ್ಯವಲಂಬನವು. ಈ ಆಲಂಬನವು ಪರ-ಅಪರ ಬ್ರಹ್ಮಪ್ರಾಪ್ತಿಗೆ ಸಾಧನವಾದುದು, ಈ ಮುಖ್ಯವಾದ ಆಲಂಬನವನ್ನು ತಿಳಿದವನು ಅದರ ಮಹಿಮೆಯಿಂದ ಬ್ರಹ್ಮಲೋಕದಲ್ಲಿ ಬ್ರಹ್ಮನಂತೆ ಉಪಾಸ್ಯನಾಗುವನು. ||೪೦||

ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಹ್ಯರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ॥೪೧॥

ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।
ಪುರುಷಾತ್ತು ಪರಾ ದೇವೀ ಸಾ ಕಾಷ್ಠಾ ಸಾ ಪರಾ ಗತಿಃ ॥೪೨॥

ಯಥೋದಕಂ ಗಿರೌ ಸೃಷ್ಟಂ ಸಮುದ್ರೇಷು ವಿಧಾವತಿ ।
ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನುವಿಧಾವತಿ ॥೪೩॥

ಏಕಾ ಗುಹ್ಯಾ ಸರ್ವಭೂತಾಂತರಾತ್ಮಾ
ಏಕಂ ರೂಪಂ ಬಹುಧಾ ಯಾ ಕರೋತಿ ।
ತಾಮಾತ್ಮಸ್ಥಾಂ ಯೇಽನುಪಶ್ಯಂತಿ ಧೀರಾಃ
ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥೪೪॥

ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಾಮೇವ ಭಾಂತೀಮನುಭಾತಿ ಸರ್ವಂ
ತಸ್ಯಾ ಭಾಸಾ ಸರ್ವಮಿದಂ ವಿಭಾತಿ ॥೪೫॥

ಸ್ಥೂಲವಾದ ಇಂದ್ರಿಯ ಮೊದಲುಗೊಂಡು ತಾರತಮ್ಯದಿಂದ ಇರುವ ಸೂಕ್ಷ್ಮ ಸೂಕ್ಷ್ಮತರಾದಿ ವಸ್ತುಕ್ರಮದಿಂದ ಅತ್ಯಂತ ಸೂಕ್ಷ್ಮ ತತ್ತ್ವವನ್ನು ಉಪಾಯವಾಗಿ ಮಂತ್ರಗಳು ತಿಳಿಸುತ್ತವೆ. ಇಂದ್ರಿಯಗಳು ಅತಿ ಸ್ಥೂಲವಾದ ತತ್ತ್ವಗಳು. ಯಾವ ವಿಷಯಗಳು ತಾವು ಜ್ಞೇಯವಾಗಿ ಪ್ರಕಾಶವಾಗುವುದಕ್ಕೋಸ್ಕರ ಇಂದ್ರಿಯಗಳನ್ನು ಏರ್ಪಡಿಸಿಕೊಂಡಿವೆಯೋ ಅಂತಹ ವಿಷಯಗಳೆಂಬ ಇಂದ್ರಿಯಾರ್ಥಗಳು ಸ್ವಕಾರ್ಯವಾದ ಇಂದ್ರಿಯಗಳಿಗಿಂತ ಸೂಕ್ಷ್ಮ, ವ್ಯಾಪಕ ಮತ್ತು ಆತ್ಮಭೂತವಾದವುಗಳು. ಈ ಅರ್ಥಗಳಿಗಿಂತ ಮನಸ್ಸಿಗೆ ಕಾರಣವಾದ ಸೂಕ್ಷ್ಮಭೂತವೂ, ಅದಕ್ಕಿಂತ ಅಧ್ಯವಸಾಯವೆಂಬ ವೃತ್ತಿಯುಳ್ಳ ಮನಸ್ತತ್ತ್ವಕ್ಕೆ ಕಾರಣವಾದ ಸೂಕ್ಷ್ಮಭೂತವೂ, ಬುದ್ಧಿಗಿಂತಲೂ ಸಮಷ್ಟಿಸೂಕ್ಷ್ಮಶರೀರಾಭಿಮಾನಿಯಾದ ಹಿರಣ್ಯಗರ್ಭನೆಂಬ ಮಹದಾತ್ಮತತ್ತ್ವವೂ, ಮಹತ್ತತ್ತ್ವಕ್ಕಿಂತ ಅವ್ಯಾಕೃತನಾಮರೂಪಾಂಶ ಸಂಮಿಲಿತವಾದ ಅವ್ಯಕ್ತವೆಂಬ ತತ್ತ್ವವೂ, ಅವ್ಯಕ್ತ ತತ್ತ್ವಕ್ಕಿಂತ ಪುರುಷತತ್ತ್ವವೂ, ಉತ್ತರೋತ್ತರ ಅಧಿಕವಾದ ಸೂಕ್ಷ್ಮತ್ವ, ವ್ಯಾಪಕತ್ವ, ಪ್ರತ್ಯಗಾತ್ಮತ್ತ್ವ ಧರ್ಮಗಳನ್ನು ಹೊಂದಿರುವುವು. ಕಡೆಯದಾದ ಪುರುಷತತ್ತ್ವಕ್ಕಿಂತ ಮೇಲಾದವಳು ದೇವಿಯು. ಈ ದೇವಿಗೆ ಅತಿಶಯಿತವಾದ ಮತ್ತೊಂದು ವಸ್ತುವು ಇಲ್ಲ. ಇದೇ ಎಲ್ಲೆ. ಇದೇ ಪ್ರಾಪ್ಯವಾದ ಪರಮಪದವು. ||೪೧, ೪೨||

ಬೆಟ್ಟದಲ್ಲಿ ಬಿದ್ದ ಮಳೆಯನೀರು ದಿಕ್ಕು ವಿದಿಕ್ಕುಗಳಲ್ಲಿ ಸರ್ವತೋಮುಖವಾಗಿ ಪ್ರವಹಿಸಿ ಕಡೆಗೆ ಸಮುದ್ರವೆಂಬ ಒಂದೇ ಪರಾಯಣವನ್ನು ಮುಟ್ಟುವಂತೆ ಆ ದೇವೀ ಶಕ್ತಿ ಸಂಭೂತಗಳಾದ ಬೇರೆ ಬೇರೆ ಜಗತ್ತತ್ತ್ವಗಳನ್ನು ಅವಲಂಬಿಸಿದವನೂ ಮೂಲ ತತ್ತ್ವವಾದ ದೇವೀ ಸನ್ನಿಧಿಯನ್ನೇ ಸೇರಿ ವಿಶ್ರಮಿಸುತ್ತಾನೆ. ||೪೩||

ಅದ್ವಿತೀಯಳಾದ ಆ ದೇವಿಯು ಗುಪ್ತಳಾಗಿ ಸರ್ವಭೂತಗಳ ಅಂತರ್ಯಾಮಿಯಾಗಿರುವಳು. ಮತ್ತು ತನ್ನ ಅವ್ಯಾಕೃತವೆಂಬ ಒಂದೇ ಬೀಜರೂಪವನ್ನು ಬಹುರೂಪವಾಗಿ ವಿಸ್ತರಿಸುವಳು. ಇಂತಹ ದೇವಿಯನ್ನು ಯಾವ ತತ್ತ್ವಜ್ಞಾನವಂತರಾದ ಧೀರರು ಪ್ರತ್ಯಗಾತ್ಮಾಭಿನ್ನರೂಪದಿಂದ ಸಾಕ್ಷಾತ್ಕರಿಸುವರೋ ಅಂತಹವರಿಗೆ ಶಾಶ್ವತ ಸುಖವೆಂಬ ಶ್ರೇಯಃಪ್ರಾಪ್ತಿಯು. ಇತರ ಅಜ್ಞಾನಿ ಜಂತುಗಳಿಗೆ ಎಂದಿಗೂ ಶಾಶ್ವತ ಸುಖಪ್ರಾಪ್ತಿಯು ದೊರಕಲಾರದು. ||೪೪||

ಸಚ್ಚಿದಾನಂದ ಸ್ವರೂಪವಾದ ದೇವಿಯ ಜ್ಯೋತಿರ್ಮಯ ತತ್ತ್ವವನ್ನು ಸೂರ್ಯ, ಚಂದ್ರ, ನಕ್ಷತ್ರ, ಮಿಂಚು ಅಥವಾ ಅಗ್ನಿ ಇವುಗಳಲ್ಲಿ ಯಾವುದೊಂದು ತೇಜಸ್ಸೂ ಪ್ರಕಾಶಪಡಿಸಲಾರದು. ಈ ತೇಜಸ್ಸುಗಳಿಗೆ ಪ್ರಕಾಶಕತ್ವಶಕ್ತಿಯು ದೇವೀ ತತ್ತ್ವದಿಂದ ಬಂದಿರುವುದರಿಂದ ತಮಗೆ ಆತ್ಮಭೂತವಾದ ತತ್ತ್ವದ ಗುರಿಯಲ್ಲಿ ತಾವು ವ್ಯಾಪಾರ ಮಾಡಲಾರವು. ಸಕಲ ಪ್ರಪಂಚವೂ ಸದಾ ಪ್ರಕಾಶಮಾನಳಾದ ದೇವಿಯನ್ನು ಅವಲಂಬಿಸಿ ದೇವೀ ಪ್ರಕಾಶದಿಂದಲೇ ಪ್ರಕಾಶಶೀಲವಾಗಿದೆ. ದೇವಿಯ ತೇಜೋಂಶದಿಂದಲೇ ಇತರ ಜಡವಸ್ತುವೆಲ್ಲವೂ ಪ್ರಕಾಶಿಸುತ್ತಿದೆ. ||೪೫||

ಯಸ್ಯಾಃ ಪರಂ ನಾಪರಮಸ್ತಿ ಕಿಂಚಿತ್
ಯಸ್ಯಾ ನಾಣೀಯೋ ನ ಜ್ಯಾಯೋಽಸ್ತಿ ಕಿಂಚಿತ್ ।
ವೃಕ್ಷ ಇವ ಸ್ತಬ್ಧಾ ದಿವಿ ತಿಷ್ಠತ್ಯೇಕಾ
ಯದಂತಃ ಪೂರ್ಣಾಮವಗತ್ಯ ಪೂರ್ಣಾಃ ॥೪೬॥

ಸರ್ವಾನನಶಿರೋಗ್ರೀವಾ ಸರ್ವಭೂತಗುಹಾಶಯಾ ।
ಸರ್ವತ್ರಸ್ಥಾ ಭಗವತೀ ತಸ್ಮಾತ್ ಸರ್ವಗತಾ ಶಿವಾ ॥೪೭॥

ಸರ್ವತಃ ಪಾಣಿಪಾದಾಂತಾ ಸರ್ವತೋಽಕ್ಷಿ ಶಿರೋಮುಖಾ ।
ಸರ್ವತಃ ಶ್ರುತಿಮತ್ಯೇಷಾ ಸರ್ವಮಾವೃತ್ಯ ತಿಷ್ಠತಿ ॥೪೮॥

ಸರ್ವೇಂದ್ರಿಯಗುಣಾಭಾಸಾ ಸರ್ವೇಂದ್ರಿಯವಿವರ್ಜಿತಾ ।
ಸರ್ವೇಷಾಂ ಪ್ರಭುರೀಶಾನೀ ಸರ್ವೇಷಾಂ ಶರಣಂ ಸುಹೃತ್ ॥೪೯॥

ನವದ್ವಾರೇ ಪುರೇ ದೇವೀ ಹಂಸೀ ಲೀಲಾಯತಾಂ ಬಹಿಃ ।
ಧ್ಯೇಯಾ ಸರ್ವಸ್ಯ ಲೋಕಸ್ಯ ಸ್ಥಾವರಸ್ಯ ಚರಸ್ಯ ಚ ॥೫೦॥

ವಿಶ್ವಾಕಾರವೆಲ್ಲವೂ ದೇವೀ ತತ್ತ್ವಕ್ಕೆ ಅವ್ಯತಿರಿಕ್ತವಾದುದರಿಂದ ದೇವಿಗಿಂತ ಪೃಥಗ್ಭೂತವಾದ ಶ್ರೇಷ್ಠವಸ್ತುವಾಗಲಿ ಹೀನವಸ್ತುವಾಗಲಿ ಇಲ್ಲ. ಹಾಗೆಯೇ ದೇವಿಗಿಂತ ಚಿಕ್ಕ ಪರಿಮಾಣವುಳ್ಳದ್ದಾಗಲಿ ದೊಡ್ಡ ಪರಿಮಾಣವುಳ್ಳದ್ದಾಗಲಿ ಬೇರೆ ತತ್ತ್ವವಿಲ್ಲ. ದ್ಯೋತನ ಸ್ವರೂಪವಾದ ಪರಮ ಸ್ವಮಹಿಮಸ್ಥಾನದಲ್ಲಿ ಪತ್ರ ಶಾಖಾದಿ ಸಕಲಸ್ವಾಂಶಗಳಿಗೂ ಆಧಾರಭೂತವಾಗಿ ವೃಕ್ಷವಿರುವಂತೆ ಸತ್ತಾಸ್ಫೂರ್ತಿ ಗಳಿಂದ ಎಲ್ಲಕ್ಕೂ ಅವಲಂಬನರೂಪಳಾಗಿ ದೇವಿಯು ವಾಸಮಾಡುವಳು. ಈ ದೇವಿಯನ್ನು ತನ್ನ ಅಂತಃಕರಣದಲ್ಲಿ ಪೂರ್ಣರೂಪದಿಂದ ಸಾಕ್ಷಾತ್ಕರಿಸಿದ ಉಪಾಸಕನು ಪೂರ್ಣರೂಪನಾಗುವನು. ||೪೬||

ಭಗವತಿಯಾದ ದೇವಿಯು ಸರ್ವಭೂತಾತ್ಮಕಳಾಗಿ ಆ ಅಂಶಗಳಿಂದ ಸಮಸ್ತ ದೇಶ ಕಾಲಗಳನ್ನು ವ್ಯಾಪಿಸಿರುವುದರಿಂದ ಆಯಾಯ ಭೂತಗಳ ಮುಖ, ಶಿರಸ್ಸು, ಕತ್ತುಗಳೇ ತನ್ನ ಮುಖಾದ್ಯವಯವಗಳಾಗಿರುವುದರಿಂದ ಸರ್ವಸ್ಥಳಗಳಲ್ಲಿಯೂ ಆನನ, ಶಿರಸ್ಸು, ಕತ್ತು ಈ ಅವಯವಗಳುಳ್ಳವಳೂ, ಸರ್ವಪ್ರಾಣಿಗಳ ಹೃದಯಾಕಾಶದಲ್ಲಿ ಚೇತನ ರೂಪದಿಂದ ಅಭಿವ್ಯಕ್ತಿ ಹೊಂದಿದವಳೂ, ಸಾಧಾರಣ ರೂಪದಿಂದ ಎಲ್ಲೆಡೆಯಲ್ಲಿಯೂ ವಾಸಿಸುವವಳೂ ಆಗಿರುವಳು. ಆದ್ದರಿಂದ ಸರ್ವವ್ಯಾಪಕಳೆಂದು ಒಂದೇ ಮಾತಿನಿಂದ ದೇವಿಯನ್ನು ವರ್ಣಿಸಬಹುದು. ||೪೭||

ಹಿಂದೆ ತೋರಿಸಿದ ನ್ಯಾಯದಂತೆ ದೇವಿಯು ಎಲ್ಲೆಡೆಗಳಲ್ಲಿಯೂ ಕೈಗಳನ್ನೂ, ಪಾದಾಗ್ರಗಳನ್ನೂ, ಕಣ್ಣುಗಳನ್ನೂ, ಶಿರಸ್ಸುಗಳನ್ನೂ, ಮುಖಗಳನ್ನೂ, ಕಿವಿಗಳನ್ನೂ ಹೊಂದಿಕೊಂಡು ಸಮಸ್ತವನ್ನೂ ಆವರಿಸಿಕೊಂಡು ಇರುತ್ತಾಳೆ. ||೪೮||

ದೇವಿಯು ಸ್ವಸ್ವರೂಪದಿಂದ ಅಸಂಸರ್ಗಿಯಾದ್ದರಿಂದ ಆಯಾಯ ಇಂದ್ರಿಯಗಳೆಂಬ ಉಪಾಧಿ ಸಂಪರ್ಕದಿಂದ ದ್ರಷ್ಟೃ, ಶ್ರೋತೃ ಧರ್ಮಗಳನ್ನು ಹೊಂದಿದರೂ ಅವೆಲ್ಲವೂ ಔಪಾಧಿಕಗಳಾಗಿ ಆಭಾಸರೂಪವಾದ್ದರಿಂದ ಸರ್ವೇಂದ್ರಿಯಗಳ ಆಭಾಸ ಗುಣಗಳಿಂದ ಕೂಡಿದವಳೂ, ಸರ್ವ ಇಂದ್ರಿಯ ಶೂನ್ಯಳೂ, ಸರ್ವಕ್ಕೂ ಕಾರಣ ಭೂತಳೂ, ನಿಯಾಮಕಳೂ ಸರ್ವವನ್ನೂ ನಿರುಪಾಧಿಕ ಪ್ರೇಮದಿಂದ ಪಾಲಿಸುವುದರಿಂದ ಸರ್ವ ಶರಣಳೂ ಸುಹೃತ್ ಸ್ವರೂಪಳೂ ಆಗಿರುವಳು. ||೪೯||

ಸರ್ವ ಭೂತಾಂತರ್ಯಾಮಿಯಾಗಿರುವುದರಿಂದ ನವರಂಧ್ರಗಳೆಂಬ ನವದ್ವಾರ ಶೋಭಿತ ಶರೀರವೆಂಬ ನಗರದಲ್ಲಿ ಪರಮಾತ್ಮ ಶಕ್ತಿ ಸ್ವರೂಪಳಾದ ದೇವಿಯೆಂಬ ಹಂಸಾಂಗನೆಯು ನಗರ ಬಾಹ್ಯೋದ್ಯಾನಾದಿಗಳಲ್ಲಿ ವಿಹರಿಸಲಿ. ಚರ ಅಚರ ಸಕಲ ಜಗತ್ತಿಗೆ ಈ ದೇವಿಯು ಧ್ಯೇಯಳಾದವಳು. ||೫೦||

ಅಪಾಣಿಪಾದಾ ಜನನೀ ಗ್ರಹೀತ್ರೀ
ಪಶ್ಯತ್ಯಚಕ್ಷುಃ ಸಾ ಶೃಣೋತ್ಯಕರ್ಣಾ ।
ಸಾ ವೇತ್ತಿ ವೇದ್ಯಂ ನ ಚ ತಸ್ಯಾಸ್ತು ವೇತ್ತಾ
ತಾಮಾಹುರಗ್ರ್ಯಾಂ ಮಹತೀಂ ಮಹೀಯಸೀಮ್ ॥೫೦॥

ಸಾ ಚೈವಾಗ್ನಿಃ ಸಾ ಚ ಸೂರ್ಯಃ ಸಾ ವಾಯುಃ ಸಾ ಚ ಚಂದ್ರಮಾಃ ।
ಸಾ ಚೈವ ಶುಕ್ರಃ ಸಾ ಬ್ರಹ್ಮ ಸಾ ಚಾಪಃ ಸಾ ಪ್ರಜಾಪತಿಃ ।
ಸಾ ಚೈವ ಸ್ತ್ರೀ ಸಾ ಚ ಪುಮಾನ್ ಸಾ ಕುಮಾರಃ ಕುಮಾರಿಕಾ ॥೫೨॥

ಋಚೋ ಅಕ್ಷರೇ ಪರಮೇ ವ್ಯೋಮನ್
ಯಸ್ಯಾಂ ದೇವಾ ಅಧಿರುದ್ರಾ ನಿಷೇದುಃ ।
ಯಸ್ತಾಂ ನ ವೇದ ಕಿಮೃಚಾ ಕರಿಷ್ಯತಿ
ಯೇ ತಾಂ ವಿದುಸ್ತ ಇಮೇ ಸಮಾಸತೇ ॥೫೩॥

ಛಂದಾಂಸಿ ಯಜ್ಞಾಃ ಕ್ರತವೋ ವ್ರತಾನಿ
ಭೂತಂ ಭವ್ಯಂ ಯಚ್ಚ ವೇದಾ ವದಂತಿ ।
ಸರ್ವಂ ದೇವೀ ಸೃಜತೇ ವಿಶ್ವಮೇತತ್
ತಸ್ಯಾಶ್ಚಾನ್ಯೋ ಮಾಯಯಾ ಸನ್ನಿರುದ್ಧಃ ॥೫೪॥

ಜಗದಂಬಾ ದೇವಿಯು ಪಾಣಿಪಾದವೆಂಬ ಅವಯುವಗಳಿಲ್ಲದೆ ವೇಗವಾಗಿ ಓಡಿ ವಸ್ತುವನ್ನು ಗ್ರಹಿಸುವವಳೂ, ನಯನೇಂದ್ರಿಯವಿಲ್ಲದೆ ನೋಡುವವಳೂ,ಶ್ರವಣೇಂದ್ರಿಯವಿಲ್ಲದೆ ಕೇಳುವವಳೂ ಆಗಿ ವೇದ್ಯ ವಸ್ತುವನ್ನೆಲ್ಲ ತಿಳಿಯುವವಳಾಗಿರುತ್ತಾಳೆ. ಆದರೆ ದೇವಿಯನ್ನು ತಿಳಿಯಬಲ್ಲ ವಸ್ತು ಮತ್ತೊಂದು ಇಲ್ಲ. ತಿಳಿಯುವ ಆತ್ಮನೂ ದೇವಿಯೇ ಆದ್ದರಿಂದ ತನ್ನ ವಿಷಯದಲ್ಲಿ ತನ್ನ ವ್ಯಾಪಾರವು ನಡೆಯಲಾರದೆಂದು ಅಭಿಪ್ರಾಯವು. ಸರ್ವದಾಹಕವಾದ ಅಗ್ನಿಯು ತನ್ನನ್ನು ತಾನು ಸುಟ್ಟುಕೊಳ್ಳುವುದಿಲ್ಲ. ಇಂತಹ ದೇವಿಯನ್ನು ಶ್ರೇಷ್ಠಳೆಂದೂ, ದೊಡ್ಡ ಪ್ರಾಪಂಚಿಕ ಪದಾರ್ಥರೂಪದಿಂದ ಮಹಾಪರಿಮಾಣವುಳ್ಳವಳೆಂದೂ, ಅದಕ್ಕಿಂತ ಅಧಿಕಪರಿಮಾಣವುಳ್ಳ ವಸ್ತ್ವಾಕಾರದಿಂದ ಅಧಿಕ ಪರಿಮಾಣವುಳ್ಳವಳೆಂದೂ ಪ್ರಾಜ್ಞರು ಹೇಳುತ್ತಾರೆ. ॥೫೧॥

ದೇವಿಯೇ ಅಗ್ನಿ, ಸೂರ್ಯ, ವಾಯು, ಚಂದ್ರ, ಜ್ಯೋತಿರ್ಮಯದೇವ ಅಥವಾ ಶುಕ್ರಗ್ರಹ, ಪರಬ್ರಹ್ಮ, ಪಂಚಭೂತಾಂತರ್ಗತ ಜಲ, ಪ್ರಜಾಪತಿದೇವ, ಸ್ತ್ರೀ, ಪುರುಷ, ಕುಮಾರ, ಕುಮಾರೀ ಎಂಬ ಸಮಸ್ತ ವ್ಯಕ್ತಿ ಅವಸ್ಥೆ ಮೊದಲಾದವುಗಳಿಂದ ಗುರ್ತಿಸಲ್ಪಟ್ಟ ಸಕಲ ಪ್ರಪಂಚ ಸ್ವರೂಪಳೂ ಆಗಿರುವಳು. ॥೫೨॥

ಪರಮಾತ್ಮಸ್ವರೂಪಳಾದ ಯಾವ ದೇವಿಯನ್ನು ಪರಮತಾತ್ಪರ್ಯದಿಂದ ಬೋಧಿಸಲು ಋಙ್ಮಂತ್ರ ಆದಿಯಾಗಿ ಸಕಲ ವೇದಗಳೂ ದೇವಿಯ ಅಧಿಷ್ಠಾನವನ್ನೇ ಹೊಂದಿವೆಯೋ, ಮತ್ತು ರುದ್ರನೇ ಅಧಿಕನೆಂದೆನಿಸಿದ ಇತರ ಸಮಸ್ತ ದೇವತಾಗಣವೂ ಯಾವ ದೇವಿಯ ಅಧಿಷ್ಠಾನಾವಲಂಬಿಯಾಗಿರುವುದೋ ಅಂತಹ ದೇವಿಯನ್ನು ತಿಳಿಯದವನಿಗೆ ಋಗ್ವೇದಾದಿ ವೇದಾಧ್ಯಯನದಿಂದ ಆಗುವ ಫಲ ಲಾಭವೇನು ? ಜ್ಞಾನಿಗಳು ಮಾತ್ರ ದೇವಿಯನ್ನು ತಿಳಿದು ಮೋಕ್ಷರೂಪವಾದ ಪರಮನಿಶ್ಶ್ರೇಯಸವನ್ನು ಹೊಂದಿ ತೃಪ್ತರೂ ಕೃತಕೃತ್ಯರೂ ಆಗಿರುವರು. ॥೫೩॥

ವಿವಿಧ ಛಂದೋರೂಪವಾದ ವೇದಗಳೂ, ಹವಿಸ್ಸುಗಳಿಂದ ಮಾಡಬೇಕಾದ ಇಷ್ಟಿಯಜ್ಞಗಳೂ, ಸೋಮರಸದಿಂದ ಮಾಡುವ ಸೋಮಯಾಗಗಳೂ, ಕೃಚ್ಛ್ರ ಚಾಂದ್ರಾಯಣಾದಿ ವ್ರತನಿಯಮಗಳೂ, ಹಾಗೆ ಇತರ ಭೂತ ಭಾವಿ ವಸ್ತುಜಾಲವೂ ಏನೇನು ವೇದಗಳಿಂದ ಪ್ರತಿಪಾದಿಸಲ್ಪಟ್ಟಿವೆಯೋ ಆ ಸಕಲ ಪ್ರಪಂಚವನ್ನೂ ದೇವಿಯೇ ಸೃಷ್ಟಿಸುವಳು. ಶಕ್ತಿ ಸ್ವರೂಪಳಾದ ದೇವಿಯಿಂದ ಸೃಷ್ಟಿಕ್ರಮವೂ ಜರುಗುವುದು. ಈ ಶಕ್ತಿ ಮಾಯಾ ತಿರೋಹಿತನಾಗಿ ಪುರುಷನು ಸರ್ಗಾದಿ ವ್ಯವಹಾರಾವಸ್ಥೆಯಲ್ಲಿರುವನೆಂದು ಅಭಿಪ್ರಾಯವು. ॥೫೪॥

ಮಾಯಾಂ ತು ಪ್ರಕೃತಿಂ ವಿದ್ಯಾತ್ ಪ್ರಭುಂ ತಸ್ಯಾ ಮಹೇಶ್ವರೀಮ್ ।
ಅಸ್ಯಾ ಅವಯವೈಃ ಸೂಕ್ಷ್ಮೈರ್ವ್ಯಾಪ್ತಂ ಸರ್ವಮಿದಂ ಜಗತ್ ॥೫೫॥

ಯಾ ದೇವಾನಾಂ ಪ್ರಭವಾ ಚೋದ್ಭವಾ ಚ
ವಿಶ್ವಾಧಿಪಾ ಸರ್ವಭೂತೇಷು ಗೂಢಾ ।
ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ
ಸಾ ನೋ ಬುದ್ಧ್ಯಾ ಶುಭಯಾ ಸಂಯುನಕ್ತು ॥೫೬॥

ಸೂಕ್ಷ್ಮಾತಿಸೂಕ್ಷ್ಮಂ ಸಲಿಲಸ್ಯ ಮಧ್ಯೇ
ವಿಶ್ವಸ್ಯ ಸ್ರಷ್ಟ್ರೀಮನೇಕಾನನಾಖ್ಯಾಮ್ ।
ವಿಶ್ವಸ್ಯ ಚೈಕಾಂ ಪರಿವೇಷ್ಟಯಿತ್ರೀಂ
ಜ್ಞಾತ್ವಾ ಗುಹ್ಯಾಂ ಶಾಂತಿಮತ್ಯಂತಮೇತಿ ॥೫೭॥

ಸಾ ಹ್ಯೇವ ಕಾಲೇ ಭುವನಸ್ಯ ಗೋಪ್ತ್ರೀ
ವಿಶ್ವಾಧಿಪಾ ಸರ್ವಭೂತೇಷು ಗೂಢಾ ।
ಯಸ್ಯಾಂ ಮುಕ್ತಾ ಬ್ರಹ್ಮರ್ಷಯೋಽಪಿ ದೇವಾಃ
ಜ್ಞಾತ್ವಾ ತಾಂ ಮೃತ್ಯುಪಾಶಾಞ್ಛಿನತ್ತಿ ॥೫೮॥

ಘೃತಾತ್ಪರಂ ಮಂಡಮಿವಾತಿಸೂಕ್ಷ್ಮಂ
ಜ್ಞಾತ್ವಾ ಕಾಲೀಂ ಸರ್ವಭೂತೇಷು ಗೂಢಾಮ್ ।
ಕಲ್ಪಾಂತೇ ವೈ ಸರ್ವಸಂಹಾರಕರ್ತ್ರೀಂ
ಜ್ಞಾತ್ವಾ ಗುಹ್ಯಾಂ ಮುಚ್ಯತೇ ಸರ್ವಪಾಪೈಃ ॥೫೯॥

ಏಷಾ ದೇವೀ ವಿಶ್ವಯೋನಿರ್ಮಹಾತ್ಮಾ
ಸದಾ ಜನಾನಾಂ ಹೃದಿ ಸನ್ನಿವಿಷ್ಟಾ ।
ಹೃದಾ ಮನೀಷಾ ಮನಸಾಭಿಕ್ಲಪ್ತಾ
ಯೇ ತಾಂ ವಿದುರಮೃತಾಸ್ತೇ ಭವಂತಿ ॥೬೦॥

ಜನ್ಮ, ಸ್ಥಿತಿ, ಲಯ, ಅನುಗ್ರಹ, ತಿರೋಧಾನಗಳೆಂಬ ಪಂಚಕೃತ್ಯಾವಸ್ಥೆಗಳನ್ನು ಹೊಂದುವ ಜಗತ್ತಿಗೆ ಮಾಯಾಶಕ್ತಿಯನ್ನು ಪ್ರಕೃತಿ ಕಾರಣವನ್ನಾಗಿಯೂ, ಆ ಮಾಯೆಯಾಕ್ಕೆ ಧರ್ಮಿಯಾಗಿ ಆಧಾರಭೂತಳೂ, ಪ್ರಭುವೂ ಆದ ದೇವಿಯನ್ನು ಮಹೇಶ್ವರಿಯನ್ನಾಗಿಯೂ ಅರಿಯಬೇಕು. ಈ ದೇವಿಯ ಸೂಕ್ಷ್ಮ ಅವಯವಗಳಿಂದ ಈ ಎಲ್ಲ ಜಗತ್ತು ವ್ಯಾಪಿಸಲ್ಪಟ್ಟಿದೆ. ||೫೫||

ಯಾವ ದೇವಿಯು ನಿಖಿಲ ದೇವತೆಗಳ ಜನ್ಮ ಮತ್ತು ತದನಂತರದಲ್ಲಿರುವ ಸ್ಥಿತಿಯೆಂಬ ಅವಸ್ಥೆಗಳಿಗೆ ಕಾರಣಳೂ, ವಿಶ್ವಕ್ಕೆ ಅಧಿಪತಿಯೂ, ಸರ್ವಭೂತಗಳಲ್ಲಿಯೂ ಗೂಢವಾದ ಅಂತರ್ಯಾಮಿ ರೂಪದಿಂದ ವ್ಯಾಪಿಸಿರುವವಳೂ, ಎಲ್ಲಕ್ಕೂ ಮುಂಚೆ ಹಿರಣ್ಯಗರ್ಭನನ್ನು ಸೃಷ್ಟಿಸಿದವಳೂ ಆಗಿರುವಳೋ ಅಂತಹ ದೇವಿಯು ನಮ್ಮನ್ನು ಕರ್ತವ್ಯಾಕರ್ತವ್ಯಗಳಲ್ಲಿ ಸದ್ಬುದ್ಧಿಯಿಂದ ಯೋಜಿಸಲಿ. ವಿವೇಕಬುದ್ಧಿಯನ್ನು ಕರುಣಿಸಬೇಕೆಂದು ತಾತ್ಪರ್ಯವು. ||೫೬||

ಅನೇಕಾನನಳೆಂಬ ವಿಶ್ವರೂಪದಿಂದ ಜಲಮಧ್ಯದಲ್ಲಿ ಸೂಕ್ಷ್ಮಾತಿಸೂಕ್ಷ್ಮವಾದ ಈ ಪ್ರಪಂಚವನ್ನು ಸೃಷ್ಟಿಮಾಡುವವಳೂ, ಒಬ್ಬಳೆ ನಿಖಿಲಪ್ರಪಂಚವನ್ನೂ ಬಾಹ್ಯಾಭ್ಯಂತರ ಸ್ಥಳಗಳಲ್ಲಿ ಪರಿವೇಷ್ಟನ ಮಾಡಿರುವಳೂ ಆದ ಗುಹ್ಯಕಾಳೀದೇವಿಯನ್ನು ತಿಳಿದು ಅತ್ಯಂತ ಶಾಂತಿಯನ್ನು ಹೊಂದಿ ನಿಖಿಲದುಃಖಗಳಿಂದಲೂ ಉಪರಮ ಹೊಂದುತ್ತಾನೆ. ||೫೭||

ಆ ದೇವಿಯು ಸ್ಥಿತಿಕಾಲದಲ್ಲಿ ಭುವನವನ್ನೆಲ್ಲಾ ರಕ್ಷಿಸುವವಳಾಗಿ, ವಿಶ್ವಕ್ಕೆ ಅಧಿಪತಿಯಾಗಿ, ಸರ್ವಭೂತಗಳಲ್ಲಿಯೂ ಗೂಢವಾಗಿ ವಾಸಿಸುವವಳಾಗಿರುವಳು. ಇಂತಹ ದೇವಿಯಲ್ಲಿ ಬ್ರಹ್ಮಋಷಿಗಳೂ ದೇವತೆಗಳೂ ಸರ್ವವನ್ನೂ ಪರಿತ್ಯಾಗ ಮಾಡಿ ಮುಕ್ತರಾಗಿರುವರು. ದೇವಿಯನ್ನು ಸಾಕ್ಷಾತ್ಕರಿಸಿದವನ ಮೃತ್ಯುಪಾಶಗಳನ್ನು ದೇವಿಯು ಛೇದನ ಮಾಡುವಳು. ||೫೮||

ಹಾಲಿನಲ್ಲಿ ತುಪ್ಪಕ್ಕೆ ಕಾರಣವಾದ ಸೂಕ್ಷ್ಮರೂಪವು ಶ್ರೇಷ್ಠವಾಗಿ ಕೆನೆಯಲ್ಲಿರುವಂತೆ ಸರ್ವಭೂತಗಳಲ್ಲಿಯೂ ಸೂಕ್ಷ್ಮರೂಪದಿಂದಿರುವುದರಿಂದ ಗೂಢಳಾದ ಮತ್ತು ಪ್ರಲಯಕಾಲದಲ್ಲಿ ಸರ್ವರನ್ನೂ ಸಂಹಾರಮಾಡುವ ಗುಹ್ಯಕಾಳೀದೇವಿಯನ್ನು ಸಾಕ್ಷಾತ್ಕರಿಸಿದರೆ ಸರ್ವಪಾಪಗಳಿಂದಲೂ ನಿರ್ಮುಕ್ತನಾಗುವನು. ||೫೯||

ವಿಶ್ವಕ್ಕೆ ಕಾರಣಳೂ ಮಹಾತ್ಮಳೂ ಆದ ದೇವಿಯು ಜನರ ಹೃದಯದಲ್ಲಿ ಯಾವಾಗಲೂ ವಾಸಮಾಡಿ ಸನ್ನಿಹಿತಳಾಗಿರುವಳು. ಧ್ಯಾನೋಪಾಸನೆಗಳಿಂದ ನಿರ್ಮಲವಾದ ಅಧ್ಯವಸಾಯಪ್ರಧಾನವಾದ ಮನಸ್ಸಿನಿಂದ ಯಾರು ಸಾಕ್ಷಾತ್ಕರಿಸುವರೋ ಅವರು ದೇವಿಯ ತತ್ತ್ವಜ್ಞಾನದಿಂದ ಮುಕ್ತರಾಗುತ್ತಾರೆ. ||೬೦||

ಯದಾ ತಮಸ್ತತ್ರ ದಿವಾ ನ ರಾತ್ರಿಃ
ನ ಸನ್ನ ಚಾಸದ್ಭಗವತ್ಯೇವ ಗುಹ್ಯಾ ।
ತದಕ್ಷರಂ ತತ್ಸವಿತುರ್ವರೇಣ್ಯಂ
ಪ್ರಜ್ಞಾ ಚ ತಸ್ಯಾಃ ಪ್ರಸೃತಾ ಪರಾ ಸಾ ॥೬೧॥

ನೈನಾಮೂರ್ಧ್ವಂ ನ ತಿರ್ಯಕ್ಚ ನ ಮಧ್ಯಂ ಪರಿಜಗ್ರಭತ್ ।
ನ ತಸ್ಯಾಃ ಪ್ರತಿಮಾಭಿಶ್ಚ ತಸ್ಯಾ ನಾಮ ಮಹದ್ಯಶಃ ॥೬೨॥

ನ ಸಂದೃಶೇ ತಿಷ್ಠತಿ ರೂಪಮಸ್ಯಾಃ
ನ ಚಕ್ಷುಷಾ ಪಶ್ಯತಿ ಕಶ್ಚಿದೇನಾಮ್ ।
ಹೃದಾ ಮನೀಷಾ ಮನಸಾಭಿಕ ಪ್ತಾಂ
ಯ ಏನಾಂ ವಿದುರಮೃತಾಸ್ತೇ ಭವಂತಿ ॥೬೩॥

ಭೂಯಶ್ಚ ಸೃಷ್ಟ್ವಾ ತ್ರಿದಶಾನಧೇಶೀ
ಸರ್ವಾಧಿಪತ್ಯಂ ಕುರುತೇ ಭವಾನೀ
ಸರ್ವಾ ದಿಶಶ್ಚೋರ್ಧ್ವಮಧಶ್ಚ ತಿರ್ಯಕ್
ಪ್ರಕಾಶಯಂತೀ ಭ್ರಾಜತೇ ಗುಹ್ಯಕಾಲೀ ॥೬೪॥

ನೈವ ಸ್ತ್ರೀ ನ ಪುಮಾನೇಷಾ ನೈವ ಚೇಯಂ ನಪುಂಸಕಾ ।
ಯದ್ಯಚ್ಛರೀರಮಾದತ್ತೇ ತೇನ ತೇನೈವ ಯುಜ್ಯತೇ ॥೬೫॥

ಧರ್ಮಾವಹಾಂ ಪಾಪನುದಾಂ ಭಗೇಶೀಂ
ಜ್ಞಾತ್ವಾತ್ಮಸ್ಥಾಮಮೃತಾಂ ವಿಶ್ವಮಾತರಮ್ ।
ತಾಮೀಶ್ವರಾಣಾಂ ಪರಮಾಂ ಮಹೇಶ್ವರೀಂ
ತಾಂ ದೇವತಾನಾಂ ಪರದೇವತಾಂ ಚ ।
ಪತಿಂ ಪತೀನಾಂ ಪರಮಾಂ ಪುರಸ್ತಾತ್
ವಿದ್ಯಾವತಾಂ ಗುಹ್ಯಕಾಲೀಂ ಮನೀಷಾಮ್ ॥೬೬॥

ಸ್ಥೂಲಪ್ರಪಂಚ ನಿರ್ಮಾಣವಾಗುವ ಮೊದಲು ಅವ್ಯಾಕೃತನಾಮರೂಪಗಳ ಸಮಷ್ಟಿರೂಪವಾದ ಮಾಯಾ ಎಂಬುದು ಒಂದೇ ಅವಿಭಕ್ತವಾಗಿರುವುದು. ಆಗ ಹಗಲು, ರಾತ್ರಿ, ಸದ್ವಸ್ತು, ಅಸದ್ವಸ್ತುಗಳಾವುವೂ ಬೇರೆಯಾಗಿ ಇರುವುದಿಲ್ಲ. ಭಗವತಿಯಾದ ಗುಹ್ಯಕಾಲಿಕಾದೇವೀತತ್ತ್ವ ಒಂದೇ ಇರುವುದು. ಆ ತತ್ತ್ವವು ಮಾಯಾ ಸಹಾಯದಿಂದ ಜಗತ್ತತ್ತ್ವ ನಿರ್ಮಾಣಮಾಡುವುದಾಗಿಯೂ ಅವಿನಾಶಿಯಾದ್ದರಿಂದ ಅಕ್ಷರಸ್ವರೂಪವಾದುದೂ ಆಗಿದೆ. ಆದರಿಂದ ಪುರಾಣವಾದ ಜ್ಞಾನ ಸಾಧನವಾದ ವೇದವಾಣಿಯು ಜನಿಸಿದೆ. ||೬೧||

ದೇವಿಯು ಪರಿಚ್ಛೇದತ್ರಯವರ್ಜಿತಳಾಗಿರುವುದರಿಂದ ಊರ್ಧ್ವ ತಿರ್ಯಕ್ ಮಧ್ಯಾದಿ ಪ್ರದೇಶಗಳನ್ನು ಗ್ರಹಿಸಲಾಗುವುದಿಲ್ಲ. ಮತ್ತು ಸರ್ವವನ್ನೂ ಅತಿಶಯಿಸಿದ ಸ್ವರೂಪವಾದ್ದರಿಂದ ಉಪಮಾನವಸ್ತುಗಳಿಂದ ಪರಿಚಯಮಾಡಿಕೊಳ್ಳಲಾಗುವುದಿಲ್ಲ. ದೇವಿಗೆ "ಮಹಾಯಶಃ" ಎಂಬುದು ಹೆಸರು. ಎಂದರೆ ಮಹಾಯಶೋರೂಪಳನ್ನಾಗಿ ಧ್ಯಾನಿಸಬೇಕೆಂದು ತಾತ್ಪರ್ಯ. ||೬೨||

ದೇವಿಯ ಸ್ವರೂಪವು ಚಕ್ಷುರಿಂದ್ರಿಯಗ್ರಹಣ ಯೋಗ್ಯವಾಗಿಲ್ಲ. ಆದುದರಿಂದ ಯಾರೊಬ್ಬನೂ ದೇವಿಯನ್ನು ಕಣ್ಣಿಂದ ಕಾಣಲಾರನು. ಸಂಸ್ಕೃತವಾದ ಶುದ್ಧಾಂತಃಕರಣದಿಂದ ಮಾತ್ರ ಗೋಚರಳಾಗುವ ದೇವಿಯನ್ನು ಸಾಕ್ಷಾತ್ಕರಿಸಿದವರು ಮುಕ್ತರಾಗುವರು. ||೬೩||

ಗುಹ್ಯಕಾಲೀದೇವಿಯು ಸೃಷ್ಟಿವ್ಯಾಪಾರಮಗ್ನಳಾಗಿ ನಿಖಿಲ ದೇವತೆಗಳನ್ನೂ ಹಿಂದಿನ ಕಲ್ಪದಲ್ಲಿದ್ದಂತೆ ಸೃಷ್ಟಿಮಾಡಿ ಸರ್ವಾಧಿಪತ್ಯವನ್ನು ನಿರ್ವಹಿಸುತ್ತಾಳೆ. ಮತ್ತು ಭವಾನೀಸ್ವರೂಪಳಾದ ದೇವಿಯು ಸರ್ವದಿಕ್ಕುಗಳನ್ನೂ ಊರ್ಧ್ವಅಧೋಭಾಗಗಳನ್ನೂ ತಿರ್ಯಕ್ಪ್ರದೇಶಗಳನ್ನೂ ಪ್ರಕಾಶಪಡಿಸುತ್ತಾ ದೀಪ್ಯಮಾನಳಾಗಿರುತ್ತಾಳೆ. ||೬೪||

ದೇವಿಯು ಸ್ತ್ರೀ, ಪುರುಷ, ನಪುಂಸಕವೆಂಬ ಲಿಂಗಗಳಲ್ಲಿ ಯಾವುದಕ್ಕೂ ಸೇರಿದವಳಲ್ಲ. ಔಪಾಧಿಕವಾದ ಸ್ವೇಚ್ಛಾವಶವಾದ ಯಾವ ಯಾವ ಶರೀರವನ್ನು ಲೀಲಾವಶದಿಂದ ಸ್ವೀಕರಿಸುವಳೋ ಅಂತಹ ಶರೀರ ಸಂಬಂಧದಿಂದ ಸ್ತ್ರೀಯಾಗಿಯೂ ಪುರುಷನಾಗಿಯೂ ವಿವಿಧವಾಗಿ ವ್ಯವಹರಿಸಲ್ಪಡುವಳು. ||೬೫||

ಭಕ್ತರಿಗೆ ಪುಣ್ಯಪುಂಜವನ್ನು ನೀಡುವವಳೂ, ಪಾಪವನ್ನು ದೂರಮಾಡುವವಳೂ, ಸಮಗ್ರ ಐಶ್ವರ್ಯಕ್ಕೆ ಅಧಿಪತಿಯೂ, ಲೋಕನಿಯಾಮಕರಾದ ಈಶ್ವರರಿಗೆ ಮಹೇಶ್ವರ ಸ್ವರೂಪಳೂ, ದೇವತೆಗಳಿಗೆ ಪರಮದೇವತಾ ಸ್ವರೂಪಳೂ, ವಿದ್ಯಾವಂತರಾದ ಜ್ಞಾನಿಗಳಿಗೆ ಮನೋನಿಯಾಮಕಳೂ, ಪ್ರಪಂಚ ಜನನಿಯೂ, ಅಮೃತರೂಪಳೂ ಆಗಿರುವ ಉಪಾಸ್ಯ ಗುಹ್ಯಕಾಲಿಕಾದೇವಿಯನ್ನು, ಪ್ರತ್ಯಗಾತ್ಮ ಅಭೇದದಿಂದ ಅನುಸಂಧಾನ ಮಾಡುವುದು ಕೃತಕೃತ್ಯತೆಗೆ ಕಾರಣವು. ||೬೬||

ತಸ್ಯಾ ನ ಕಾರ್ಯಂ ಕರಣಂ ಚ ವಿದ್ಯತೇ
ನ ತತ್ಸಮಾ ಚಾಪ್ಯಧಿಕಾ ಚ ದೃಶ್ಯತೇ ।
ಪರಾಸ್ಯಾಃ ಶಕ್ತಿರ್ವಿವಿಧೈವ ಶ್ರೂಯತೇ
ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥೬೭॥

ಕಶ್ಚಿನ್ನ ತಸ್ಯಾಃ ಪತಿರಸ್ತಿ ಲೋಕೇ
ನಚೇಶಿತಾ ನೈವ ತಸ್ಯಾಶ್ಚ ಲಿಂಗಮ್ ।
ಸಾ ಕಾರಣಂ ಕಾರಣಕಾರಣಾಧಿಪಾ
ನಾಸ್ಯಾಶ್ಚ ಕಶ್ಚಿಜ್ಜನಿತಾ ನ ಚಾಧಿಪಃ ॥೬೮॥

ಏಕಾ ದೇವೀ ಸರ್ವಭೂತೇಷು ಗೂಢಾ
ವ್ಯಾಪ್ನೋತ್ಯೇತತ್ ಸರ್ವಭೂತಾಂತರಸ್ಥಾ ।
ಕರ್ಮಾಧ್ಯಕ್ಷಾ ಸರ್ವಭೂತಾಧಿವಾಸಾ
ಸಾಕ್ಷಿಣ್ಯೇಷಾ ಕೇವಲಾ ನಿರ್ಗುಣಾ ಚ ॥೬೯॥

ವಶಿನ್ಯೇಕಾ ನಿಷ್ಕ್ರಿಯಾಣಾಂ ಬಹೂನಾಂ
ಏಕಂ ಬೀಜಂ ಬಹುಧಾ ಯಾ ಕರೋತಿ ।
ನಾನಾರೂಪಾ ದಶವಕ್ತ್ರಂ ವಿಧತ್ತೇ
ನಾನಾರೂಪಾನ್ ಯಾ ಚ ಬಾಹೂನ್ ಬಿಭರ್ತಿ ॥೭೦॥

ನಿತ್ಯಾ ನಿತ್ಯಾನಾಂ ಚೇತನಾ ಚೇತನಾನಾಂ
ಏಕಾ ಬಹೂನಾಂ ವಿದಧಾತಿ ಕಾಮಾನ್ ।
ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ
ಜ್ಞಾತ್ವಾ ದೇವೀಂ ಮುಚ್ಯತೇ ಸರ್ವಪಾಶೈಃ ॥೭೧॥

ಆದೇವಿಗೆ ಕಾರ್ಯವೂ ಕಾರಣವೂ ಆದ ಯಾವುದೊಂದು ಪರಮಾರ್ಥ ವಸ್ತುವೂ ಇಲ್ಲ. ದೇವಿಗೆ ಸಮಾನವಾದುದಾಗಲಿ ಅಧಿಕವಾದುದಾಗಲಿ ಮತ್ತೊಂದು ವಸ್ತುವು ಇಲ್ಲ. ದೇವಿಗೆ ವಿಚಿತ್ರಾನೇಕವಸ್ತುರಚನಾಶಕ್ತಿಯು ಶ್ರೇಷ್ಠವಾಗಿದೆ. ಮತ್ತು ಜ್ಞಾನಕ್ರಿಯಾಶಕ್ತಿಗಳೂ ಸ್ವಾಭಾವಿಕವಾದುವುಗಳು. ||೬೭||

ಲೋಕದಲ್ಲಿ ಸರ್ವನಿಯಾಮಕಳಾದ ದೇವಿಗೆ ಹೆಚ್ಚಿನ ರಕ್ಷಕನು ಬೇರೊಬ್ಬನಿಲ್ಲ. ಬೇರೊಬ್ಬ ನಿಯಾಮಕನೂ ಇಲ್ಲ. ಪುಂ, ಸ್ತ್ರೀ, ನಪುಂಸಕಲಿಂಗವು ದೇವಿಗೆ ಸ್ವಾಭಾವಿಕವಾಗಿಲ್ಲ. ದೇವಿಯ ಉತ್ಪತ್ತಿ ಸ್ಥಿತಿಗಳಿಗೆ ಕಾರಣವಾಗಿ ಬೇರೊಬ್ಬನಿಲ್ಲ. ದೇವಿಯೇ ಎಲ್ಲಕ್ಕೂ ಕಾರಣಳು. ಕಾರಣವಸ್ತುಗಳಿಗೆಲ್ಲ ಕಾರಣ ಸ್ವರೂಪಳೂ ಅಧಿಪತಿಯೂ ಆಗಿರುವಳು. ಜಗತ್ತಿನ ಅಸಂಕುಚಿತವಾದ ಮೇಲ್ಮೆಗೆ ದೇವಿಯು ಆಧಾರಳೆಂದು ತಾತ್ಪರ್ಯವು. ||೬೮||

ಹುಟ್ಟಿದ ಪ್ರತಿಯೊಂದು ವಸ್ತುವಿನಲ್ಲಿಯೂ ಗೂಢರೂಪದಿಂದಲೂ ಸಕಲ ಪ್ರಾಣಿವರ್ಗದಲ್ಲಿ ಅಂತರ್ಯಾಮಿರೂಪದಿಂದಲೂ ದೇವಿಯೊಬ್ಬಳೇ ಇದ್ದು ಸಮಸ್ತ ಜಗತ್ತನ್ನೂ ವ್ಯಾಪಿಸಿರುತ್ತಾಳೆ. ಮತ್ತು ಸರ್ವ ಭೂತಗಳಲ್ಲಿ ವಾಸಿಸುತ್ತ ಅಲ್ಲಿ ನಡೆಯುವ ಸುಕೃತ ದುಷ್ಕೃತ ಕರ್ಮಗಳಿಗೆ ಅಧ್ಯಕ್ಷಳೂ ಸಾಕ್ಷಿಸ್ವರೂಪಳೂ ನಿರ್ಗುಣ ಸ್ವರೂಪಳೂ ಆಗಿರುವಳು. ||೬೯||

ಕ್ರಿಯಾಶೂನ್ಯವಾದ ಅನೇಕ ವಿಭುವಸ್ತುಗಳನ್ನು ವಶಮಾಡಿಕೊಂಡವಳಾಗಿಯೂ, ಅವ್ಯಾಕೃತವಾಗಿದ್ದ ಒಂದೇ ಬೀಜವನ್ನು ಸೃಷ್ಟಿಕಾಲದಲ್ಲಿ ಬಹು ವಿಸ್ತಾರ ಪಡಿಸುವವಳೂ, ಸ್ವೇಚ್ಛಾ ನಿರ್ಮಿತವಾದ ಅನೇಕ ದಿವ್ಯರೂಪಗಳಲ್ಲಿ ಅನೇಕ ಸಂಖ್ಯೆಯ ಮುಖ, ವಿವಿಧ ಬಾಹುಗಳಿಂದ ಕೂಡಿದ ನಾನಾಬಗೆಯ ರೂಪಗಳನ್ನು ಧರಿಸುವವಳೂ ಆಗಿರುವಳು. ||೭೦||

ನಿತ್ಯವಸ್ತುಗಳೆಂದು ಪ್ರಸಿದ್ಧಿಹೊಂದಿದವುಗಳಿಗೆ ನಿತ್ಯತ್ವವನ್ನೂ, ಚೇತನಗಳೆಂದು ಪ್ರಸಿದ್ಧಿ ಹೊಂದಿದವುಗಳಿಗೆ ಚೇತನತ್ವವನ್ನೂ ಅನುಗ್ರಹಿಸಿರುವುದರಿಂದ ಎಲ್ಲ ನಿತ್ಯ ವಸ್ತುಗಳಿಗಿಂತಲೂ ನಿತ್ಯಳೂ, ಎಲ್ಲ ಚೇತನವಸ್ತುಗಳಿಗಿಂತಲೂ ಚೇತನಳೂ ಆಗಿ ದೇಶ ಕಾಲ ಕರ್ಮ ವಿಪಾಕಕ್ಕೆ ತಕ್ಕ ಫಲಗಳನ್ನು ಸ್ವತಂತ್ರಳಾಗಿ ದೇವಿಯೊಬ್ಬಳೇ ಕೊಡುವಳು. ಜ್ಞಾನ–ಕರ್ಮಯೋಗಗಳಿಂದ ಪ್ರಾಪ್ಯವಾದ, ಸರ್ವಕಾರಣಸ್ವರೂಪವಾದ ದೇವಿಯ ಪಾರಮಾರ್ಥಿಕ ತತ್ತ್ವವನ್ನು ಸಾಕ್ಷಾತ್ಕರಿಸಿ ಬಂಧನರೂಪವಾದ ಸಕಲ ಕರ್ಮಪಾಶಗಳಿಂದಲೂ ಮುಕ್ತನಾಗುವನು. ||೭೧||

ಯಾ ವೈ ವಿಷ್ಣುಂ ಪಾಲನೇ ಸನ್ನಿಯುಙ್ಕ್ತೇ
ರುದ್ರಂ ದೇವಂ ಸಂಹೃತೌ ಚಾಪಿ ಗುಹ್ಯಾ ।
ತಾಂ ವೈ ದೇವೀಮಾತ್ಮಬುದ್ಧಿಪ್ರಕಾಶಾಂ
ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ||೭೨||

ನಿಷ್ಕಲಾಂ ನಿಷ್ಕ್ರಿಯಾಂ ಶಾಂತಾಂ ನಿರವದ್ಯಾಂ ನಿರಂಜನಾಮ್ ।
ಬಹ್ವಾನನಕರಾಂ ದೇವೀಂ ಗುಹ್ಯಾಮೇಕಾಂ ಸಮಾಶ್ರಯೇ ||೭೩||

ಇಯಂ ಹಿ ಗುಹ್ಯೋಪನಿಷತ್ ಸುಗೂಢಾ
ಯಸ್ಯಾ ಬ್ರಹ್ಮಾ ದೇವತಾ ವಿಶ್ವಯೋನಿಃ ।
ಏತಾಂ ಜಪಂಶ್ಚಾನ್ವಹಂ ಭಕ್ತಿಯುಕ್ತಃ
ಸತ್ಯಂ ಸತ್ಯಂ ಹ್ಯಮೃತಃ ಸಂಬಭೂವ ||೭೪||

ವೇದವೇದಾಂತಯೋರ್ಗುಹ್ಯಂ ಪುರಾಕಲ್ಪೇ ಪ್ರಚೋದಿತಮ್ ।
ನಾಪ್ರಶಾಂತಾಯ ದಾತವ್ಯಂ ನಾಶಿಷ್ಯಾಯ ಚ ವೈ ಪುನಃ ||೭೫||

ಯಸ್ಯ ದೇವ್ಯಾಂ ಪರಾ ಭಕ್ತಿರ್ಯಥಾ ದೇವ್ಯಾಂ ತಥಾ ಗುರೌ ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ||೭೬||

ಮಹಾಕಾಲ ಉವಾಚ
ಗುಹ್ಯೋಪನಿಷದಿತ್ಯೇಷಾ ಗೋಪ್ಯಾದ್ಗೋಪ್ಯತರಾ ಸದಾ ।
ಚತುರ್ಭ್ಯಶ್ಚಾಪಿ ವೇದೇಭ್ಯಃ ಏಕೀಕೃತ್ಯಾತ್ರ ಯೋಜಿತಾ ||೭೭||

ಉಪದಿಷ್ಟಾ ಚ ಸರ್ಗಾದೌ ಸರ್ವಾನೇವ ದಿವೌಕಸಃ ।
ಏವಂ ವಿಧಂ ಚ ಯದ್ಧ್ಯಾನಮೇವಂರೂಪಂಚ ಕೀರ್ತಿತಮ್ ||೭೮||

ಯಾವ ದೇವಿಯು ವಿಷ್ಣುವನ್ನು ಜಗತ್ಪರಿಪಾಲನ ಕರ್ಮದಲ್ಲಿಯೂ ರುದ್ರ ದೇವನನ್ನು ಸಂಹಾರ ಕರ್ಮದಲ್ಲಿಯೂ ನಿಯಮನ ಮಾಡಿರುವಳೋ ಆತ್ಮಬುದ್ಧಿಯಲ್ಲಿ ಅಭಿವ್ಯಕ್ತಿಯಾಗುವ ಪ್ರಕಾಶಸ್ವರೂಪಳಾದ ಆ ಗುಹ್ಯಕಾಲೀ ದೇವಿಯನ್ನು ಮುಮುಕ್ಷು ವಾದ ನಾನು ಶರಣ ಹೊಂದುವೆನು. ||೭೨||

ನಿರವಯವಳೂ, ಕ್ರಿಯಾಶೂನ್ಯಳೂ, ನಿರ್ವಿಕಾರಳೂ, ನಿರ್ದೋಷಳೂ, ನಿಃಸಂಗಳೂ, ಔಪಾಧಿಕವಾದ ಅನೇಕ ಸಂಖ್ಯೆಯ ಮುಖ ಕರಾದಿಗಳಿಂದ ಕೂಡಿದ ಮೂರ್ತಿಯನ್ನು ಧರಿಸಿದವಳೂ ಆದ ಗುಹ್ಯಕಾಲಿಕಾದೇವಿಯೊಬ್ಬಳನ್ನು ಅನನ್ಯ ಭಾವನೆಯಿಂದ ಆಶ್ರಯಿಸುವೆನು. ||೭೩||

ಅಂತಹ ದೇವಿಯನ್ನು ಪ್ರಕಾಶಪಡಿಸುವ ಈ ಗುಹ್ಯಕಾಲ್ಯುಪನಿಷತ್ತು ಬಹು ಗೂಢವಾದುದು. ಸೃಷ್ಟಿ ಅಧಿಕಾರದಲ್ಲಿರುವ ಚತುರ್ಮುಖಬ್ರಹ್ಮನು ಭಕ್ತಿನಮ್ರನಾಗಿ ಇದನ್ನು ಪ್ರತಿದಿನವೂ ಜಪಿಸಿ ಈ ಸಾಧನಾನುಷ್ಠಾನ ಬಲದಿಂದಲೇ ಸತ್ಯ–ಪರಮ ಶಾಶ್ವತವಾದ ಮುಕ್ತಿ ಸೌಖ್ಯವನ್ನು ಹೊಂದಿ ಅಮೃತಸ್ವರೂಪನಾಗಿರುವನು. ||೭೪||

ಪೂರ್ವಕಲ್ಪದಲ್ಲಿ ಒಬ್ಬರಿಂದೊಬ್ಬರಿಗೆ ಉಪದೇಶ ಸಂಪ್ರದಾಯದಿಂದ ಬಂದು ವೇದ ವೇದಾಂತಗಳಲ್ಲೆಲ್ಲ ಬಹು ರಹಸ್ಯಪ್ರಾಯವಾದ ಈ ಜ್ಞಾನವನ್ನು ಪ್ರಶಾಂತ ನಲ್ಲದ ಮತ್ತು ಶಿಷ್ಯ ಸಂಪತ್ತಿಯಿಲ್ಲದೆ ಸಂಪ್ರದಾಯ ವಿಚ್ಛೇದವನ್ನು ತರುವ ಶಿಷ್ಯನಿಗೆ ಉಪದೇಶಿಸಬಾರದು. ||೭೫||

ದೇವಿಯಲ್ಲಿ ಪರಮಭಕ್ತಿ ಸಂಪನ್ನನೂ ದೇವಿಯಲ್ಲಿರುವಂತೆ ಗುರುವಿನಲ್ಲಿಯೂ ಗಾಢಭಕ್ತಿಯಿಂದ ತುಂಬಿದವನೂ ಆದ ಶಿಷ್ಯನಿಗೆ ಉಪದೇಶಿಸಿದ ವಿಷಯಗಳು ಸಮಂಜಸವಾಗಿ ಹೊಳೆಯುತ್ತವೆ. ಉಪದೇಶ ಗ್ರಹಣಕ್ಕೆ ಗುರುದೇವತಾ ಭಕ್ತಿಯಿಂದ ಕೂಡಿದ ಮಹಾತ್ಮನಾದ ಶಿಷ್ಯನೇ ಅಧಿಕಾರಿಯು. ||೭೬||

ಮಹಾಕಾಲೇಶ್ವರನು ಉಪದೇಶಕ್ರಮವನ್ನು ಮುಂದುವರಿಸುತ್ತ ಹೇಳುವನು. ರಹಸ್ಯ ಉಪದೇಶಗಳೆಲ್ಲಕ್ಕಿಂತಲೂ ಪರಮ ರಹಸ್ಯವಾದ ಈ ಉಪನಿಷತ್ತನ್ನು ನಾಲ್ಕು ವೇದಗಳಿಂದಲೂ ಒಂದಾದ ಸಾರರೂಪವಾಗಿ ಉದ್ಧಾರಮಾಡಿ ಇಲ್ಲಿ ಸೇರಿಸಿದೆ. ||೭೭||

ಮತ್ತು ಸೃಷ್ಟಿಯ ಆದಿಭಾಗದಲ್ಲಿ ಎಲ್ಲ ದೇವತೆಗಳಿಗೆ ಉಪದೇಶಿಸಲ್ಪಟ್ಟಿರುವುದು. ಈ ವಿಧವಾಗಿ ಅನೇಕ ಪ್ರಕಾರಗಳಿಂದ ವಿವರಿಸಲ್ಪಟ್ಟ ಧ್ಯಾನವನ್ನು ದೇವಿಯ ಸಪರ್ಯೆ ಯೆಂದು ತಿಳಿಯಬೇಕು. ಈ ವಿಧವಾದ ಧ್ಯಾನಕ್ಕೆ ಚಿತ್ತೈಕಾಗ್ರ್ಯಬಲವಿಲ್ಲದ ಅಭ್ಯಾಸ ಶೀಲರಾದ ಮಂದಾಧಿಕಾರಿಗಳು ಅನುಸರಿಸಬೇಕಾದ ಮಂತ್ರ ಜಪ ವಿಧಾನವನ್ನು ಕೇಳು. ||೭೮||

ಸಾ ಸಪರ್ಯಾ ಪರಿಜ್ಞೇಯಾ ವಿಧಾನಮಧುನಾ ಶೃಣು ।
ಸೋಽಹಮಸ್ಮೀತಿ ಪ್ರಥಮಂ ಸೋಽಹಮಸ್ಮಿ ದ್ವಿತೀಯಕಮ್ ॥೭೯॥

ತದಸ್ಮ್ಯಹಂ ತೃತೀಯಂ ಚ ಮಹಾವಾಕ್ಯತ್ರಯಂ ಭವೇತ್ ।
ಆದ್ಯಾನ್ಯೇತಾನಿ ವಾಕ್ಯಾನಿ ಛಂದಾಂಸಿ ಪರಿಚಕ್ಷತೇ ॥೮೦॥

ದೇವತಾ ಗುಹ್ಯಕಾಲೀ ಚ ರಜಃಸತ್ತ್ವತಮೋಗುಣಾಃ ।
ಸರ್ವೇಷಾಂ ಪ್ರಣವೋ ಬೀಜಂ ಹಂಸಃ ಶಕ್ತಿಃ ಪ್ರಕೀರ್ತಿತಾ ॥೮೧॥

ಮಕಾರಶ್ಚಾಪ್ಯಕಾರಶ್ಚ ಹ್ಯಕಾರಶ್ಚೇತಿ ಕೀಲಕಮ್ ।
ಏಭಿರ್ವಾಕ್ಯತ್ರಯೈಃ ಸರ್ವಂ ಕರ್ಮ ಪ್ರೋಕ್ತಂ ವಿಧಾನತಃ ॥೮೨॥

ಅನುಕ್ಷಣಂ ಜಪಂಶ್ಚೈವ ನಿಶ್ಚಯಃ ಪರಿಕೀರ್ತಿತಃ ।
ದ್ವಿತೀಯೋಪಾಸಕಾನಾಂ ಹಿ ಪರಿಪಾಟೀಯಮೀರಿತಾ ॥೮೩॥

ಏವಂ ಚಾಪ್ಯಾತುರೋ ಯಸ್ತು ಮನುಷ್ಯೋ ಭಕ್ತಿಭಾವಿತಃ ।
ವಿಮುಕ್ತಃ ಸರ್ವಪಾಪೇಭ್ಯಃ ಕೈವಲ್ಯಾಯೋಪಕಲ್ಪತೇ ।
ಸರ್ವಾಭಿಃ ಸಿದ್ಧಿಭಿಸ್ತಸ್ಯ ಕಿಂ ಕಾರ್ಯಂ ಕಮಲಾನನೇ ॥೮೪॥

ಇತಿ ಗುಹ್ಯಕಾಲ್ಯುಪನಿಷತ್ ಸಮಾಪ್ತಾ.



ಜಪ ಮಾಡಬೇಕಾದ ಮಹಾವಾಕ್ಯಗಳು ಮೂರು ಇವೆ. ಅವುಗಳಲ್ಲಿ "ಸೋಹಮಸ್ಮಿ" ಎಂಬುದು ಮೊದಲನೆಯ ಮಹಾವಾಕ್ಯ. ಹಾಗೆಯೇ "ಸೋಹಮಸ್ಮಿ" ಎಂಬುದೇ ದ್ವಿತೀಯ ಮಹಾವಾಕ್ಯವೂ ಆಗಿದೆ. "ತದಸ್ಮ್ಯಹಂ" ಎಂಬುದು ತೃತೀಯ ಮಹಾವಾಕ್ಯ. ಎಲ್ಲವೂ ಸೇರಿ ಮಹಾವಾಕ್ಯತ್ರಯವಾಗುವುದು. ಈ ಮಹಾವಾಕ್ಯಗಳು ಆದ್ಯಛಂದೋರೂಪವೆಂದು ಹೇಳುತ್ತಾರೆ. ||೭೯, ೮೦||

ಈ ಮಹಾವಾಕ್ಯಗಳಿಗೆ ಸತ್ತ್ವರಜಸ್ತಮೋಗುಣ ಸಂಘಾತ ಸ್ವರೂಪಳಾದ ಗುಹ್ಯಕಾಲಿಯು ದೇವತೆ. ಓಂಕಾರವು ಬೀಜ, ಹಂಸ ಎಂಬುದು ಶಕ್ತಿ, ಅ–ಉ–ಮಕಾರಗಳು ಕೀಲಕ, ವಿಧಿಗನುಸರಿಸಿ ಈ ಮಹಾವಾಕ್ಯತ್ರಯ ಜಪವೆಂಬ ಕರ್ಮದಿಂದ ಎಲ್ಲ ಶಾಸ್ತ್ರೀಯ ಕರ್ಮಗಳೂ ವ್ಯಾಪಿಸಲ್ಪಟ್ಟಿವೆ. ||೮೧, ೮೨||

ಮೇಲೆ ಹೇಳಿದ ಮಹಾವಾಕ್ಯತ್ರಯವನ್ನು ಪ್ರತಿಕ್ಷಣದಲ್ಲಿಯೂ ದೃಢಭಾವನೆಯಿಂದ ಜಪಿಸುತ್ತಾ ಸಂಶಯಾದಿ ಆತಂಕವಿಲ್ಲದೆ ದೇವಿಯ ತತ್ತ್ವ ನಿಶ್ಚಯವನ್ನು ಹೊಂದುತ್ತಾನೆ. ಹಿಂದೆ ಹೇಳಿದ ವಿರಾಟ್‌ಧ್ಯಾನದಲ್ಲಿ ಅಶಕ್ತರಾದ ಮಂದಾಧಿಕಾರಿಗಳಾದ ಎರಡನೆಯತರದ ಉಪಾಸಕರಿಗಾಗಿ ಈ ಕ್ರಮವು ಹೇಳಲ್ಪಟ್ಟಿರುತ್ತದೆ. ||೮೩||

ಅತಿಯಾದ ಸಂಕಟಸ್ಥಿತಿಯನ್ನು ಹೊಂದಿದ ಮನುಷ್ಯನೂ ಕೂಡ ಭಕ್ತಿಭಾವದಿಂದ ಕೂಡಿ ಈ ಮಹಾವಾಕ್ಯ ಮಂತ್ರ ಜಪವನ್ನು ಆಚರಿಸಿದರೆ ಸರ್ವಪಾಪನಿರ್ಮುಕ್ತನಾಗಿ ಕೈವಲ್ಯಸುಖಕ್ಕೆ ಪಾತ್ರನಾಗುತ್ತಾನೆ. ಪದ್ಮದಂತೆ ಸುಂದರವಾದ ವದನದಿಂದ ಶೋಭಿಸುವ ಪಾರ್ವತಿಯೆ! ಸರ್ವಸುಖಗಳಿಗೆ ಎಲ್ಲೆಯಲ್ಲಿರುವ ನಿರತಿಶಯ ಮುಕ್ತಿ ಸೌಖ್ಯವನ್ನು ಹೊಂದಲು ಪಾತ್ರನಾದ ಆ ಉಪಾಸಕನಿಗೆ ಇತರ ನಾನಾವಿಧ ಸಿದ್ಧಿಲಾಭಗಳಿಂದ ಲಾಭವೇನು? ಹೀಗೆ ವಿರಾಟ್‌ಧ್ಯಾನವನ್ನೂ ಮಹಾವಾಕ್ಯತ್ರಯ ಜಪವಿಧಾನವನ್ನೂ ಮುಖ್ಯ ದೃಷ್ಟಿಯಿಂದ ತೋರಿಸುತ್ತಾ ವಿಶೇಷವಾಗಿ ದೇವಿಯ ನಿರ್ಗುಣ ಸ್ವರೂಪವನ್ನೂ ಚೆನ್ನಾಗಿ ಈ ಉಪನಿಷತ್ತು ವಿವರಿಸಿದೆ. ||೮೪||

ಗುಹ್ಯಕಾಲ್ಯುಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

# ॥ ಗುಹ್ಯಷೋಢಾನ್ಯಾಸೋಪನಿಷತ್ ॥

---

ಅಥ ಗುಹ್ಯಾಂ ನ್ಯಸೇತ್ । ಶಿವೋ ಭವೇತ್ । ಶಕ್ತಿರೂಪೋ ಭವೇತ್ । ವಿದ್ಯಾರಾಜ್ಞೀನ್ಯಾಸಮೇವಂ ಚರೇತ್ । ನ ಜಪೋ ನ ಪೂಜಾ ನ ಸಾಧನಂ ನ ಕಾಲನಿಯಮೋ ನ ದಿವಾ ನ ರಾತ್ರಿಃ । ಸರ್ವಕಾಲಂ ನ್ಯಸೇತ್ । ಶಕ್ತಿಯುಕ್ತೋ ಭವೇತ್ । ಯಥಾಧಿಕಾರವಾನ್ ನ್ಯಸೇತ್ । ಪೂರ್ಣದೀಕ್ಷಾಂ ಲಭೇತ್। ಷೋಢಾರೂಪೋ ಭವೇತ್। ಚಿಂತಾಮಣಿರ್ಭವೇತ್॥೧॥

ಕ್ರೀಂ ಮಾತೃಸ್ಥಾನೇ ನ್ಯಸೇತ್ ಪರಾತ್ಪರತರೋ ಭವೇತ್ । ಶಿವೋ ಭವೇದಿತ್ಯೇಕಃ ॥೨॥

|| ಶ್ರೀಃ ||

# ಗುಹ್ಯಷೋಢಾನ್ಯಾಸೋಪನಿಷತ್ತಿನ ಕನ್ನಡ ಅನುವಾದವು.

---

ಗುಹ್ಯಷೋಢಾನ್ಯಾಸೋಪನಿಷತ್ ಎಂಬ ಈ ಉಪನಿಷತ್ತು ಅಥರ್ವಣಶಾಖೆಯ ಸೌಭಾಗ್ಯಕಾಂಡದಲ್ಲಿ ಇದೆ. ಹಿಂದೆ ಬಂದ ಗುಹ್ಯಕಾಲೀ ಉಪನಿಷತ್ತಿನಲ್ಲಿ ಪ್ರಧಾನ ವಾಗಿ ಪ್ರತಿಪಾದ್ಯಳಾದ ದೇವಿಯನ್ನು ಉದ್ದೇಶಿಸಿ ಮಾಡುವ ನ್ಯಾಸವಿಧಿಯನ್ನು ಈ ಉಪನಿಷತ್ತು ವಿವರಿಸುವುದು. ಆದುದರಿಂದ ಇದರ ಹೆಸರು ಅನ್ವರ್ಥವಾಗುವುದು. ಷೋಢಾ ಎಂಬ ಸಂಸ್ಕೃತ ಶಬ್ದವು ಆರು ಅವಯುವಗಳಿಂದ ಕೂಡಿದುದು ಎಂಬ ಅರ್ಥವನ್ನು ಬೋಧಿಸುವುದು. ದೇವಿಗೆ ಪರಾ, ಪರಾತ್ಪರಾ, ಪರಾತೀತಾ, ಚಿತ್ಪರಾ, ಚಿತ್ಪರಾತ್ಪರಾ, ಚಿತ್ಪರಾತೀತಾ ಎಂಬುದಾಗಿ ಆರು ಕಲೆಗಳು ಪ್ರಧಾನವಾಗಿವೆ. ಇಲ್ಲಿ ಹೇಳುವ ಒಂದೊಂದು ನ್ಯಾಸವನ್ನೂ ಕಲಾನ್ಯಾಸವೆಂದು ಹೇಳುವರು. ಇಂತಹ ಆರು ನ್ಯಾಸಗಳನ್ನು ಇಲ್ಲಿ ಕ್ರಮವಾಗಿ ವಿವರಿಸಿದೆ. ಮೊದಲು ಪ್ರತಿಪಾದ್ಯ ವಿಷಯ ವನ್ನೂ ಅದರ ಫಲವನ್ನೂ ಪಠಿಸಿದೆ. ಗುಹ್ಯಾದೇವಿಯ ಪ್ರಸಾದ ಸಿದ್ಧಿಗೋಸ್ಕರ ಗುಹ್ಯಾದೇವೀನ್ಯಾಸವನ್ನು ಆಚರಿಸಬೇಕು. ಇದರಿಂದ ಶಿವ–ಶಕ್ತಿ ಸ್ವರೂಪ ನಾಗುವನು ಮತ್ತು ದೇವಿಯ ವಿಗ್ರಹರೂಪವಾದ ಮಂತ್ರದ ನ್ಯಾಸವನ್ನು ಆಚರಿಸ ಬೇಕು. ಈ ದೇವಿಯ ಮಹಾಮಂತ್ರಕ್ಕೆ ವಿದ್ಯಾರಾಜ್ಞೀ ಎಂದು ಹೆಸರು. ಈ ನ್ಯಾಸವು ಮಹಾಪವಿತ್ರಕರ್ಮವಾದ್ದರಿಂದ ಇದನ್ನು ಆಚರಿಸುವಾಗ ಇತರ ಜಪ, ಪೂಜಾ, ಸಾಧನಗಳನ್ನು ಆಚರಿಸಬೇಕಾಗಿಲ್ಲ. ಮತ್ತು ಹಗಲು ರಾತ್ರಿ ಮುಂತಾದ ವಿಶೇಷವಾದ ಕಾಲನಿಯಮವು ಈ ನ್ಯಾಸಕ್ಕೆ ಆವಶ್ಯಕವಾಗಿಲ್ಲ. ಎಂದರೆ ಯಾವಾ ಗಲೂ ಈ ನ್ಯಾಸವನ್ನು ಅನುಷ್ಠಾನ ಮಾಡಬಹುದು. ಇದಕ್ಕೆ ಉತ್ತಮ ಶಕ್ತಿಯನ್ನು ವಿಹಿತ ಕರ್ಮಗಳಿಂದ ಸಾಧಿಸಬೇಕು. ಮತ್ತು ಮುಂದೆ ಹೇಳುವ ನ್ಯಾಸವಿಧಿಯಲ್ಲಿ ಅಧಿಕಾರಕ್ಕೆ ತಕ್ಕಂತೆ ನ್ಯಾಸವನ್ನು ಆಚರಿಸಬೇಕು. ಮೊದಲು ಪೂರ್ಣದೀಕ್ಷೆಯನ್ನು ದೀಕ್ಷಾವಿಧಿಯಂತೆ ಕೈಗೊಳ್ಳಬೇಕು. ಪೂರ್ಣ ದೀಕ್ಷೆಯಿಂದ ದೀಕ್ಷಿತನಾದವನು ಷೋಢಾರೂಪ–ಆರು ಕಲೆಗಳಿಂದ ಕೂಡಿದ ದೇವಿಯ ರೂಪವನ್ನು ಹೊಂದುವನು. ಮತ್ತು ಚಿಂತಾಮಣಿ ಕಾಲೀರೂಪನಾಗುವನು. ||೧||

ವರ್ಣಮಾಲೆಯ ಅಕ್ಷರಗಳನ್ನು ಅನುಸ್ವಾರ ಸಹಿತವಾಗಿ ಆಯಾಯ ವಿಹಿತ ಸ್ಥಾನಗಳಲ್ಲಿ ನ್ಯಾಸ ಮಾಡುವುದು ಮಾತೃಕಾನ್ಯಾಸವೆನಿಸಲ್ಪಡುವುದು. ಈ ಮಾತೃ ಸ್ಥಾನದಲ್ಲಿ ಕ್ರೀಂ ಎಂಬ ಮಂತ್ರಬೀಜಾಕ್ಷರವನ್ನು ನ್ಯಾಸ ಮಾಡಬೇಕು. ಇದರ ಫಲವಾಗಿ ಪರಾತ್ಪರತರಕಲಾತ್ಮಕನಾಗುವನು. ಮತ್ತು ಶಿವಸ್ವರೂಪನಾಗುವನು. ಇದು ಮೊದಲನೆಯ ನ್ಯಾಸವು. ||೨||

ಅಥ ತಾರಾದ್ವಯಪುಟಿತಾಂ ಮಾತೃಕಾಂ ಮಾತೃಕಾಪುಟಿತಾಂ ತಾಂ ಮಾತೃಕಾಸ್ಥಾನೇ ನ್ಯಸೇತ್ । ಪರಾತೀತಾರೂಪೋ ಭವೇತ್ ಇತಿ ದ್ವಿತೀಯಃ ||೩||

ಅಥ ಶಕ್ತಿಕಾದ್ವಯ ಪುಟಿತಾಂ ಮಾತೃಕಾಂ ಮಾತೃಕಾ ಪುಟಿತಾಂ ತಾಂ ನ್ಯಸೇತ್ । ತುರ್ಯಾರೂಪೋ ಭವೇತ್ । ತೃತೀಯಕಲಾರೂಪೋ ಭವೇತ್ ||೪||

ಕಾಲಸಂಕಲನಾತ್ಕಾಲೀ । ಸಹೇಲಂ ಸಲೀಲಂ ವಾ ಸ್ಮರಣಾದ್ವರದಾನೇಷು ಚತುರಾ । ತೇನೇಯಂ ದಕ್ಷಿಣಾ । ಸಂಬೋಧನದ್ವಯಪುಟಿತಾಂ ಮಾತೃಕಾಂ ಮಾತೃಕಾಪುಟಿತಂ ನಾಮದ್ವಯಂ ಲಿಪಿಸ್ಥಾನೇ ನ್ಯಸೇತ್ । ತುರ್ಯಾತ್ಪರಾರೂಪೋ ಭವೇತ್ । ಚತುರ್ಥೀಕಲಾರೂಪೋ ಭವೇತ್ । ಲೋಕಪಾಲಸಂವಾದಿನೀ ಚತುರ್ಥೀ ||೫||

ಅಥ ಪಂಚಮೀಂ ಕಲಾಂ ನ್ಯಸೇತ್ । ಪಂಚಮೀಕಲಾರೂಪೋ ಭವೇತ್ । ಸುಭಗಾತ್ರಯಂ ಕೂರ್ಚವಹ್ನಿಲಲನಾಂ ವಹ್ನೇಸ್ತ್ರೀಕೋಣ ದೈವತಸ್ಯ ಲಾಲನಾಚ್ಛ್ರೀಕಂಠರೂಪಸ್ತುರ್ಯಾ ಪರಾತೀತಾ । ಏತತ್ಪುಟಿತ ಮಾತೃಕಾ ಪುಟಿತ ಮೇತನ್ಮಂತ್ರಂ ಮಾತೃಕಾಸ್ಥಾನೇ ನ್ಯಸೇದಿತಿ ಪಂಚಮೀ । ಶಿವತ್ವಂ ಗಚ್ಛತಿ । ಸ ಸರ್ವರೂಪೋ ಭವೇತ್ ||೬||

ಮತ್ತೆ ಮಾತೃಕೆಯನ್ನು ಐಂ, ಶ್ರೀಂ ಎಂಬ ಬೀಜಾಕ್ಷರರೂಪವಾದ ತಾರಾದ್ವಯದಿಂದ ಸಂಪುಟಿತವನ್ನಾಗಿಯೂ ತಾರಾದ್ವಯವನ್ನು ಮಾತೃಕೆಯಿಂದ ಸಂಪುಟಿತವನ್ನಾಗಿಯೂ ಉಚ್ಚರಿಸಿ ನ್ಯಾಸಮಾಡಬೇಕು. ಇದರಿಂದ ಪರಾತೀತ ಕಲಾತ್ಮಕನಾಗುವನು. ಇದು ಎರಡನೆಯ ನ್ಯಾಸವು. ||೩||

ಮತ್ತೆ ಶಕ್ತಿಕಾ ಎಂದರೆ ಏಕಾರವು. ಎರಡು ಶಕ್ತಿಕಾ ಬೀಜಾಕ್ಷರಗಳಿಂದ ಸಂಪುಟಿತವಾದ ಮಾತೃಕೆಯನ್ನೂ ಮಾತೃಕೆಯಿಂದ ಸಂಪುಟಿತವಾದ ಶಕ್ತಿ ಬೀಜಾಕ್ಷರಗಳನ್ನೂ ನ್ಯಾಸ ಮಾಡಿದರೆ ತೃತೀಯ ಕಲಾತ್ಮಕವಾದ ತುರ್ಯಾ ಸ್ವರೂಪವನ್ನೇ ಹೊಂದುತ್ತಾನೆ. ಇದು ಮೂರನೆಯ ನ್ಯಾಸವು. ||೪||

ಮುಂದೆ ದಕ್ಷಿಣೇ ಕಾಲಿಕೇ ಎಂಬ ದೇವಿಯ ಸಂಬೋಧನ ಶಬ್ದಗಳನ್ನು ಮಾತೃಕೆಗಳಿಂದ ಜೋಡಿಸಿ ನ್ಯಾಸಮಾಡಬೇಕೆಂದು ವಿಧಿಸಲ್ಪಡುತ್ತದೆ. ಆದಕ್ಕೆ ಮೊದಲು ಆ ಶಬ್ದಗಳ ಅವಯವಾರ್ಥವನ್ನು ಈ ರೀತಿಯಾಗಿ ತಿಳಿಯಬೇಕು. ಕಲಾ ಕಾಷ್ಠಾ ಮುಂತಾದ ಕಾಲವಿಭಾಗವನ್ನೆಲ್ಲ ಏರ್ಪಡಿಸಿರುವುದರಿಂದ ಕಾಲೀ ಎಂಬ ಹೆಸರು ಬಂದಿದೆ. ಹಾಗೆಯೇ ಮುಖ್ಯ ತತ್ಪರತೆಯಿಲ್ಲದೆ ಲೀಲಾ ವಿಲಾಸಗಳಿಂದ ದೇವಿಯನ್ನು ಸ್ಮರಿಸಿದವರಿಗೆ ಕೂಡ ಇಷ್ಟಾರ್ಥಗಳನ್ನು ವರಪ್ರದಾನಮಾಡುವುದರಲ್ಲಿ ಚತುರಳಾದ್ದರಿಂದ ದಕ್ಷಿಣಾ ಎಂಬ ವಿಶೇಷಣವು ಬಂದಿದೆ. ಈ ದಕ್ಷಿಣೇ ಕಾಲಿಕೇ ಎಂಬ ಸಂಬೊಧನಾತ್ಮಕವಾದ ನಾಮದ್ವಯದಿಂದ ಸಂಪುಟಿತವಾದ ಮಾತೃಕೆಯನ್ನೂ ಮಾತೃಕಾ ಸಂಪುಟಿತವಾದ ಸಂಬೋಧನ ನಾಮದ್ವಯವನ್ನೂ ಮಾತೃಕಾಸ್ಥಾನದಲ್ಲಿ ನ್ಯಾಸ ಮಾಡಬೇಕು. ಇದರಿಂದ ತುರ್ಯಾತ್ಪರಾ ಸ್ವರೂಪವಾದ ದೇವೀ ಕಲೆಯ ಐಕ್ಯವನ್ನು ಹೊಂದುವನು. ಈ ಕಲೆಯು ದೇವಿಯ ಅಂಶಗಳಲ್ಲಿ ನಾಲ್ಕನೆಯದೂ ಲೋಕಪಾಲಕರ ಐಶ್ವರ್ಯ ಮಹಿಮೆಯನ್ನು ಹೋಲುವುದೂ ಆಗಿದೆ. ಇದು ನಾಲ್ಕನೆಯ ನ್ಯಾಸವು. ||೫||

ಅನಂತರದಲ್ಲಿ ಐದನೆಯ ಕಲೆಯ ನ್ಯಾಸವನ್ನಾಚರಿಸಬೇಕು. ಅದರಿಂದ ಆ ಕಲೆಯ ಸಾರೂಪ್ಯವನ್ನು ಹೊಂದುವನು. ಸುಭಗಾ ಎಂದರೆ ಕ್ರೀಂ ಎಂಬ ವರ್ಣವು. ಮೂರು ಕ್ರೀಂಕಾರಗಳನ್ನೂ ಹೂಂ ವರ್ಣವನ್ನೂ ಸ್ವಾಹಾ ಶಬ್ದವನ್ನೂ ಧ್ಯಾನಪೂರ್ವಕವಾಗಿ ಜಪಿಸುವುದು. ತ್ರಿಕೋಣಮಂಡಲಾಭಿಮಾನಿದೇವತೆಯಾದ ಅಗ್ನಿಯನ್ನು ಲಾಲನ ಮಾಡಿದಂತಾಗುವುದರಿಂದ ಆ ವರ್ಣರಾಶಿಯು ಶಿವಸ್ವರೂಪವೂ ನಾಲ್ಕನೆಯದೂ ಆದ ಪರಾತೀತಾ ಎಂಬ ಕಲೆಯು. ಇದರಿಂದ ಸಂಪುಟಿತವಾದ ಮಾತೃಕೆಯನ್ನೂ ಮಾತೃಕೆಯಿಂದ ಸಂಪುಟಿತವಾದ ಈ ಮಂತ್ರವನ್ನೂ ಮಾತೃಕಾಸ್ಥಾನದಲ್ಲಿ ನ್ಯಾಸಮಾಡುವುದು ಪಂಚಮಕಲಾನ್ಯಾಸವು. ಇದರಿಂದ ಶಿವಸ್ವರೂಪವನ್ನು ಹೊಂದುತ್ತಾನೆ. ಮತ್ತು ಸರ್ವಾತ್ಮಕನಾಗುತ್ತಾನೆ. ||೬||

ಅಥ ಷಷ್ಠೀಂ ಕಲಾಂ ನ್ಯಸೇತ್ । ಪೂರ್ಣಾಂ ವಿದ್ಯಾರಾಜ್ಞೀಂ ಲಿಪಿ ಸ್ಥಾನೇ ನ್ಯಸೇದ್ವ್ಯಾಪಯೇತ್ । ಸ ಶಿವೋ ಭವೇತ್ । ಸ ಸರ್ವಜ್ಞತ್ವಂ ಗಚ್ಛತಿ । ಸ ಕವಿರ್ಭವೇತ್ । ಸ ಸನ್ನ್ಯಾಸೀ ಭವೇತ್ । ದೇವೋ ಹ ವೈ ಭವೇತ್ । ವಿಶ್ವರೂಪೋ ಭವೇತ್ । ಅಯುತಂ ನ್ಯಸೇತ್ । ಋಷಿಚ್ಛಂದಾದಿ ಪೂರ್ವವದ್ಭವೇತ್ । ಬ್ರಹ್ಮಾಂಡಗೋಲಕೇಽಪಿ ಯಾ ಜಗತೀತಲೇ ತಾಂ ಸರ್ವಾಂ ಭುನಕ್ತಿ । ಯಸ್ಯಾಃ ಸ್ಮರಣಾತ್ ಸಿದ್ಧೋ ನಿದೇಶವರ್ತೀ ಚ ಭವೇತ್ ತಾಂ ನ್ಯಸೇತ್ । ನ್ಯಸನಂ ನ್ಯಾಸಃ । ಸಮ್ಯಕ್ ನ್ಯಾಸಃ ಸನ್ನ್ಯಾಸಃ । ನ ತು ಮುಂಡಿತಮುಂಡಃ । ತಸ್ಯ ದೇವಾದಯೋ ನಮಸ್ಯಂತೀತಿ ಪ್ರೋತಂ ವೇದ । ಓಂ ಶಿವಮ್ ॥೭॥

**ಇತಿ ಗುಹ್ಯಷೋಢಾನ್ಯಾಸೋಪನಿಷತ್ ಸಮಾಪ್ತಾ.**



ಪಂಚಮ ಕಲಾ ನ್ಯಾಸಾನಂತರದಲ್ಲಿ ಆರನೆಯ ಕಲೆಯನ್ನು ನ್ಯಾಸಮಾಡಬೇಕು. ಸಂಪೂರ್ಣ ವಿದ್ಯಾರಾಜ್ಞೀ ಮಂತ್ರವನ್ನು ಮಾತೃಕಾಸ್ಥಾನದಲ್ಲಿ ನ್ಯಾಸಮಾಡಬೇಕು. ಮತ್ತು ವ್ಯಾಪಕನ್ಯಾಸವನ್ನು ಆಚರಿಸಿದುದರ ಫಲವಾಗಿ ದೇವೀಸ್ವರೂಪವನ್ನು ತನ್ನ ಸಕಲ ಶರೀರದಲ್ಲಿಯೂ ವ್ಯಾಪಿಸಿರುವಂತೆ ಭಾವನೆಮಾಡಬೇಕು. ಅಂತಹ ಉಪಾಸಕನು ಶಿವಸ್ವರೂಪನಾಗುವನು. ಸರ್ವಜ್ಞತ್ವವನ್ನು ಹೊಂದುವನು. ಕವಿತಾಶಕ್ತಿಯನ್ನು ಹೊಂದುವನು. ಮತ್ತು ಅಂತಹ ಉಪಾಸಕನು ಪರಮಾರ್ಥ ಸನ್ನ್ಯಾಸಿಯಾಗಿ ದೇವತಾಸ್ವರೂಪವನ್ನೇ ಹೊಂದುವನಲ್ಲದೇ ವಿಶ್ವಾತ್ಮಕನೂ ಆಗುವನು. ಈ ನ್ಯಾಸವನ್ನು ಅಯುತ (ದಶಸಹಸ್ರ) ಸಂಖ್ಯೆಯಲ್ಲಿ ಆಚರಿಸುವುದು ವಿಶೇಷವಾದ ಪುರುಷಾರ್ಥಪ್ರದವು. ನ್ಯಾಸಾದಿಯಲ್ಲಿ ಪಠಿಸಬೇಕಾದ ಋಷಿ, ಛಂದಸ್ಸು ಮೊದಲಾದುದನ್ನು ಹಿಂದಿನ ಉಪನಿಷತ್ತಿನಲ್ಲಿರುವಂತೆಯೇ ತಿಳಿಯಬೇಕು. ಈ ಕ್ರಮದಲ್ಲಿ ದೇವಿಯ ಉಪಾಸನಾ ತತ್ಪರನಾಗಿರುವ ಭಕ್ತಶ್ರೇಷ್ಠನು ಸಂಪೂರ್ಣ ಬ್ರಹ್ಮಾಂಡದ ಭೂಮಂಡಲದಲ್ಲಿ ಎಂತಹ ಉತ್ತಮ ಭೋಗ್ಯವ್ಯಕ್ತಿಯಲ್ಲಿ ಆದರೂ ಭೋಗಸೌಖ್ಯವನ್ನು ಅನುಭವಿಸುವನು. ಯಾವ ದೇವಿಯ ಸ್ಮರಣಮಾತ್ರದಿಂದ ಭಕ್ತನು ಸಕಲಸಿದ್ಧಿಸಂಪೂರ್ಣನೂ ಸಮಸ್ತಪ್ರಾಣಿಗಳಿಗೂ ಶಿರಸ್ಸಿನಿಂದ ಧಾರ್ಯವಾದ ಆಜ್ಞಾಧಾರಕನೂ ಆಗುವನೋ ಅಂತಹ ದೇವಿಯನ್ನು ಮಂತ್ರನ್ಯಾಸಮೂಲಕವಾಗಿ ತನ್ನ ಶರೀರದಲ್ಲಿ ನ್ಯಾಸಮಾಡಬೇಕು. ಸಾಂಗನ್ಯಾಸದ ಆಚರಣೆಯೇ ನ್ಯಾಸಶಬ್ದದಿಂದ ಹೇಳಲ್ಪಡುವುದು. ಈ ನ್ಯಾಸವಿಧಿಯಲ್ಲಿ ಅಲ್ಪವೂ ಲೋಪಬರದಂತೆ ಸಾಂಗವಾಗಿ ಅನುಷ್ಠಾನ ಮಾಡುವ ನ್ಯಾಸವು (ಸಮ್ಯಕ್ + ನ್ಯಾಸ = ಸನ್ನ್ಯಾಸ) ಸನ್ನ್ಯಾಸವೆಂದು ಕರೆಯಲ್ಪಡುವುದು. ನ್ಯಾಸದ ಜ್ಞಾನವಿಲ್ಲದೆ ಶಿರವನ್ನು ಸಂಪೂರ್ಣ ಮುಂಡನ ಮಾಡಿಸಿಕೊಂಡಿರುವುದು ಸನ್ನ್ಯಾಸವಲ್ಲ. ನ್ಯಾಸಾನುಷ್ಠಾನ ತತ್ಪರನಾಗಿ ಸಿದ್ಧಿಯನ್ನುಳ್ಳ ಭಕ್ತನಿಗೆ ದೇವಾದಿಗಳು ಕೂಡ ನಮಸ್ಕರಿಸುವರು. ಇದೆಲ್ಲ ಮಹಿಮೆಯೂ ಯಥಾವಿಧಿಯಾಗಿ ಸಾಂಗನ್ಯಾಸದಿಂದ ಲಭಿಸುವುದು. ಉಪನಿಷತ್ತಿನಲ್ಲಿ ಪ್ರತಿಪಾದಿತವಾದ ಈ ನ್ಯಾಸವಿಧಿಯ ಜ್ಞಾನಮಾತ್ರವೂ ಕೂಡ ಅನುಷ್ಠಾನದಂತೆ ಮಹಾಫಲದಾಯಕವಾಗಿದೆ. "ಓಂ ಶಿವಂ" ಎಂದು ಉಪನಿಷತ್ತಿನ ಸಮಾಪ್ತಿಯಲ್ಲಿ ಮಾಡಿದ ನಿಖಿಲ ಮಂಗಲಮೂರ್ತಿಯ ನಾಮಸ್ಮರಣವು. ||೭||

**ಗುಹ್ಯಷೋಢಾನ್ಯಾಸೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.**



|| ಶ್ರೀರಸ್ತು ||

## || ಪೀತಾಂಬರೋಪನಿಷತ್ ||

---

ಓಂ ಅಥ ಹೈನಾಂ ಬ್ರಹ್ಮರಂಧ್ರೇ ಸುಭಗಾಂ ಬ್ರಹ್ಮಾಸ್ತ್ರ ಸ್ವರೂಪಿಣೀ-ಮಾಪ್ನೋತಿ ||೧||

ಬ್ರಹ್ಮಾಸ್ತ್ರಾಂ ಮಹಾವಿದ್ಯಾಂ ಶಾಂಭವೀಂ ಸರ್ವಸ್ತಂಭಕರೀಂ ಸಿದ್ಧಾಂ ಚತುರ್ಭುಜಾಂ ದಕ್ಷಾಭ್ಯಾಂ ಕರಾಭ್ಯಾಂ ಮುದ್ಗರಪಾಶೌ ವಾಮಾಭ್ಯಾಂ ಶತ್ರುಜಿಹ್ವಾವಜ್ರೇ ದಧಾನಾಂ ಪೀತವಾಸಸಂ ಪೀತಾಲಂಕಾರಸಂಪನ್ನಾಂ ದೃಢೀಭೂತಪೀನೋನ್ನತಪಯೋಧರಯುಗ್ಮಾಢ್ಯಾಂ ತಪ್ತಕಾರ್ತಸ್ವರ ಕುಂಡಲದ್ವಯವಿರಾಜಿತ ಮುಖಾಂಭೋಜಾಂ ಲಲಾಟಪಟ್ಟೋಲ್ಲಸತ್ಪೀತ ಚಂದ್ರಾರ್ಧಮನುಬಿಭ್ರತೀಮುದ್ಯದ್ದಿವಾಕರೋದ್ಯೋತಾಂ ಸ್ವರ್ಣ ಸಿಂಹಾಸನಮಧ್ಯಕಮಲಸಂಸ್ಥಾಂ ಧಿಯಾ ಸಂಚಿಂತ್ಯ ತದುಪರಿ ತ್ರಿಕೋಣ ಷಟ್ಕೋಣ ವಸುಪತ್ರವೃತ್ತಾಂತಃ ಷೋಡಶದಲಕಮಲೋಪರಿ ಭೂಬಿಂಬ ತ್ರಯಮನುಸಂಧಾಯ ತತ್ರಾದ್ಯಯೋರ್ನ್ಯಂತರೇ ದೇವೀಮಾಹೂಯ ಧ್ಯಾಯೇತ್ ||೨||

|| ಶ್ರೀಃ ||

# ಪೀತಾಂಬರೋಪನಿಷತ್ತಿನ ಕನ್ನಡ ಅನುವಾದವು.

---

ಪೀತಾಂಬರೋಪನಿಷತ್ತು ಎಂಬುದು ಶಾಕ್ತೋಪನಿಷತ್ತುಗಳಲ್ಲಿ ಒಂದಾಗಿದೆ. ಆದರಲ್ಲಿ ಮೊದಲು ಉಪಾಸನೆಯ ಫಲವನ್ನು ಸಂಗ್ರಹವಾಗಿ ಹೇಳಿದೆ. ಬ್ರಹ್ಮರಂಧ್ರ ಸ್ಥಾನದಲ್ಲಿ ಕ್ರೀಂ ಎಂಬ ದೇವೀ ಮಾತೃಕಾ ಬೀಜವನ್ನು ಧ್ಯಾನಿಸಲಾಗಿ ಆ ಬೀಜ ಮಂತ್ರವು ಬ್ರಹ್ಮಾಸ್ತ್ರರೂಪವಾಗಿ ಉಪಾಸಕನಿಗೆ ಅಂತರಾಯಗಳನ್ನುಂಟುಮಾಡುವ ಶತ್ರುಜನಕ್ಕೆ ವಿವಿಧ ಪೀಡೆಯನ್ನುಂಟುಮಾಡುವುದು. ಆದ್ದರಿಂದ ಬ್ರಹಾಸ್ತ್ರ ಸಿದ್ಧಿಯನ್ನು ಈ ಉಪನಿಷದುಕ್ತವಾದ ಉಪಾಸನಾವಿಧಿಯು ಕೊಡುವುದು. ||೧||

ಇಲ್ಲಿ ದೇವಿಯನ್ನು ಉಪಾಸನೆ ಮಾಡುವ ಒಂದು ಪ್ರಯೋಗ ವಿಶೇಷವು ಪ್ರತಿಪಾದ್ಯವಾಗಿದೆ. ಇದಕ್ಕೆ ಒಂದು ಯಂತ್ರವನ್ನು ಬರೆದು ಅದರಲ್ಲಿ ದೇವಿಯನ್ನು ಭಜಿಸಬೇಕು. ಮೊದಲು ದೇವಿಯ ವಿಗ್ರಹವನ್ನು ಮನಸ್ಸಿನಲ್ಲಿ ಸ್ಮರಣಮಾಡುವುದು ಆವಶ್ಯಕವಾದ್ದರಿಂದ ಸ್ಮರಣೀಯವಾದ ದೇವೀ ಆಕಾರವನ್ನು ವರ್ಣಿಸಿದೆ. ಬ್ರಹ್ಮಾಸ್ತ್ರ ಸ್ವರೂಪಳೂ, ಶಾಂಭವೀ ಮಹಾವಿದ್ಯಾತ್ಮಕಳೂ, ಸರ್ವವನ್ನೂ ಸ್ತಂಭನ ಮಾಡುವ ಶಕ್ತಿಯುಳ್ಳವಳೂ, ಸಿದ್ಧಳೂ, ಚತುರ್ಭುಜಗಳಿಂದ ಕೂಡಿದವಳೂ, ಎರಡು ಬಲಗೈಗಳಿಂದ ಪಾಶ, ಮುದ್ಗರಗಳನ್ನೂ, ಎಡಭಾಗದ ಎರಡು ಕೈಗಳಿಂದ ವಜ್ರ, ಶತ್ರುಜಿಹ್ವೆಗಳನ್ನು ಧರಿಸಿದವಳೂ, ಹೊಂಬಣ್ಣದ ವಸ್ತ್ರ–ಅಲಂಕಾರಗಳಿಂದ ಅಲಂಕೃತಳೂ, ಕಠಿನ–ಸ್ಥೂಲ–ಉನ್ನತಗಳಾದ ಸ್ತನಯುಗ್ಮದಿಂದ ಶೋಭಿತಳೂ, ಸುತಪ್ತ ಸುವರ್ಣಮಯವಾದ ಕರ್ಣಕುಂಡಲಯುಗ್ಮದಿಂದ ಶೋಭಿಸುವ ಕಮಲದಂತಿರುವ ಮುಖವುಳ್ಳವಳೂ ವಿಸ್ತಾರವಾದ ಲಲಾಟದ ಮಧ್ಯದಲ್ಲಿ ಹೊಳೆಯುವ ಅರ್ಧಚಂದ್ರನನ್ನು ಧರಿಸಿದವಳೂ, ಉದಯಿಸುತ್ತಿರುವ ಸೂರ್ಯನಂತೆ ಥಳಥಳಿಸುವವಳೂ, ಸ್ವರ್ಣಮಯ ಸಿಂಹಾಸನದ ಮಧ್ಯದಲ್ಲಿರುವ ಕಮಲದಲ್ಲಿ ವಾಸಿಸುವವಳೂ ಆದ ದೇವಿಯನ್ನು ಮನಸ್ಸಿನಲ್ಲಿ ಚಿಂತಿಸಬೇಕು. ಅನಂತರದಲ್ಲಿ ತ್ರಿಕೋಣ, ಷಟ್ಕೋಣ, ಅಷ್ಟದಲ, ವೃತ್ತಾಕಾರಗಳಿಂದ ಗರ್ಭಿತವಾದ ಬಾಹ್ಯ ಷೋಡಶದಲ ಕಮಲದ ಸುತ್ತಲೂ ಮೂರು ಭೂಬಿಂಬಗಳನ್ನು ಅನುಸಂಧಾನಮಾಡಿ ಅಂತಹ ಭಾವನಾತ್ಮಕ ಯಂತ್ರದಲ್ಲಿ ಮೊದಲಿನ ತ್ರಿಕೋಣಮಧ್ಯದಲ್ಲಿ ದೇವಿಯನ್ನು ಕರೆದು ಧ್ಯಾನಿಸಬೇಕು. ||೨||

ಯೋನಿಂ ಜಗದ್ಯೋನಿಂ ಸಮಾಯಮುಚ್ಚಾರ್ಯ ಶಿವಾಂತೇ ಭೂಮಾಗ್ರಬಿಂದುಮಿಂದುಖಂಡಮಗ್ನಿಬೀಜಂ ತತೋ ವರುಣಾಂಕ ಗುಣಾರ್ಣಮತ್ರಿಯುತಂ ಸ್ಥಿರಾಮುಖಿ ಇತಿ ಸಂಬೋಧ್ಯ ಸರ್ವದುಷ್ಟಾನಾ ಮಿದಂ ಚಾಭಾಷ್ಯ ವಾಚಮಿತಿ ಮುಖಮಿತಿ ಪದಮಿತಿ ಸ್ತಂಭಯೇತಿ ಪ್ರೋಚ್ಚಾರ್ಯ ಜಿಹ್ವಾಂ ವೈಶಾರದೀಂ ಕೀಲಯೇತಿ ಬುದ್ಧಿಂ ವಿನಾಶಯೇತಿ ಪ್ರೋಚ್ಚಾರ್ಯ ಭೂಮಾಯಾಂ ವೇದಾದ್ಯಂ ತತೋ ಯಜ್ಞಭೂ ಗುಹಾಯಾಂ ಯೋಜಯೇತ್ ॥೩॥

ಸ ಮಹಾಸ್ತಂಭೇಶ್ವರಃ ಸರ್ವೇಶ್ವರಃ । ಸ ಸೇನಾಸ್ತಂಭಂ ಕರೋತಿ । ಕಿಂ ಬಹುನಾ ವಿವಸ್ವದ್ಧೃತಿಸ್ತಂಭಕರ್ತಾ ಸರ್ವವಾತಸ್ತಂಭಕರ್ತೇತಿ । ಕಿಂ ದಿವಾಕರ್ಷಯತಿ । ಸ ಸರ್ವವಿದ್ಯೇಶ್ವರಃ ಸರ್ವಮಂತ್ರೇಶ್ವರೋ ಭೂತ್ವಾ ಪೂಜಾಯಾ ಆವರ್ತನಂ ತ್ರೈಲೋಕ್ಯಸ್ತಂಭಿನ್ಯಾಃ ಕುರ್ಯಾತ್ ॥೪॥

ಅಂಗಮಾದ್ಯಂ ದ್ವಾರತೋ ಗಣೇಶಂ ವಟುಕಂ ಯೋಗಿನೀಂ ಕ್ಷೇತ್ರಾಧೀಶಂ ಚ ಪೂರ್ವಾದಿಕಮಭ್ಯರ್ಚ್ಯ ಗುರುಪಂಕ್ತಿಮಾಶಾಸುರಾಂತಮಂತಃ ಪ್ರಾಚ್ಯಾದೌ ಕ್ರಮಾನುಗತಾ ಬಗಲಾ ಸ್ತಂಭಿನೀ ಜೃಂಭಿಣೀ ಮೋಹಿನೀ ವಶ್ಯಾ ಅಚಲಾ ಚಲಾ ದುರ್ಧರಾ ಅಕಲ್ಮಷಾ ಆಧಾರಾ ಕಲ್ಪನಾ ಕಾಲ ಕರ್ಷಿಣೀ ಭ್ರಮರಿಕಾ ಮದಗಮನಾ ಭೋಗಾ ಯೋಗಿಕಾವಿತಾಹ್ಯಷ್ಟ ದಲಾನುಗತಾಃ ಪೂಜ್ಯಾಃ । ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ

ಜಪಿಸಬೇಕಾದ ಮಂತ್ರವು ಈ ರೀತಿಯಾಗಿದೆ. ಯೋನಿ = ಓಂಕಾರವು. ಸಮೂಯವಾದ ಜಗದ್ಯೋನಿ ಎಂಬ ಪದದ ಅರ್ಥವನ್ನು ಶಿವಾಂತೇ ಮುಂತಾದ ಮುಂದಿನ ವಾಕ್ಯವು ವಿವರಿಸಿದೆ. ಅದರಿಂದ ಲಭ್ಯವಾಗುವ ಅಂಶ "ಹ್ಲೀಂ" ಎಂಬುದಾಗಿದೆ. ಅದಷ್ಟನ್ನು ಸೇರಿಸಿ ಮುಂದೆ ಸ್ಥಿರಾಮುಖಿ ಎಂಬ ಸಂಬೋಧನವನ್ನುಚ್ಚರಿಸಿ ಅದರ ಮುಂದೆ ಸರ್ವದುಷ್ಟಾನಾಂ ವಾಚಂ, ಮುಖಂ, ಪದಂ ಸ್ತಂಭಯ ಎಂಬುದನ್ನೂ ಜಿಹ್ವಾಂ ವೈಶಾರದೀಂ ಕೀಲಯ ಎಂಬುದನ್ನೂ ಬುದ್ಧಿಂ ವಿನಾಶಯ ಎಂಬ ಅಂಶವನ್ನೂ ಕ್ರಮವಾಗಿ ಉಚ್ಚರಿಸಿ ಹ್ಲೀಂ, ಓಂ, ಸ್ವಾಹಾ ಎಂಬ ಅಂಶದಿಂದ ಸಮಾಪ್ತಿಗೊಳಿಸಿದರೆ ಈ ಸಮಗ್ರಮಂತ್ರಸ್ವರೂಪವು ಲಭಿಸುತ್ತದೆ. ಓಂ, ಹ್ಲೀಂ, ಸ್ಥಿರಾಮುಖಿ ಸರ್ವದುಷ್ಟಾನಾಂ ವಾಚಂ ಮುಖಂ ಪದಂ ಸ್ತಂಭಯ ಜಿಹ್ವಾಂ ವೈಶಾರದೀಂ ಕೀಲಯ ಬುದ್ಧಿಂ ವಿನಾಶಯ ಹ್ಲೀಂ ಓಂ ಸ್ವಾಹಾ ಎಂಬುದು ಸಂಪೂರ್ಣಮಂತ್ರವು. ||೩||

ಈ ಮಂತ್ರವನ್ನು ವಿಧಿವತ್ತಾಗಿ ಉಪಾಸನೆ ಮಾಡಿದವನು ಸರ್ವವನ್ನೂ ಸ್ತಂಭನಮಾಡುವ ಶಕ್ತಿಯಿಂದ ಕೂಡಿದ ಸರ್ವೇಶ್ವರನಾಗುವನು. ಅವನು ಸೇನಾಸ್ತಂಭನವನ್ನು ಮಾಡುವ ಶಕ್ತಿಯನ್ನು ಹೊಂದುವನು. ಇದರಿಂದಾಗುವ ಸ್ತಂಭನ ಫಲಗಳನ್ನು ಹೆಚ್ಚಾಗಿ ವರ್ಣಿಸಿ ಪ್ರಯೋಜನವೇನು ? ಸೂರ್ಯನ ಸ್ತಂಭನವನ್ನೂ ಗಾಳಿಯ ಸ್ತಂಭನವನ್ನೂ ಮಾಡುವ ಸಾಮರ್ಥ್ಯ ಸಂಪನ್ನನಾಗುವನು. ಹೀಗೆ ಸೂರ್ಯಸ್ತಂಭನವನ್ನು ಮಾಡಿ ಯಾವಾಗಲೂ ಹಗಲು ಸಮಯವೇ ಇರುವಂತೆ ಮಾಡಬಲ್ಲನು. ಸ್ತಂಭನಶಕ್ತಿ ಎಂಬ ಫಲವನ್ನು ಮಾತ್ರ ಹೊಂದುವುದಲ್ಲದೇ ಸರ್ವವಿದ್ಯೆಗಳಿಗೆ ಈಶ್ವರನೂ ಎಲ್ಲ ಮಂತ್ರಗಳಿಗೆ ಅಧಿಪತಿಯೂ ಆಗುವನು. ಇಂತಹ ಮಹಾಫಲಗಳನ್ನು ಅನುಗ್ರಹಿಸುವ ತ್ರೈಲೋಕ್ಯಸ್ತಂಭನಶಕ್ತಿ ಸ್ವರೂಪಳಾದ ದೇವಿಯ ಮಹಾಮಹಿಮಾಯುತವಾದ ಮಂತ್ರೋಪಾಸನೆಯನ್ನು ಪುನಃ ಪುನಃ ಆವೃತ್ತಿ ಸಹಿತವಾಗಿ ಆಚರಿಸಬೇಕು. ||೪||

ಪೂಜಾನುಷ್ಠಾನಕ್ರಮದಲ್ಲಿ ಮೊದಲು ನಿತ್ಯಾಹ್ನಿಕಕ್ರಿಯಾದಿ ಅಂಗಗಳನ್ನಾಚರಿಸಿ ಪೂರ್ವಾದಿದ್ವಾರಗಳಲ್ಲಿ ಗಣೇಶ, ವಟುಕ, ಯೋಗಿನೀ, ಕ್ಷೇತ್ರಪತಿ, ದೇವತೆಗಳನ್ನು ಪೂಜಿಸಿ ಗುರುಪಂಕ್ತಿಯನ್ನು ಆರಾಧಿಸಿ ಪೂರ್ವಾದಿದಿಕ್ಕುಗಳಲ್ಲಿ ಕ್ರಮವಾಗಿ ಮುಂದೆ ಹೇಳುವಂತೆ ನಾಮಮಂತ್ರಗಳಿಂದ ಆಯಾಯ ಶಕ್ತಿದೇವತೆಗಳನ್ನು ಆವಾಹಿಸಿ ಪೂಜಿಸಬೇಕು. ಪೂಜಿಸಲ್ಪಡುವ ದೇವತಾನಾಮಗಳು :— ಬಗಲಾ, ಸ್ತಂಭಿನೀ, ಜೃಂಭಿಣೀ, ಮೋಹಿನೀ, ವಶ್ಯಾ, ಅಚಲಾ, ಚಲಾ, ದುರ್ಧರಾ, ಅಕಲ್ಮಷಾ, ಆಧಾರಾ, ಕಲ್ಪನಾ, ಕಾಲಕರ್ಷಿಣೀ, ಭ್ರಮರಿಕಾ, ಮದಗಮನಾ, ಭೋಗಾ, ಯೋಗಿಕಾ ಎಂಬುವಾಗಿವೆ. ಮತ್ತು ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ,

ವಾರಾಹೀ ನಾರಸಿಂಹೀ ಚಾಮುಂಡಾ ಮಹಾಲಕ್ಷ್ಮೀಶ್ಚ । ಷಡ್ಯೋನಿ ಗರ್ಭಾಂತಾ ಡಾಕಿನೀ ರಾಕಿನೀ ಲಾಕಿನೀ ಕಾಕಿನೀ ಶಾಕಿನೀ ಹಾಕಿನೀ ವೇದಾದ್ಯಸ್ಥಿರಮಾಯಾದ್ಯಾಃ ಸಮಭ್ಯರ್ಚ್ಯ ಶಕ್ರಾಗ್ನಿಯಮನಿರ್ಋತಿ ವರುಣವಾಯುವ್ಯ ಧನದೇಶಾನ ಪ್ರಜಾಪತಿನಾಗೇಶಾಃ ಪರಿವಾರಾಭಿ ಮತಾಃ ಸ್ಥಿರಾದಿವೇದಾದ್ಯಾಃ ಸವಾಹನಾಃ ಸದಸ್ತ್ರಕಾ ಬಾಹ್ಯತೋಭ್ಯರ್ಚ್ಯ ತಾಂ ಯೋನಿಂ ರತಿಪ್ರೀತಿ ಮನೋಭವಾ ಏತಾಃ ಸರ್ವಾಃ ಸಮಾಃ ಪೀತಾಂ ಶುಕಾ ಧ್ಯೇಯಾಃ । ತದಂತಮೂಲಾಯಾಂ ಬಲಾದಿ ಷೋಡಶಾನು ಗತಾಃ ಪೂಜ್ಯಾ ನೀರಾಜನೈಃ ॥೫॥

ಸಹೈಶ್ವರ್ಯಯುಕ್ತೋ ಭವತಿ । ಯ ಏನಾಂ ಧ್ಯಾಯತಿ ಸ ವಾಗ್ಮೀ ಭವತಿ । ಸೋಮೃತಮಶ್ನುತೇ । ಸರ್ವಸಿದ್ಧಿಕರ್ತಾ ಭವತಿ । ಸೃಷ್ಟಿಸ್ಥಿತಿ ಸಂಹಾರಕರ್ತಾ ಭವತಿ । ಸ ಸರ್ವೇಶ್ವರೋ ಭವತಿ । ಸ ತು ಋದ್ಧೀಶ್ವರೋ ಭವತಿ । ಸ ಶಾಕ್ತಃ ಸ ವೈಷ್ಣವಃ ಸ ಗಣಪಃ ಸ ಶೈವಃ । ಸ ಜೀವನ್ಮುಕ್ತೋ ಭವತಿ । ಸ ಸನ್ನ್ಯಾಸೀ ಭವತಿ । ನ್ಯಸನಂ ನ್ಯಾಸಃ । ಸಮ್ಯಙ್ನ್ಯಾಸಃ ಸನ್ನ್ಯಾಸಃ । ನ ತು ಮುಂಡಿತ ಮುಂಡಃ । ಷಟ್ತ್ರಿಂಶದಸ್ತ್ರೇಶ್ವರೋ ಭವೇತ್ ಸೌಭಾಗ್ಯಾರ್ಜನೇನೇತಿ ಪ್ರೋಕ್ತಂ ವೇದ । ಓಂ ಶಿವಮ್ ॥೬॥

**ಇತಿ ಪೀತಾಂಬರೋಪನಿಷತ್ ಸಮಾಪ್ತಾ.**



ನಾರಸಿಂಹೀ, ಚಾಮುಂಡಾ, ಮಹಾಲಕ್ಷ್ಮೀ ಎಂಬ ಎಂಟು ಮಾತೃದೇವಿಯರನ್ನೂ ಯಂತ್ರದ ಅಷ್ಟಪತ್ರಗಳಲ್ಲಿ ಪೂಜಿಸಬೇಕು. ಯೋನಿಮಂಡಲ ಮಧ್ಯದಲ್ಲಿ ಡಾಕಿನೀ, ರಾಕಿನೀ, ಲಾಕಿನೀ, ಕಾಕಿನೀ, ಶಾಕಿನೀ, ಹಾಕಿನೀ, ಓಂಕಾರ—ಹ್ರೀಂಕಾರಾಭಿಮಾನಿ ದೇವತೆಗಳನ್ನೂ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ, ಪ್ರಜಾಪತಿ, ನಾಗೇಶರೆಂಬ ಹತ್ತು ಸಪರಿವಾರ ದಿಕ್ಪಾಲಕ ದೇವತೆಗಳನ್ನೂ ಆಯಾಯ ದೇವತೆಗಳ ಅಸ್ತ್ರವಾಹನಾದಿಗಳೊಂದಿಗೆ ಬಾಹ್ಯದಳಗಳಲ್ಲಿ ಪೂಜಿಸಬೇಕು. ಯೋನಿಮಧ್ಯಭಾಗದಲ್ಲಿ ರತಿ, ಪ್ರೀತಿ, ಮನೋಭವ ದೇವತೆಗಳನ್ನು ಅರ್ಚನೆಮಾಡ ಬೇಕು. ಈ ಎಲ್ಲ ದೇವತೆಗಳನ್ನೂ ಪೀತವಸ್ತ್ರಗಳನ್ನುಟ್ಟು ಸಮಾನವಾದ ವಸ್ತ್ರಾ ಲಂಕಾರಗಳಿಂದ ಶೋಭಿತರಾಗಿರುವಂತೆ ಧ್ಯಾನಿಸಬೇಕು, ಮತ್ತು ಸಮಾಪ್ತಿಯಲ್ಲಿ ಅನುಗತರಾದ ಬಗಲಾದಿ ಅಂಗದೇವತೆಗಳನ್ನೂ ನೀರಾಜನೋಪಚಾರಗಳಿಂದ ಪೂಜಿಸಬೇಕು. ||೫||

ಇಂತಹ ಉಪಾಸಕನು ಐಶ್ವರ್ಯ ಸಂಪನ್ನನಾಗುವನು. ಯಾವ ಮನುಜನು ಈ ದೇವಿಯನ್ನು ಧ್ಯಾನಿಸುತ್ತಾನೆಯೋ ಅವನು ವಾಗ್ಮಿಯೂ ಅಮೃತವನ್ನು ಸಾಧಿಸಿ ದವನೂ, ಸರ್ವಸಿದ್ಧಿಗಳನ್ನು ನಿರ್ಮಿಸುವವನೂ, ಸೃಷ್ಟಿ ಸ್ಥಿತಿ ಸಂಹಾರಗಳನ್ನು ನಡೆಸುವವನೂ ಸರ್ವವಸ್ತು ಸಮೃದ್ಧಿಗಳ ಈಶ್ವರನೂ ಆಗುತ್ತಾನೆ. ಮತ್ತು ಈ ಒಂದು ಉಪಾಸನೆಯಲ್ಲಿ ನಿಖಿಲ ದೇವತೋಪಾಸನೆಯು ಅಂತರ್ಗತವಾದ್ದರಿಂದ ಈ ವಿದ್ಯೋಪಾಸಕನು ಶಕ್ತಿ,ವಿಷ್ಣು,ಗಣೇಶ, ಶಿವ, ಮುಂತಾದ ಎಲ್ಲ ದೇವತೆಗಳ ಭಕ್ತೋ ಪಾಸಕನಾಗುವನು. ಇವನೇ ಪರಮಾರ್ಥವಾಗಿ ಜೀವನ್ಮುಕ್ತನೂ ಸನ್ನ್ಯಾಸಿಯೂ ಆಗುವನು. ನ್ಯಸನವೆಂದರೆ ಅರ್ಪಿಸುವುದು; ಸಮ್+ನ್ಯಾಸಃ ವಿಧಿವತ್ತಾಗಿ ನ್ಯಸನ ಮಾಡುವುದೆಂಬ ಯಥಾವಿಧಿಯಾದ ಈ ಉಪಾಸನಾನುಷ್ಠಾನವೇ ಸನ್ನ್ಯಾಸವಾದ್ದ ರಿಂದ ಉಪಾಸಕನು ಸನ್ನ್ಯಾಸಿ ಎನ್ನುವುದರಲ್ಲಿ ಬಾಧಕವಿಲ್ಲ. ಶಿರವನ್ನು ಮುಂಡನ ಮಾಡಿಸಿದ ಮಾತ್ರಕ್ಕೆ ಅವನು ಪರಮಾರ್ಥವಾಗಿ ಸನ್ನ್ಯಾಸಿಯಲ್ಲ. ಈ ಸೌಭಾಗ್ಯವನ್ನು ಕೊಡುವ ದೇವಿಯ ಅರ್ಚನದಿಂದ ಬ್ರಹ್ಮಾಸ್ತ್ರವೇ ಮುಂತಾದ ನಾನಾ ವಿಧವಾದ ಅಸ್ತ್ರಗಳಿಗೆ ಅಧಿಪತಿಯಾಗುವನು. ಎಂದು ಶಿವಪ್ರೋಕ್ತವಾದ ಉಪಾಸನಾ ಮಹಾ ತ್ಮ್ಯವನ್ನು ತಿಳಿಯಬೇಕು. ಓಂ ಶಿವಂ ಎಂಬುದು ಸಮಾಪ್ತಿಯನ್ನು ತೋರಿಸುವ ಭಾಗವು. ||೬||

ಪೀತಾಂಬರೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



|| ಶ್ರೀರಸ್ತು ||

## || ರಾಜಶ್ಯಾಮಲಾರಹಸ್ಯೋಪನಿಷತ್ ||

---

ಓಂ ಸ್ವಸ್ತಿ ನ ಇನ್ದ್ರೋ ವೃದ್ಧಶ್ರವಾಃ
ಸ್ವಸ್ತಿ ನಃ ಪೂಷಾ ವಿಶ್ವವೇದಾಃ ।
ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ
ಸ್ವಸ್ತಿ ನೋ ಬೃಹಸ್ಪತಿರ್ದಧಾತು ||

|| ಓಂ ಶಾಂತಿಃ ಶಾಂತಿಃ ಶಾಂತಿಃ ||

ಓಂ ರತ್ನಸಾನುಶಿಖರೇಷ್ವಾಸೀನಂ ಶ್ರೀರಾಜಶ್ಯಾಮಲಾರಹಸ್ಯೋಪನಿಷದ್ವೇತ್ತಾರಂ ಮತಂಗಋಷಿಂ ಗುರುಂ ಕೂಚಿಮಾರಃ ಪ್ರೋವಾಚ । ಮತಂಗ ಭಗವನ್ ಗುರೋ ರಾಜಶ್ಯಾಮಲಾರಹಸ್ಯೋಪನಿಷದಂ ಮೇನು ಬ್ರೂಹಿ । ಮತಂಗಭಗವಾನ್ ಕೂಚಿಮಾರಂ ಸ ಹೋವಾಚ । ತೇ ರಾಜಶ್ಯಾಮಲಾರಹಸ್ಯೋಪನಿಷದಮುಪದಿಶಾಮಿ ||೧||

ಅಥಾತಃ ಶ್ರೀ ರಾಜಶ್ಯಾಮಲಾರಹಸ್ಯೋಪನಿಷದಂ ವ್ಯಾಖ್ಯಾಸ್ಯಾಮಃ । ಮಂತ್ರಜಪಾಧಿಕರಣನ್ಯಾಸಾಧಿಕರಣಸ್ತೋತ್ರಾಧಿಕರಣಪೂಜಾಧಿಕರಣಮೈಥುನಾಧಿಕರಣೈಃ ಪಂಚಭಿರ್ಬ್ರಾಹ್ಮಣೋ ಭೋಗಮೋಕ್ಷಮಾಪ್ನೋತಿ ।

|| ಶ್ರೀಃ ||

# ರಾಜಶ್ಯಾಮಲಾರಹಸ್ಯೋಪನಿಷತ್ತಿನ ಕನ್ನಡ ಅನುವಾದವು.

---

ರಾಜಶ್ಯಾಮಲಾರಹಸ್ಯೋಪನಿಷತ್ತು ದೇವೀಪರವಾದ ಪ್ರಧಾನೋಪನಿಷತ್ತುಗಳಲ್ಲಿ ಒಂದಾಗಿದೆ. ಸ್ವಸ್ತಿನಃ ಎಂಬ ಶಾಂತಿಮಂತ್ರವನ್ನು ಮಂಗಲಾರ್ಥವಾಗಿ ಉಪನಿಷತ್ತಿನ ಪ್ರಾರಂಭದಲ್ಲಿ ಸಂಪ್ರದಾಯಾನುಸಾರವಾಗಿ ಪಠನಮಾಡಿದೆ. ಅದಕ್ಕೆ ಈ ರೀತಿಯಾಗಿ ಅರ್ಥವು:— ಜಗತ್ಪರಿಪಾಲನಾದಿ ಕರ್ಮಗಳಿಂದ ಉಂಟಾದ ದೊಡ್ಡ ಕೀರ್ತಿಸಂಪನ್ನನಾದ ಇಂದ್ರನೂ, ಪ್ರಪಂಚದ ಸಮಸ್ತ ಪ್ರಜ್ಞಾನದಿಂದ ಕೂಡಿದ ಪೂಷದೇವನೂ ಶುಭಫಲಪ್ರದಾನಕ್ಕೆ ಮುಖ್ಯಕಾರಣನಾಗಿರುವ ಗರುಡನೂ ಬೃಹಸ್ಪತಿ ದೇವನೂ ಉಪನಿಷದ್ವಿದ್ಯಾಗ್ರಹಣಕ್ಕೆ ಸಂಭವಿಸುವ ವಿಘ್ನಗಳನ್ನೂ ಇತರ ತಾಪತ್ರಯಗಳನ್ನೂ ನಿವಾರಿಸಿ ಮಂಗಲವನ್ನು ಕೊಡಲಿ ಎಂಬ ಮಂತ್ರಾರ್ಥವನ್ನು ಸ್ಮರಿಸಿ ಮಂತ್ರವನ್ನು ಪಠಿಸಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ತಾಪತ್ರಯಗಳ ನಿವಾರಣೆಯ ಆಕಾಂಕ್ಷೆಯಿಂದ ಮೂರುಸಲ ಓಂಕಾರಪೂರ್ವಕವಾಗಿ "ಶಾಂತಿಃ" ಎಂಬ ಪದವನ್ನು ಪಠಿಸುವುದು. ಮತಂಗನೆಂಬ ಪೂಜ್ಯಋಷಿಯು ಕೂಚಿಮಾರನೆಂಬ ಉತ್ತಮ ಶಿಷ್ಯನಿಗೆ ಈ ಉಪನಿಷತ್ತನ್ನು ಉಪದೇಶಮಾಡಿರುವನೆಂದೂ ತನ್ಮೂಲಕ ಇದು ಪ್ರಚಾರಕ್ಕೆ ಬಂದಿತೆಂದೂ ಇದರ ಉಪೋದ್ಘಾತದಿಂದ ತಿಳಿಯುವುದು. ಒಂದು ಕಾಲದಲ್ಲಿ ಸುಮೇರು ಪರ್ವತದಲ್ಲಿ ಮತಂಗ ಋಷಿಯು ರಾಜಶ್ಯಾಮಲಾದೇವಿಯ ರಹಸ್ಯ ವಿದ್ಯೆಯ ವಿಷಯದಲ್ಲಿ ಜ್ಞಾನ ವಿಜ್ಞಾನ ಸಂಪನ್ನನಾಗಿ ಪ್ರಸಿದ್ಧನಾಗಿರುವಾಗ ಕೂಚಿಮಾರನೆಂಬವನು ಬಂದು ಋಷಿಯನ್ನು ಕುರಿತು ಪೂಜ್ಯರಾದ ಮತಂಗ ಗುರುವೆ! ರಾಜಶ್ಯಾಮಲಾರಹಸ್ಯೋಪನಿಷತ್ತನ್ನು ನನಗೆ ಉಪದೇಶಿಸು ಎಂದು ವಿದ್ಯೋಪದೇಶಗ್ರಹಣಾರ್ಥವಾಗಿ ಬೇಡಿಕೊಂಡನು. ಗುರುವು ಆ ಕೂಚಿಮಾರ ಶಿಷ್ಯನಿಗೆ ಈ ಉಪನಿಷತ್ತನ್ನು ನಿನಗೆ ಉಪದೇಶಿಸುವೆನು ಎಂದು ಉಪದೇಶಾಂಗೀಕಾರವನ್ನು ತಿಳಿಸಿದನು. ||೧||

ಇನ್ನು ಮುಂದೆ ರಹಸ್ಯವಾದ ರಾಜಶ್ಯಾಮಲಾ ಉಪನಿಷತ್ತಿನ ವ್ಯಾಖ್ಯಾನವನ್ನು ಉಪಕ್ರಮಿಸುವೆವು. ದೇವಿಯನ್ನು ಮಂತ್ರಜಪ, ನ್ಯಾಸವಿಧಿ, ಸ್ತೋತ್ರಪಾಠ, ಪೂಜಾನುಷ್ಠಾನ, ಮೈಥುನಾಚರಣಗಳೆಂಬ ಐದು ವಿಧಾನಗಳಿಂದ ಆರಾಧಿಸಬಹುದು. ಇದರಲ್ಲಿ ಒಂದೊಂದು ವಿಧಾನವು ಒಂದೊಂದು ಅಧಿಕರಣವೆಂದು ಕರೆಯಲ್ಪಟ್ಟಿದೆ. ಐದು ಅಧಿಕರಣಗಳಿಂದ ಬ್ರಾಹ್ಮಣನು ದೇವಿಯನ್ನು ಆರಾಧಿಸಿ ಭೋಗ ಮೋಕ್ಷಗಳೆಂಬ ಮಹಾಫಲಗಳನ್ನು ಹೊಂದಬಹುದು. ಆದರೆ ಮೊದಲು ಗುರೂಪದೇಶವೂ

ಗುರೋರನುಜ್ಞಯಾ ಶ್ರೀ ರಾಜಶ್ಯಾಮಲಾಮಂತ್ರಂ ನಿತ್ಯಂ ಸಹಸ್ರ ಸಂಖ್ಯಯಾ ತ್ರಿಶತೇನ ವಾಷ್ಟಾವಿಂಶದುತ್ತರಶತೇನ ವಾ ಜಪ್ತ್ವಾ ಮಂತ್ರ ಸಿದ್ಧಿರ್ಭವತಿ। ಶುಕ್ರವಾರೇ ಭಾರ್ಯಾಜಗನ್ಮೋಹನಚಕ್ರೇ ತ್ರಿಶತಂ ಮಂತ್ರ ಜಪೇನ ಮಂತ್ರಸಿದ್ಧಿಃ। ಪುರಶ್ಚರಣಸಿದ್ಧಿರ್ಭವತಿ । ನವಾಶೀತಿನ್ಯಾಸಾನಾಂ ನ್ಯಸನೇನ ದೇವತಾಶರೀರೀ ಭವತಿ। ನವಾಶೀತಿನ್ಯಾಸಾನಾಂ ನ್ಯಸನೇನ ಸರ್ವದೇವೈರ್ನಮಸ್ಕೃತೋ ಭವತಿ। ನವಾಶೀತಿನ್ಯಾಸಾನಾಂ ಶರೀರೇ ನ್ಯಸ ನೇನ ಗಂಧರ್ವಕನ್ಯಾಭಿಃ ಪೂಜಿತೋ ಭವತಿ। ನವಾಶೀತಿನ್ಯಾಸಾನಾಂ ನ್ಯಸನೇನ ದೇವಸ್ತ್ರೀಭೋಗಮಾಪ್ನೋತಿ। ರಂಭಾಸಂಭೋಗಮಾಪ್ನೋತಿ। ನವಾಶೀತಿನ್ಯಾಸಾನಾಂ ನ್ಯಸನೇನ ದೇವತಾರೂಪಮಾಪ್ನೋತಿ। ದೇವತಾ ಶರೀರೀ ಭೂತ್ವಾ ವಿಮಾನವಾನ್ ಭವತಿ। ವಿಮಾನಮಾರುಹ್ಯ ಸ್ವರ್ಗಂ ಗಚ್ಛತಿ। ಸರ್ವಂ ಪ್ರಾಪ್ಯ ತದ್ಭೋಗಮಾಪ್ನೋತಿ ॥೨॥

ಜಗನ್ಮೋಹನಚಕ್ರೇ ಪಾಟಲಕುಸುಮೈಃ ಸಹಸ್ರಸಂಖ್ಯಯಾ ಪೂಜಿತಾ ಶ್ರೀ ರಾಜಶ್ಯಾಮಲಾ ಕಾಮಿತಾರ್ಥಪ್ರದಾ ಮಂಗಲಪ್ರದಾ ಭವತಿ। ವರ್ಷರ್ತೌ ಶ್ರಾವಣೇ ಮಾಸಿ ಸರ್ವರಾತ್ರಿಷು ಭಾರ್ಯಾಜಗನ್ಮೋಹನಚಕ್ರೇ ಚಂಪಕಕುಸುಮೈಃ ಸಹಸ್ರಸಂಖ್ಯಯಾ ಪೂಜಿತಾ ಶ್ರೀ ರಾಜಶ್ಯಾಮಲಾಽಽ ರೋಗ್ಯಪ್ರದಾ ಭವತಿ। ತತ್ರ ಶುಕ್ರವಾರೇ ಪೂಜಿತಾ ಮಹಾಲಕ್ಷ್ಮೀಪ್ರದಾ ಭವತಿ । ಶುಕ್ರವಾರ ಯುತಾಯಾಂ ಪೌರ್ಣಮಾಸ್ಯಾಂ ಭಾರ್ಯಾ ಜಗನ್ಮೋಹನಚಕ್ರೇ ಶತಸಂಖ್ಯಯಾ ಶ್ರೀ ರಾಜಶ್ಯಾಮಲಾಂಬಾಂ ಪೂಜಯನ್ ದೇಹಾಂತರೇ ರಂಭಾಸಂಭೋಗಮಶ್ನುತೇ । ಭಾದ್ರಪದೇ ಮಾಸಿ ಮಹಾಲಕ್ಷ್ಮೀವ್ರತದಿನೇಷು ಭಾರ್ಯಾಜಗನ್ಮೋಹನಚಕ್ರೇ ಶ್ರೀ ರಾಜಶ್ಯಾಮಲಾಂಬಾಂ ಜಾಜೀಕುಸುಮೈಃ ಪೂಜಯನ್ ಮಾನವೋ ಮಹದೈಶ್ವರ್ಯಮಾಪ್ನೋತಿ ॥೩॥

ಈ ಪ್ರಯೋಗಾನುಷ್ಠಾನಕ್ಕೆ ಸದ್ಗುರು ಸಮ್ಮತಿಯೂ ಆವಶ್ಯಕವು. ಆದ್ದರಿಂದ ಗುರು ಸಮ್ಮತಿಯನ್ನು ಪಡೆದು ರಾಜಶ್ಯಾಮಲಾ ಮಂತ್ರವನ್ನು ಪ್ರತಿನಿತ್ಯವೂ ಒಂದು ಸಾವಿರ, ಮುನ್ನೂರು, ಅಥವಾ ಒಂದುನೂರ ಇಪ್ಪತ್ತೆಂಟು ಸಂಖ್ಯೆಯಿಂದ ಜಪ ಮಾಡಿದವನು ಈ ಮಂತ್ರಸಿದ್ಧಿಯನ್ನು ಹೊಂದುತ್ತಾನೆ. ಮತ್ತು ಶುಕ್ರವಾರದಲ್ಲಿ ಭಾರ್ಯೆಯ ಯೋನಿಮಂಡಲವೆಂಬ ಜಗನ್ಮೋಹನ ಚಕ್ರದಲ್ಲಿ ಮುನ್ನೂರು ಸಂಖ್ಯೆಯ ಮಂತ್ರಜಪದಿಂದ ವಿಶೇಷವಾಗಿ ಮಂತ್ರಸಿದ್ಧಿಯಾಗುವುದು. ಮತ್ತು ಪುರಶ್ಚರಣ ಮಾಡಿದ ಸಿದ್ಧಿಯೂ ಬರುವುದು. ಈ ಮಂತ್ರ ಜಪಕ್ಕೆ ಅಂಗವಾಗಿ ಎಂಭತ್ತೊಂಭತ್ತು ನ್ಯಾಸಗಳನ್ನು ಆಚರಿಸಿದ್ದರಿಂದ ದೇವತೆಯಂತೆ ದಿವ್ಯವಿಗ್ರಹವನ್ನು ಧರಿಸುವನು. ಎಲ್ಲ ದೇವತೆಗಳಿಂದಲೂ ನಮಸ್ಕರಿಸಲ್ಪಡುವ ಮಹಾತ್ಮನಾಗುವನು. ಸಾಧಕನು ತನ್ನ ಶರೀರದಲ್ಲಿ ಎಂಭತ್ತೊಂಭತ್ತು ನ್ಯಾಸಗಳನ್ನಾಚರಿಸಿದ್ದರಿಂದ ಗಂಧರ್ವ ಕನ್ಯೆಯ ರಿಂದ ಪೂಜಿಸಲ್ಪಡುವನು. ದೇವತಾ ಸ್ತ್ರೀಯರೊಡನೆ ಸಂಭೋಗ ಸೌಖ್ಯವನ್ನು ಅನುಭವಿಸುತ್ತಾನೆ. ಅಪ್ಸರಃ ಸ್ತ್ರೀಯರಲ್ಲಿ ಪ್ರಥಮ ಗಣ್ಯಳಾದ ರಂಭೆಯ ಸಂಭೋಗ ವನ್ನು ಅನುಭವಿಸುತ್ತಾನೆ. ದೇವತಾ ಆಕಾರವನ್ನು ಹೊಂದುತ್ತಾನೆ. ಈ ರೀತಿ ಯಿಂದ ದಿವ್ಯದೇವತಾ ವಿಗ್ರಹವನ್ನು ಧರಿಸಿ ವಿಮಾನೋಪಕರಣವುಳ್ಳವನಾಗುತ್ತಾನೆ. ಅಂತಹ ವಿಮಾನವನ್ನು ಹತ್ತಿ ಆತಂಕವಿಲ್ಲದೆ ಸ್ವರ್ಗಕ್ಕೂ ಹೋಗಬಲ್ಲವನಾಗುತ್ತಾನೆ. ಆ ಸ್ವರ್ಗಕ್ಕೆ ಹೋಗಿ ಅಲ್ಲಿನ ಸಕಲ ಸುಖಗಳನ್ನು ಹೊಂದುತ್ತಾನೆ. ||೨||

ಈ ರಾಜಶ್ಯಾಮಲಾ ಮಹಾಮಂತ್ರವನ್ನು ದೇಶ–ಕಾಲ–ಉಪಕರಣ ಭೇದ ಗಳಿಂದ ಕೂಡಿದ ನಾನಾವಿಧವಾದ ಪ್ರಯೋಗಗಳಿಂದ ಅನೇಕ ಫಲಗಳನ್ನು ಹೊಂದ ಬಹುದು. ಅವುಗಳಲ್ಲಿ ಕೆಲವು ಪ್ರಯೋಗವಿಧಿಗಳನ್ನು ಮುಂದೆ ತೋರಿಸಿದೆ. ಪೂರ್ವೋಕ್ತವಾದ ಜಗನ್ಮೋಹನ ಚಕ್ರದಲ್ಲಿ ಒಂದು ಸಹಸ್ರ ಪಾಟಲ (ಪಾದರಿ) ಪುಷ್ಪಗಳಿಂದ ದೇವಿಯನ್ನು ಪೂಜೆಮಾಡಿದರೆ ದೇವಿಯು ಕಾಮಿತವಾದ ಫಲವನ್ನೂ ಮಂಗಲವನ್ನೂ ಕೊಡುತ್ತಾಳೆ. ವರ್ಷಋತು ಸಮಯದಲ್ಲಿ ಶ್ರಾವಣಮಾಸದ ಪ್ರತಿ ಯೊಂದು ರಾತ್ರಿವೇಳೆಗಳಲ್ಲಿಯೂ ಜಗನ್ಮೋಹನ ಚಕ್ರದಲ್ಲಿ ಸಂಪಿಗೆಯ ಒಂದು ಸಾವಿರ ಹೂಗಳಿಂದ ದೇವಿಯನ್ನು ಪೂಜಿಸಲಾಗಿ ಆರೋಗ್ಯಫಲವನ್ನು ಅನುಗ್ರಹಿಸುವಳು. ಆಗ ಶುಕ್ರವಾರಗಳಲ್ಲಿ ವಿಶೇಷವಾಗಿ ಪೂಜೆಮಾಡಿ ಮಹಾಸಂಪತ್ತನ್ನು ಹೊಂದಬಹುದು. ಶುಕ್ರವಾರ, ಪೂರ್ಣಿಮಾ ಎರಡೂ ಸೇರಿದ ಶುಭದಿನದಲ್ಲಿ ಶತಸಂಖ್ಯೆಯಿಂದ ಜಗ ನ್ಮೋಹನ ಚಕ್ರದಲ್ಲಿ ದೇವಿಯನ್ನು ಪೂಜಿಸಿದರೆ ಸಾಧಕನಿಗೆ ದೇಹಾಂತರದಲ್ಲಿ ರಂಭಾ ಸಂಭೋಗ ಸೌಖ್ಯವು ಲಭಿಸುವುದು. ಭಾದ್ರಪದ ಮಾಸದಲ್ಲಿ ಮಹಾಲಕ್ಷ್ಮೀವ್ರತಗಳ ವಿಶೇಷದಿನಗಳಲ್ಲಿ ಜಾಜೀಹೂಗಳಿಂದ ಜಗನ್ಮೋಹನ ಚಕ್ರದಲ್ಲಿ ರಾಜಶ್ಯಾಮ ಲಾಂಬೆಯನ್ನು ಪೂಜಿಸಿದ ಮಾನವನು ಹೆಚ್ಚು ಸಂಪತ್ತನ್ನು ಹೊಂದುತ್ತಾನೆ. ||೩||

ಶರತ್ಕಾಲೇ ಸರ್ವರಾತ್ರಿಷು ಭಾರ್ಯಾಜಗನ್ಮೋಹನಚಕ್ರೇ ನೀಲೋತ್ಪಲೈಃ ಸಹಸ್ರಸಂಖ್ಯಯಾ ಶ್ಯಾಮಲಾಂ ಪೂಜಯನ್ ಮಹಾಭೋಗಮಶ್ನುತೇ । ಶುಕ್ರವಾರಯುತಾಯಾಂ ಪೌರ್ಣಮಾಸ್ಯಾಂ ಭಾರ್ಯಾಜಗನ್ಮೋಹನಚಕ್ರೇ ಶ್ರೀ ರಾಜಶ್ಯಾಮಲಾಂ ಪೂಜಯನ್ ಕಲ್ಹಾರೈಃ ಶಚೀಭೋಗಮಶ್ನುತೇ ॥೪॥

ಹೇಮಂತಕಾಲೇ ಸರ್ವರಾತ್ರಿಷು ಭಾರ್ಯಾಜಗನ್ಮೋಹನಚಕ್ರೇ ಜವಂತೀಕುಸುಮೈಃ ಸಹಸ್ರಸಂಖ್ಯಯಾ ಪೂಜಯನ್ ವರುಣದೇವೇನ ಕನಕಚ್ಛತ್ರೀ ಭವತಿ । ಮಾರ್ಗಶೀರ್ಷೇ ಪೌರ್ಣಮಾಸ್ಯಾಂ ಭಾರ್ಯಾಜಗನ್ಮೋಹನಚಕ್ರೇ ಕುಸುಂಭಪುಷ್ಪೈಃ ಪೂಜಯನ್ ಮಾನವೋ ದೇವೇಂದ್ರೈಶ್ವರ್ಯಮಾಪ್ನೋತಿ ॥೫॥

ಮಾಘ್ಯಾಂ ಶುಕ್ರವಾರಯುಕ್ತಾಯಾಂ ಭಾರ್ಯಾಜಗನ್ಮೋಹನಚಕ್ರೇ ದ್ವಂದ್ವಮಲ್ಲಿಕಾಕುಟ್ಮಲೈಃ ಸಹಸ್ರಸಂಖ್ಯಯಾ ಪೂಜಯನ್ ಮಾನವಃ ರಾಜಸ್ತ್ರೀಸಂಭೋಗಮಾಪ್ನೋತಿ। ಸರ್ವದಾ ಪುಷ್ಯಿಣ್ಯಾಂ ಭಾರ್ಯಾಯಾಂ ಜನನ್ಮೋಹನಚಕ್ರೇ ವಸಂತಪುಷ್ಪೈಃ ಪೂಜಯನ್ ಮಾನವೋ ದೇವತಾತ್ವಮಶ್ನುತೇ। ಚತುರ್ಥ್ಯಾಂ ಶುಕ್ರವಾರಯುಕ್ತಾಯಾಂ ಭಾರ್ಯಾಜಗನ್ಮೋಹನಚಕ್ರೇ ದೇವತಾಂ ಶ್ಯಾಮಲಾಂ ಜಪನ್ ಪರಶಿವತ್ವಮಾಪ್ನೋತಿ ॥೬॥

ಶ್ರೀ ರಾಜಶ್ಯಾಮಲಾಂಬಾಯಾಃ ಪಂಚದಶಸ್ತೋತ್ರಾಣಾಂ ಪಾರಾಯಣೇನ ದೇವತಾಸಂತುಷ್ಟಿರ್ಭವತಿ । ಮಂಗಲಪ್ರದಾ ರಾಜವಶಂಕರೀ ಚ ಭವತಿ । ದೇವತಾಸಾನ್ನಿಧ್ಯಮಾಪ್ನೋತಿ । ಸನ್ನಿಧಾನೇನ ಸರ್ವನಿವೃತ್ತಿರ್ಭವತಿ । ಸರ್ವಮಂಗಲಮಾಪ್ನೋತಿ । ಸರ್ವದೇವನಮಸ್ಕೃತೋ ಭವತಿ । ಸರ್ವೇ ರಾಜಾನೋ ವಶ್ಯಾ ಭವಂತಿ। ರಂಭಾದಿಭಿಃ ಪೂಜಿತೋ ಭವತಿ। ಸ್ವರ್ಗಭೋಗಮಾಪ್ನೋತಿ ॥೭॥

ಗುರೋರನುಜ್ಞಯಾ ಶುಕ್ರವಾರೇ ದಿವಾ ರಾತ್ರೌ ಚ ಚಂಪಕತೈಲಾದ್ಯೈಃ ಕೃತಸ್ನಾತಾಂ ಸರ್ವಾಲಂಕಾರಭೂಷಿತಾಂ ಶುಭ್ರವಸ್ತ್ರಧರಾಂ ಶ್ರೀಚಂದನವಿಲಿಪ್ತಾಂಗೀಂ ಕಸ್ತೂರೀತಿಲಕೋಪೇತಾಂ ಕುಂಕುಮಲಿಪ್ತ

ಶರದೃತುವಿನ ಎಲ್ಲ ರಾತ್ರಿಗಳಲ್ಲಿಯೂ ಒಂದುಸಾವಿರ ಕನ್ನೈದಿಲೆ ಹೂಗಳಿಂದ ಭಾರ್ಯಾ ಜಗನ್ಮೋಹನ ಚಕ್ರದಲ್ಲಿ ದೇವಿಯನ್ನು ಪೂಜಿಸಲಾಗಿ ಮಹಾಭೋಗ ಸೌಖ್ಯವನ್ನು ಅನುಭವಿಸುವನು. ಅದರಲ್ಲೂ ಶುಕ್ರವಾರ ಪೂರ್ಣಿಮೆಗಳು ಸೇರಿದ ವಿಶೇಷದಿನದಲ್ಲಿ ಸೌಗಂಧಿಕವೆಂಬ ಕಮಲಪುಷ್ಪಗಳಿಂದ ಮಾಡುವ ಪೂಜನವು ಶಚೀ ಸಂಭೋಗಸೌಖ್ಯವನ್ನು ಹೊಂದಲು ಸಾಧನವಾಗುವುದು. ||೪||

ಹೇಮಂತ ಋತುವಿನಲ್ಲಿ ಸಮಸ್ತ ರಾತ್ರಿಗಳಲ್ಲಿಯೂ ಭಾರ್ಯಾ ಜಗನ್ಮೋಹನ ಚಕ್ರದಲ್ಲಿ ಸಹಸ್ರ ಜವಂತೀ ಪುಷ್ಪಗಳಿಂದ ಪೂಜೆಮಾಡಿ ವರುಣದೇವನ ಮೂಲಕ ಸುವರ್ಣಛತ್ರವನ್ನು ಹೊಂದುವನು. ಮಾರ್ಗಶೀರ್ಷಮಾಸದ ಪೂರ್ಣಿಮೆಯಲ್ಲಿ ಕುಸುಂಭ ಪುಷ್ಪಗಳಿಂದ ಅರ್ಚಿಸಿದ ಮಾನವನು ದೇವೇಂದ್ರನ ಮಹಾ ಐಶ್ವರ್ಯವನ್ನು ಹೊಂದುವನು. ||೫||

ಮಾಘಮಾಸದ ಶುಕ್ರವಾರದಿಂದ ಕೂಡಿದ ಪೂರ್ಣಿಮೆಯಲ್ಲಿ ಮಲ್ಲಿಗೆ ಹೂಗಳನ್ನು ಒಂದೊಂದುಜೊತೆಯಾಗಿ ಒಂದುಸಹಸ್ರ ಸಂಖ್ಯೆಯ ಅರ್ಚನೆಯನ್ನು ಜಗನ್ಮೋಹನ ಚಕ್ರದಲ್ಲಿ ನೆರವೇರಿಸಿದ ಸಾಧಕ ಮನುಷ್ಯನು ರಾಜಸ್ತ್ರೀ ಸಂಭೋಗಸುಖವನ್ನು ಹೊಂದುವನು. ಭಾರ್ಯೆಯು ಪುಷ್ಪವತಿಯಾದಾಗಲೆಲ್ಲ ಜಗನ್ಮೋಹನ ಚಕ್ರದಲ್ಲಿ ವಸಂತಪುಷ್ಪಗಳಿಂದ ಪೂಜಿಸಿದವನು ದೇವತಾಸ್ವರೂಪನ್ನು ಹೊಂದುವನು. ಚತುರ್ಥೀಶುಕ್ರವಾರಗಳು ಸೇರಿದ ದಿನದಲ್ಲಿ ಜಗನ್ಮೋಹನಚಕ್ರದಲ್ಲಿ ಶ್ಯಾಮಲಾ ದೇವಿಯನ್ನು ಜಪಿಸಿ ಪರಶಿವಸಾರೂಪ್ಯವನ್ನು ಹೊಂದುತ್ತಾನೆ. ||೬||

ರಾಜಶ್ಯಾಮಲಾದೇವಿಯ ಹದಿನೈದು ಉತ್ತಮಸ್ತೋತ್ರಗಳ ಪಾರಾಯಣದಿಂದ ದೇವತೆಗೆ ಸಂತುಷ್ಟಿಯಾಗುವುದು. ಸಂತುಷ್ಟಳಾದ ದೇವಿಯು ಮಂಗಲವನ್ನೂ, ರಾಜವಶ್ಯತೆಯನ್ನೂ ಅನುಗ್ರಹಿಸುವಳು. ಮತ್ತು ದೇವತೆಯು ಉಪಾಸಕನಲ್ಲಿ ಸಾನ್ನಿಧ್ಯವನ್ನು ಅನುಗ್ರಹಿಸುವಳು. ದೇವೀಸನ್ನಿಧಾನದಿಂದ ಸಕಲ ದುರಿತಾದಿ ವಿಪತ್ತುಗಳನ್ನು ನಿವಾರಣಮಾಡಿಕೊಂಡು ಸಕಲ ಮಂಗಲಗಳನ್ನು ಹೊಂದುತ್ತಾನೆ. ಸಮಸ್ತ ದೇವತೆಗಳಿಂದಲೂ ನಮಸ್ಕರಿಸಲ್ಪಡುವನು. ಸರ್ವರಾಜರೂ ಸಾಧಕನಿಗೆ ವಶವರ್ತಿಗಳಾಗುವರು. ರಂಭಾದಿ ಅಪ್ಸರಸ್ತ್ರೀಯರಿಂದ ಪೂಜ್ಯನಾಗುವನು. ಮತ್ತು ಸ್ವರ್ಗ ಸೌಖ್ಯವನ್ನು ಅನುಭವಿಸುವನು. ಸ್ತೋತ್ರಪಾರಾಯಣವಿಧಾನದಿಂದ ಈ ಎಲ್ಲ ಉತ್ತಮ ಫಲಗಳನ್ನು ಸಾಧಿಸುವನು. ||೭||

ಬ್ರಾಹ್ಮಣನು ಗುರುವಿನ ಅನುಜ್ಞೆಯನ್ನು ಪಡೆದು ಶುಕ್ರವಾರದಲ್ಲಿ ಹಗಲು ಮತ್ತು ರಾತ್ರಿಯಲ್ಲಿ ಸಂಪಿಗೆಯ ಅತ್ತರು ಮುಂತಾದ್ದರಿಂದ ಕೂಡಿದ ಸುಗಂಧತೈಲದಿಂದ ಸ್ನಾನಮಾಡಿ ಸರ್ವಾಲಂಕಾರಗಳನ್ನು ಧರಿಸಿ, ಶುಭ್ರವಾದ ವಸ್ತ್ರವನ್ನು ಉಟ್ಟು

ಕುಚಭಾರಾಂ ಪುಷ್ಪದಾಮಯುಕ್ತಧಮ್ಮಿಲ್ಲಾಂ ತಾಂಬೂಲಪೂರಿತ ಮುಖೀಂ ಸ್ವೇದಬಿಂದೂಲ್ಲಸನ್ಮುಖೀಂ ಬಿಂಬೋಷ್ಠೀಂ ಕುಂದರದನಾಂ ಕಂಬುಕಂಠೀಂ ಮಂಜುಹಾಸಾಂ ಯೌವನೋನ್ಮತ್ತಾಂ ಕಂಜಲೋಚನಾಂ ಪೃಥುನಿತಂಬಾಂ ರಾಜರಂಭೋರುಂ ಸಂಪೂರ್ಣಚಂದ್ರವದನಾಂ ಸಂಭೋಗೇಚ್ಛಾಂ ಶುಕವಾಣೀಂ ಸಂಗೀತರಸಿಕಾಂ ಕುರವಕರಸಾಂಚಿತಪಾಣಿಪಾದಾಂ ವಶವರ್ತಿನೀಂ ಭಾರ್ಯಾಂ ಪುಷ್ಪಶಯ್ಯಾಯಾಮುತ್ತಾನಶಾಯಿನೀಂ ಕೃತ್ವಾ ದರ್ಪಣವನ್ನಿರ್ಮಲಂ ಜಗನ್ಮೋಹನಚಕ್ರಂ ಗಂಧದ್ರವ್ಯೇಣ ಧೂಪದೀಪೈಶ್ಚ ಪರಿಮಲೀಕೃತಂ ಕುಂಕುಮಮಿಲಿತೈರ್ಮಲ್ಲಿಕಾಕುಟ್ಮಲೈಃ ಶತಸಂಖ್ಯಯಾ ಪೂಜಯನ್ ಬ್ರಾಹ್ಮಣೋ ದೇವಭೋಗಮಾಪ್ನೋತಿ ||೮||

ವಸಂತನವರಾತ್ರಿಷು ಭಾರ್ಯಾಜಗನ್ಮೋಹನಚಕ್ರೇ ಮಲ್ಲಿಕಾಕುಟ್ಮಲೈಃ ಸಹಸ್ರನಾಮಭಿಃ ರಹಸ್ಯನಾಮಭಿಶ್ಚ ಪೂಜಿತಾ ರಾಜಶ್ಯಾಮಲಾ ರಾಜವಶಂಕರೀ ಭವತಿ । ಶುಕ್ರವಾಸರಯುಕ್ತಾಯಾಂ ಸಪ್ತಮ್ಯಾಂ ರಾತ್ರೌ ಭಾರ್ಯಾಯಾ ಜಗನ್ಮೋಹನಚಕ್ರೇ ಪ್ರಥಮಯಾಮೇ ಕಲ್ಹಾರಪುಷ್ಪೈಃ ಸಹಸ್ರನಾಮಭಿರ್ದೇವತಾಂ ಪೂಜಯನ್ ದೇವತಾಸಾಲೋಕ್ಯಮಾಪ್ನೋತಿ। ತಸ್ಯಾಮೇವ ದ್ವಿತೀಯಯಾಮೇ ಭಾರ್ಯಾಜಗನ್ಮೋಹನಚಕ್ರೇ ಪಾರಿಜಾತಪುಷ್ಪೈಃ ಸಹಸ್ರನಾಮಭಿಃ ಪೂಜಯನ್ ದೇವತಾಸಾಮೀಪ್ಯಮಾಪ್ನೋತಿ। ತಸ್ಯಾಮೇವ ತೃತೀಯಯಾಮೇ ಭಾರ್ಯಾಜಗನ್ಮೋಹನಚಕ್ರೇ ಮಂದಾರಪುಷ್ಪೈಃ ಸಹಸ್ರನಾಮಭಿಃ ಪೂಜಯನ್ ದೇವತಾಸಾರೂಪ್ಯಮಾಪ್ನೋತಿ । ತಸ್ಯಾಮೇವ ಚತುರ್ಥಯಾಮೇ ಜಗನ್ಮೋಹನಚಕ್ರೇ ಚಂಪಕಪುಷ್ಪೈಃ ಸಹಸ್ರನಾಮಭಿಃ ಪೂಜಯನ್ ದೇವತಾಸಾಯುಜ್ಯಮಾಪ್ನೋತಿ । ಸರ್ವರಾತ್ರಿಷು ಜಗನ್ಮೋಹನಚಕ್ರೇ ಮಲ್ಲಿಕಾಕುಟ್ಮಲೈಃ ಪೂಜಿತಾ ಶ್ಯಾಮಲಾ ಕಾಮಿತಾರ್ಥಪ್ರದಾ ಭವತಿ ||೯||

ಚಂದನದಿಂದ ಸರ್ವಾವಯುಗಳನ್ನು ಲೇಪಿಸಿಕೊಂಡು ಕಸ್ತೂರೀತಿಲಕವನ್ನು ಹಣೆಯಲ್ಲಿಟ್ಟುಕೊಂಡು ಸ್ತನಗಳನ್ನು ಕುಂಕುಮ ಕೇಸರಿಗಳಿಂದ ಲೇಪಿಸಿ ಕೇಶಪಾಶವನ್ನು ಪುಷ್ಪಮಾಲಿಕೆಯಿಂದ ಅಲಂಕರಿಸಿ ಮುಖದಲ್ಲಿ ತಾಂಬೂಲವನ್ನು ಹಾಕಿಕೊಂಡು ಇರುವ ಆಯಾಸದಿಂದುಂಟಾದ ಬೆವರಿನ ಬಿಂದುಗಳಿಂದ ಶೋಭಿಸುವ, ತೊಂಡೆಹಣ್ಣಿನಂತೆ ಕೆಂದುಟಿ, ಮಲ್ಲಿಗೆ ಮೊಗ್ಗುಗಳಂತಿರುವ ದಂತಪಂಕ್ತಿ, ಶಂಖದಂತೆ ಸುಂದರವಾದ ಕಂಠ, ಮುಗುಳ್ನಗೆ, ತಾರುಣ್ಯಮದ, ಕಮಲದಂತೆ ಸುಂದರವಾದ ಕಣ್ಣು, ವಿಸ್ತಾರವಾದ ನಿತಂಬ, ರಾಜಬಾಳೆಗಿಡದಂತೊಪ್ಪುವ ತೊಡೆ, ಪೂರ್ಣಚಂದ್ರನಂತೆ ರಾಜಿಸುವ ಮುಖ ಮುಂತಾದ ಸುಂದರಾವಯುವಗಳಿಂದ ಕೂಡಿದ, ಸಂಭೋಗೇಚ್ಛೆಯಿಂದಲೂ ಗಿಣಿಯಂತೆ ಮಧುರವಾಣಿಯಿಂದಲೂ ಸಂಗೀತ ರಸದಿಂದಲೂ ಕುರವಕರಸದಿಂದ ಅಲಂಕರಿಸಿದ ಕಾಲುಕೈಗಳಿಂದಲೂ ಕೂಡಿ ವಶವರ್ತಿಯಾದ ಭಾರ್ಯೆಯನ್ನು ಪುಷ್ಪಗಳಿಂದ ರಚಿತವಾದ ಮೃದುಶಯ್ಯೆಯಲ್ಲಿ ತನಗೆ ಸಮ್ಮುಖಳಾಗಿ ಮಲಗಿಸಿ ಕನ್ನಡಿಯಂತೆ ಸ್ವಚ್ಛವಾದ ಜಗನ್ಮೋಹನ ಚಕ್ರವನ್ನು ಗಂಧ ಧೂಪ ದೀಪಗಳಿಂದ ಪರಿಮಲವನ್ನಾಗಿ ಮಾಡಿ ಶತಸಂಖ್ಯೆಯಿಂದ ಮಲ್ಲಿಗೆಯ ಮೊಗ್ಗುಗಳಿಂದ ದೇವಿಗೆ ಪೂಜಿಸಿ ದೇವಭೋಗವನ್ನು ಹೊಂದುತ್ತಾನೆ. ||೮||

ವಸಂತ ನವರಾತ್ರಿಗಳಲ್ಲಿ ಮಲ್ಲಿಗೆಯ ಮೊಗ್ಗುಗಳಿಂದ ರಾಜಶ್ಯಾಮಲಾ ದೇವಿಯನ್ನು ಸಹಸ್ರನಾಮ ರಹಸ್ಯನಾಮ ಪಠನ ಪೂರ್ವಕವಾಗಿ ಅರ್ಚನಮಾಡಿದರೆ ದೇವಿಯು ರಾಜವಶ್ಯತೆ ಎಂಬ ಫಲವನ್ನು ಕೊಡುವಳು. ಸಪ್ತಮೀ ಶುಕ್ರವಾರಗಳ ಯೋಗವುಳ್ಳ ವಿಶೇಷದಿನದ ರಾತ್ರಿಯ ಪ್ರಥಮಯಾಮದಲ್ಲಿ ಭಾರ್ಯಾಮೋಹನ ಚಕ್ರದಲ್ಲಿ ಕಲ್ಹಾರಪುಷ್ಪಗಳ ಸಹಸ್ರನಾಮಾರ್ಚನೆಯು ದೇವತಾಸಾಲೋಕ್ಯವನ್ನು ಕೊಡುವುದು. ಸಾಲೋಕ್ಯವೆಂದರೆ ದೇವತಾಲೋಕದಲ್ಲಿ ವಾಸಿಸುವುದೆಂಬ ಒಂದು ಬಗೆಯ ಮುಕ್ತಿ. ಅದೇ ರಾತ್ರಿಯ ದ್ವಿತೀಯಯಾಮದಲ್ಲಿ ಆಚರಿಸಿದ ಪಾರಿಜಾತ ಪುಷ್ಪಗಳ ಸಹಸ್ರನಾಮಾರ್ಚನೆಯು ದೇವತಾಸಾಮೀಪ್ಯ ಅಥವಾ ದೇವತಾ ಸನ್ನಿಧಿಯಲ್ಲಿ ವಾಸಮಾಡುವುದೆಂಬ ಇನ್ನೊಂದು ಬಗೆಯ ಮುಕ್ತಿಯನ್ನು ಕೊಡುವುದು. ಅದೇ ರಾತ್ರಿಯ ತೃತೀಯ ಯಾಮದಲ್ಲಿ ಮಾಡುವ ಮಂದಾರಪುಷ್ಪಗಳ ಸಹಸ್ರನಾಮಾರ್ಚನೆಯು ದೇವತೆಯ ಸಮಾನರೂಪಪ್ರಾಪ್ತಿ ಅಥವಾ ಸಾರೂಪ್ಯವೆಂಬ ಒಂದು ಬಗೆಯ ಮುಕ್ತಿಗೆ ಸಾಧನವು. ಅದೇ ದಿನದ ಚತುರ್ಥಯಾಮದಲ್ಲಿ ಸಂಪಿಗೆ ಹೂಗಳ ಸಹಸ್ರನಾಮಾರ್ಚನೆಯನ್ನು ಮಾಡಿ ದೇವತಾ ಸಾಯುಜ್ಯವೆಂಬ ಮುಕ್ತಿಯನ್ನು ಹೊಂದುವನು. ಸರ್ವರಾತ್ರಿಗಳಲ್ಲಿಯೂ ಮಲ್ಲಿಗೆಯ ಹೂಗಳಿಂದ ಜಗನ್ಮೋಹನಚಕ್ರದಲ್ಲಿ ಪೂಜಿಸಲ್ಪಟ್ಟ ಶ್ಯಾಮಲಾಂಬಾ ದೇವಿಯು ಇಷ್ಟಾರ್ಥಗಳನ್ನು ಕೊಡುವಳು. ||೯||

ಗ್ರೀಷ್ಮಕಾಲೇ ಸರ್ವರಾತ್ರಿಷು ಶ್ರೀ ಚಂದನವಿಲಿಪ್ತಭಾರ್ಯಾಜಗನ್ಮೋಹನಚಕ್ರಂ ಪ್ರೂಜಯನ್ ಸರ್ವಸಿದ್ಧಿಮಾಪ್ನೋತಿ । ದೂರ್ವಾಭಿಃ ಪೂಜಯನ್ ಮಹದಾಯುಷ್ಯಮಶ್ನುತೇ । ಅಷ್ಟಮ್ಯಾಂ ಶುಕ್ರವಾರಯುಕ್ತಾಯಾಂ ರಾತ್ರೌ ಜಗನ್ಮೋಹನಚಕ್ರೇ ರಾಜಶ್ಯಾಮಲಾಂಬಾಂ ಶ್ರೀಚಂದನೇನ ಪೂಜಯನ್ ಮಾನವೋ ಗಂಧಲಿಪ್ತೋ ಜಗನ್ಮೋಹಕೋ ಭವತಿ । ಮಹಾನವಮ್ಯಾಂ ಶುಕ್ರವಾಸರಯುಕ್ತಾಯಾಂ ರಾತ್ರೌ ಜಗನ್ಮೋಹನಚಕ್ರೇ ಕುಂಕುಮಾಕ್ಷತೈರ್ದೇವತಾಂ ಪೂಜಯಿತ್ವಾ ಪೂಜಿತಾಕ್ಷತಾನ್ ರಾಜ್ಞೇ ನಿವೇದಯೇತ್ । ರಾಜಾ ದಾಸಭಾವಮಾಪ್ನೋತಿ । ತ್ರಯೋದಶ್ಯಾಂ ಶುಕ್ರವಾಸರ ಯುಕ್ತಾಯಾಂ ರಾತ್ರೌ ಭಾರ್ಯಾಜಗನ್ಮೋಹನಚಕ್ರಂ ಪೂಜಯನ್ ಮಾನವಃ ಕಾಮಸುಂದರೋ ಭವತಿ ॥೧೦॥

ಚಂದ್ರದರ್ಶನಯುಕ್ತಾಯಾಂ ದ್ವಿತೀಯಾಯಾಂ ಶುಕ್ರವಾರಯುಕ್ತಾಯಾಂ ಭಾರ್ಯಾಜಗನ್ಮೋಹನಚಕ್ರೇ ರಾಜಶ್ಯಾಮಲಾಂಬಾಂ ಶ್ವೇತಗಂಧಾಕ್ಷತೈಃ ಶ್ವೇತಪುಷ್ಪೈಶ್ಚ ಪೂಜಯನ್ ಸಾಧಕೋ ದೇಹಾಂತೇ ರಾಜಾ ಭವತಿ ॥೧೧॥

ಸರ್ವಭೋಗಪ್ರದಾ ಸರ್ವಸೌಭಾಗ್ಯಪ್ರದಾ ದೀರ್ಘಾಯುಷ್ಯಪ್ರದಾ ಮಹಾಯೋಗಪ್ರದಾ ಮಹಾಮಂಗಲಪ್ರದಾ ಕಾಮ್ಯಪ್ರದಾ ಶ್ರೀರಾಜಶ್ಯಾಮಲಾ ದೇವೇಂದ್ರಭೋಗಪ್ರದಾ ಭವತಿ । ಸರ್ವಕಾಮ್ಯರಹಸ್ಯಪೂಜಾಂತೇ ಮೈಥುನಂ ದೇವತಾಪ್ರೀತಿಕರಂ ಭವತಿ । ಮೋಕ್ಷಪ್ರದಂಭವತಿ । ಸ ಏವ ಭೋಗಾಪವರ್ಗಃ । ಗುರ್ವನುಜ್ಞಯಾ ಗುಪ್ತಃ ಕ್ಷಪಣಕೋ ಮುಕ್ತೋ ಭವತಿ । ಏವಂ ಕಾಂತಾಯಾಃ ಪೂಜಿತಾ ಸ್ವರ್ಣಚಕ್ರೇ ಶ್ಯಾಮಲಾ ಮಂಗಲಪ್ರದಾ ಭವತಿ । ದ್ರೋಹಿಣಾಂ ನೋಪದೇಶಃ ಕ್ಷಪಣಕಾನಾಂ ಪಂಚಾಧಿಕರಣ್ಯೈಃ ಪರೋ ಮೋಕ್ಷೋ ನಾನ್ಯಥೇತಿ ಯ ಏವಂ ವೇದ ಇತ್ಯುಪನಿಷತ್ ॥೧೨॥

ಗ್ರೀಷ್ಮಋತುವಿನ ಸರ್ವರಾತ್ರಿ ವೇಳೆಗಳಲ್ಲಿಯೂ ಜಗನ್ಮೋಹನ ಚಕ್ರವನ್ನು ಶ್ರೀ ಚಂದನದಿಂದ ಲೇಪಿಸಿ ದೇವಿಯನ್ನು ಪೂಜಿಸಲಾಗಿ ಸರ್ವಸಿದ್ಧಿಗಳನ್ನೂ ಹೊಂದುವನು. ಗರಿಕೆಗಳಿಂದ ದೇವಿಯನ್ನು ಪೂಜಿಸಿ ಪೂರ್ಣ ಆಯುಷ್ಯವನ್ನು ಹೊಂದುತ್ತಾನೆ. ಶುಕ್ರವಾರದಿಂದ ಕೂಡಿದ ಅಷ್ಟಮೀ ತಿಥಿಯ ರಾತ್ರಿಯಲ್ಲಿ ಜಗನ್ಮೋಹನ ಚಕ್ರವನ್ನು ಶ್ರೀ ಚಂದನದಿಂದ ಲೇಪಿಸಿ ರಾಜಶ್ಯಾಮಲಾಂಬಾ ದೇವಿಯನ್ನು ಪೂಜಿಸಿದ ಮಾನವನು ಸುಗಂಧಮಯ ಅವಯವವುಳ್ಳವನೂ ಜಗತ್ತಿಗೆ ಮೋಹಕನೂ ಆಗುವನು. ಶುಕ್ರವಾರದಿಂದ ಕೂಡಿದ ಮಹಾನವಮಿಯ ರಾತ್ರಿಯಲ್ಲಿ ಕುಂಕುಮಮಿಶ್ರವಾದ ಅಕ್ಷತಗಳಿಂದ ಜಗನ್ಮೋಹನ ಚಕ್ರದಲ್ಲಿ ದೇವಿಯನ್ನು ಪೂಜಿಸಿ ಆ ಪ್ರಸಾದ ರೂಪವಾದ ಅಕ್ಷತಗಳನ್ನು ರಾಜನಿಗೆ ಅರ್ಪಿಸಬೇಕು. ಅದರಿಂದ ರಾಜನು ಸಾಧಕನಿಗೆ ಅರ್ಪಿಸಬೇಕು. ಶುಕ್ರವಾರದಿಂದ ಕೂಡಿದ ತ್ರಯೋದಶೀ ಎಂಬ ವಿಶೇಷದಿನದ ರಾತ್ರಿಯಲ್ಲಿ ದೇವಿಯನ್ನುದ್ದೇಶಿಸಿ ಜಗನ್ಮೋಹನ ಚಕ್ರದ ಪೂಜೆಯನ್ನು ಮಾಡಿದ ಮಾನವನು ಮನ್ಮಥನಂತೆ ಸುಂದರನಾಗುವನು. ||೧೦||

ಶುಕ್ರವಾರದಿಂದಕೂಡಿ ಚಂದ್ರದರ್ಶನ ದೊರಕುವ ಶುಕ್ಲಪಕ್ಷದ ದ್ವಿತೀಯಾ ತಿಥಿಯಲ್ಲಿ ಶ್ವೇತಗಂಧ ಅಕ್ಷತಗಳಿಂದಲೂ ಶ್ವೇತಪುಷ್ಪಗಳಿಂದಲೂ ಜಗನ್ಮೋಹನ ಚಕ್ರದಲ್ಲಿ ರಾಜಶ್ಯಾಮಲಾಂಬಾದೇವಿಯನ್ನು ಪೂಜಿಸಿದ ಸಾಧಕನು ಈ ದೇಹವನ್ನು ತ್ಯಜಿಸಿ ದೇಹಾಂತರವನ್ನು ಹೊಂದಿ ರಾಜನಾಗುವನು. ||೧೧||

ಈ ರೀತಿಯಲ್ಲಿ ಆರಾಧಿಸಲ್ಪಟ್ಟ ರಾಜಶ್ಯಾಮಲಾಂಬಾದೇವಿಯು ಸರ್ವಭೋಗ ಸೌಖ್ಯವನ್ನೂ ಸಮಸ್ತ ಸೌಭಾಗ್ಯವನ್ನೂ ದೀರ್ಘವಾದ ಆಯುಷ್ಯವನ್ನೂ ವಿವಿಧ ಫಲಗಳನ್ನು ಕೊಡುವ ಮಹಾಯೋಗಗಳನ್ನೂ ಮಹಾಮಂಗಲವನ್ನೂ ಸಮಸ್ತ ಕಾಮ್ಯ ಫಲಗಳನ್ನೂ ಕೊಡುವುದಲ್ಲದೇ ದೇವೇಂದ್ರಸಮಾನ ಭೋಗವನ್ನು ಸಾಧಕನಿಗೆ ಅನುಗ್ರಹಿಸುವಳು. ಈ ರೀತಿಯಾಗಿ ಅನೇಕ ಫಲಗಳನ್ನು ಸಾಧಿಸಲು ಅನುಕೂಲವಾದ ಉಪಾಸನೆಯನ್ನೂ ವಿವಿಧ ಪ್ರಯೋಗ ವಿಧಾನಗಳನ್ನೂ ಇಲ್ಲಿ ವಿವರಿಸಿದೆ. ಈ ಎಲ್ಲ ಕಾಮ್ಯಪ್ರಯೋಗಗಳನ್ನೂ ಅನುಷ್ಠಾನಮಾಡಿದ ಸಮಾಪ್ತಿಸಮಯದಲ್ಲಿ ದೇವತಾ ತೃಪ್ತಿಗೋಸ್ಕರ ಮೈಥುನವನ್ನು ಆಚರಿಸಬೇಕು. ಅದು ದೇವತಾತೃಪ್ತಿಗೂ ತನ್ಮೂಲಕ ಮೋಕ್ಷಸಾಧನೆಗೂ ಅನುಕೂಲವಾದುದು. ಈ ಉಪಾಸನೆಯು ಒಂದೇ ಭೋಗ–ಮೋಕ್ಷಗಳೆಂಬ ಎರಡು ಬಗೆಯ ಫಲಗಳನ್ನೂ ಕೊಡುವುದು. ಈ ವಿದ್ಯೆಯನ್ನು ಆಚರಿಸುವ ಸಾಧಕನು ತನ್ನ ಸದ್ಗುರುವಿನ ಅನುಜ್ಞೆಯನ್ನು ತೆಗೆದುಕೊಂಡು ರಹಸ್ಯವಾಗಿ ಅನುಷ್ಠಾನಮಾಡಿದವನೂ ಕ್ಷಪಣಕನೆಂದು ಕರೆಯಲ್ಪಟ್ಟವನೂ ಆಗಿ ಕಡೆಗೆ ಮೋಕ್ಷವನ್ನು ಹೊಂದುವನು. ಈ ರೀತಿಯಾಗಿ ಸುವರ್ಣಚಕ್ರ ಪ್ರಾಯ

ಓಂ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ
ಸ್ವಸ್ತಿ ನಃ ಪೂಷಾ ವಿಶ್ವವೇದಾಃ ।
ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ
ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

**ಇತಿ ರಾಜಶ್ಯಾಮಲಾರಹಸ್ಯೋಪನಿಷತ್ ಸಮಾಪ್ತಾ.**



ವಾದ ಭಾರ್ಯೆಯು ಜಗನ್ಮೋಹನ ಚಕ್ರದಲ್ಲಿ ಪೂಜಿಸಲ್ಪಟ್ಟ ದೇವಿಯು ಸಮಸ್ತ ಮಂಗಲಗಳನ್ನೂ ಕೊಡುವಳು. ಇದನ್ನು ಈ ವಿದ್ಯಾದ್ರೋಹಿಗಳಿಗೆ ಉಪದೇಶಿಸ ಬಾರದು. ಇದನ್ನು ಸೇವಿಸಿದ ಕ್ಷಪಣಕರಿಗೆ ಇಲ್ಲಿ ಉಪಕ್ರಮದಲ್ಲಿ ಹೇಳಿದ ಮಂತ್ರ ಜಪ, ನ್ಯಾಸ, ಸ್ತೋತ್ರ, ಪೂಜಾ, ಮೈಥುನಗಳೆಂಬ ಐದು ಅಧಿಕರಣಗಳ ಅನುಷ್ಠಾನ ದಿಂದ ಮೋಕ್ಷಪ್ರಾಪ್ತಿಯಾಗುವುದು. ಇದನ್ನು ಬಿಟ್ಟರೆ ಮೋಕ್ಷಕ್ಕೆ ಬೇರೆ ಸಾಧನವು ಇಲ್ಲ. ಇಲ್ಲಿಗೆ ಅನುಷ್ಠೇಯಗಳಾದ ಪ್ರಯೋಗವಿಧಾನದ ವಿವರಣೆಯು ಮುಗಿಯಿತು. ಇದರ ಮಹಿಮೆಯನ್ನು ಭಕ್ತಿಯಿಂದ ಶ್ರವಣಮಾಡಿ ತಿಳಿದವನಿಗೂ ಇಂತಹ ಅನೇಕ ಮಹಾಫಲಗಳ ಲಾಭವಾಗುವುದು. ಸಮಾಪ್ತಿಯನ್ನು ಸೂಚಿಸುವುದಕ್ಕೋಸ್ಕರ ಕಡೆಯಲ್ಲಿ "ಇತ್ಯುಪನಿಷತ್" ಎಂಬ ವಾಕ್ಯವು ಪಠಿತವಾಗಿದೆ. ಮೊದಲಿನಂತೆ ಸಮಾಪ್ತಿಸಮಯದಲ್ಲಿಯೂ ಮಂತ್ರಾರ್ಥಸ್ಮರಣ ಪೂರ್ವಕವಾಗಿ ಶಾಂತಿಮಂತ್ರಪಾಠ ವನ್ನು ದುರಿತ ನಿವೃತ್ತಿಗೋಸ್ಕರ ಸಂಪ್ರದಾಯವನ್ನನುಸರಿಸಿ ಪಠಿಸಬೇಕು. ||೧೨||

ರಾಜಶ್ಯಾಮಲಾರಹಸ್ಯೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

## ॥ ಶ್ಯಾಮೋಪನಿಷತ್ ॥

ಓಂ ಕ್ರೀಂ ಅಥ ಹೈನಾಂ ಬ್ರಹ್ಮರಂಧ್ರೇ ಬ್ರಹ್ಮಸ್ವರೂಪಿಣೀಮಾಪ್ನೋತಿ ಸುಭಗಾಂ ಶುಭಧಾತುಕಾಮರೇಫೇಂದಿರಾ ಸಮಷ್ಟಿರೂಪಿಣೀಮೇತತ್ತ್ರಿಗುಣಮಾದೌ ತದನು ಕೂರ್ಚಬೀಜದ್ವಯಂ ವ್ಯೋಮಷಷ್ಠಸ್ವರಬಿಂದುಮೇಲನರೂಪಂ ತದನು ಭುವನೇಶೀದ್ವಯಂ ಭವತು ವ್ಯೋಮಜ್ವಲನೇಂದಿರಾಶೂನ್ಯಮೇಲನರೂಪಂ ತತೋ ದಕ್ಷಿಣೇ ಕಾಲಿಕೇ ಚೇತ್ಯಪಿ ತತೋ ಮುಖಬೀಜ ಸಪ್ತಕಮುಚ್ಚಾರ್ಯ ಬೃಹದ್ಭಾನುಜಾಯಾಮುಚ್ಚರೇತ್ । ಅಯಂ ಸಮಂತ್ರೋತ್ತಮಃ ॥೧॥

॥ ಶ್ರೀಃ ॥

# ಶ್ಯಾಮೋಪನಿಷತ್ತಿನ ಕನ್ನಡ ಅನುವಾದವು.

ಅಥರ್ವವೇದದ ಶಾಖೆಯ ಸೌಭಾಗ್ಯಕಾಂಡಕ್ಕೆ ಸೇರಿದ ಶಾಕ್ತೋಪನಿಷದ್ವರ್ಗದಲ್ಲಿ ಶ್ಯಾಮೋಪನಿಷತ್ ಎಂಬುದೊಂದು ದೇವೀಪರವಾದ ಉಪನಿಷತ್ತು ಅಂತರ್ಗತವಾಗಿದೆ. ಇದು ದೇವಿಯ ಮಂತ್ರಜಪ, ಯಂತ್ರವಿಧಾನ ಪೂಜಾ, ಫಲಕೀರ್ತನ ಮುಂತಾದ ವಿಷಯಗಳನ್ನು ಪ್ರತಿಪಾದಿಸುತ್ತಿದೆ. ಪ್ರಾರಂಭದಲ್ಲಿ ದೇವಿಯನ್ನು ಅಭಿವ್ಯಂಜನಮಾಡುವ ಮುಖ್ಯ ಬೀಜಾಕ್ಷರವಾದ "ಕ್ರೀಂ" ಎಂಬುದನ್ನು ಪರಬ್ರಹ್ಮವಾಚಕವಾದ ಓಂಕಾರದೊಡನೆ ಸೇರಿಸಿ ಪಠಿಸಿರುವದು ಮಂಗಲಾರ್ಥವಾಗಿ ದೇವಿಯ ಅನುಸಂಧಾನವನ್ನುಂಟುಮಾಡುವುದು. ಸಾಧಕಮಾನವನು ದೇವಿಯನ್ನು ಇಲ್ಲಿ ಹೇಳಿರುವ ವಿಧಾನಗಳ ಅನುಷ್ಠಾನದಿಂದ ಬ್ರಹ್ಮರಂಧ್ರಸ್ಥಾನದಲ್ಲಿ ಬ್ರಹ್ಮಸ್ವರೂಪಳನ್ನಾಗಿ ಸಾಕ್ಷಾತ್ಕರಿಸುವನು. ಮುಂದಿನ ಉಪನಿಷದ್ವಾಕ್ಯಗಳಿಂದ ದೇವೀಮಂತ್ರದ ಬೀಜಾಕ್ಷರಗಳ ಉದ್ಧಾರಕ್ರಮವನ್ನು ತಿಳಿಯಬಹುದು. ಮೊದಲು ಸುಭಗಾ ಎಂಬ ಸಂಕೇತವುಳ್ಳ ವರ್ಣಗಳನ್ನು ಪಠಿಸುವುದು. ಸುಭಗಾ ಎಂಬ ಸಂಕೇತವು ಶುಭ ಎಂಬ ದೀಪ್ತಿ ಅರ್ಥವನ್ನು ಕೊಡುವ ಧಾತುವು ಸಂಬಂಧಿಸಿ ಆಗಿರುವುದು. ಈ ಸಂಕೇತವುಳ್ಳ ವರ್ಣರಾಶಿಯಾವುದೆಂದರೆ ಕಾಮ=ಕಕಾರ, ರೇಫ, ಇಂದಿರಾ=ಈಕಾರ, ಅನುಸ್ವಾರ ವೆಂಬ ವರ್ಣಗಳು ಸಮಷ್ಟಿಯಿಂದ ಸೇರಿ ಲಭಿಸುವ "ಕ್ರೀಂ" ಎಂಬುದಾಗಿದೆ. ಇದನ್ನು ಮೂರುಸಲ ಆವೃತ್ತಿಮಾಡಿ ಪಾಠಮಾಡಬೇಕು. ಆಮೇಲೆ ಕೂರ್ಚವೆಂಬ ಸಂಕೇತವುಳ್ಳ ವರ್ಣಗಳನ್ನು ಪಠಿಸುವುದು. ಈ ಸಂಕೇತದಿಂದ ತಿಳಿಯಬಹುದಾದ ವರ್ಣಗಳು ವ್ಯೋಮ=ಹಕಾರ, ಷಷ್ಠಸ್ವರ=ಊಕಾರ, ಬಿಂದು=ಅನುಸ್ವಾರವೆಂಬ ವರ್ಣಗಳು ಸಮಷ್ಟಿಯಿಂದ ಸೇರಿ ಲಭಿಸುವ "ಹೂಂ" ಎಂಬುವಾಗಿವೆ. ಇದನ್ನು ಎರಡು ಸಲ ಪಠಿಸಬೇಕು. ಆಮೇಲೆ ಭುವನೇಶೀ ದೇವಿಯ ಮಂತ್ರದ ಬೀಜಾಕ್ಷರವು. ಇದನ್ನು ಎರಡು ಸಲ ಪಠಿಸಬೇಕು. ಆ ಮಂತ್ರದ ವಿವರಣೆಯು ವ್ಯೋಮ=ಹಕಾರ, ಜ್ವಲನ=ರೇಫ, ಇಂದಿರಾ=ಈಕಾರ, ಶೂನ್ಯ—ಅನುಸ್ವಾರಗಳು ಸೇರಿ ಆಗುವ "ಹ್ರೀಂ" ಎಂಬುದಾಗಿ ಹೇಳಲ್ಪಟ್ಟಿದೆ. ಆಮೇಲೆ ದಕ್ಷಿಣೇ ಕಾಲಿಕೇ ಎಂಬ ಎರಡು ಸಂಬೋಧನ ಶಬ್ದಗಳನ್ನು ಅದೇ ರೂಪದಿಂದ ಉಚ್ಚರಿಸುವುದು. ಅನಂತರದಲ್ಲಿ ಮೊದಲಿನ ಏಳು ಬೀಜಾಕ್ಷರಗಳನ್ನೂ ಕಡೆಯಲ್ಲಿ ಸ್ವಾಹಾ ಶಬ್ದವನ್ನೂ ಪಠಿಸಬೇಕು. ಈ ರೀತಿಯ ಪಾಠದಿಂದ "ಓಂ ಕ್ರೀಂ ಕ್ರೀಂ ಕ್ರೀಂ ಹೂಂ ಹೂಂ ಹ್ರೀಂ ಹ್ರೀಂ ದಕ್ಷಿಣೇ ಕಾಲಿಕೇ ಕ್ರೀಂ ಕ್ರೀಂ ಕ್ರೀಂ ಹೂಂ ಹೂಂ ಹ್ರೀಂ ಹ್ರೀಂ ಸ್ವಾಹಾ" ಎಂಬ ವರ್ಣರಾಶಿಯಿಂದ ಕೂಡಿದ ಮಂತ್ರವು ನಿಷ್ಪನ್ನವಾಗುವುದು. ಈ ಮಂತ್ರವು ಉತ್ತಮಮಂತ್ರಗಣದಲ್ಲಿ ಒಂದಾದುದು. ಇದು ವಿವಿಧ ಮಹಿಮೆಯಿಂದ ಕೂಡಿ ಅನೇಕ ಫಲಗಳನ್ನು ಕೊಡುವ ಮಂತ್ರವು ಆಗಿದೆಯೆಂದು ತಾತ್ಪರ್ಯವು. ||೧||

ಯ ಇಮಾಂ ಸಕೃಜ್ಜಪನ್ ಸ ತು ದೇವೇಶ್ವರಃ । ಸ ತು ವಿಶ್ವೇಶ್ವರಃ । ಸ ತು ನಾರೀಶ್ವರಃ । ಸ ತು ಸರ್ವಗುರುಃ । ಸ ತು ಸರ್ವನಮಸ್ಯಃ । ಸ ತು ಸರ್ವವೇದೈರಧೀತೋ ಭವತಿ । ಸ ಸರ್ವೇಷು ತೀರ್ಥೇಷು ಸ್ನಾತೋ ಭವತಿ । ಸ ಸ್ವಯಂ ಸದಾಶಿವಃ ॥೨॥

ತ್ರಿಕೋಣಂ ತ್ರಿಕೋಣಂ ತ್ರಿಕೋಣಂ ತ್ರಿಕೋಣಂ ಪುನಶ್ಚೈವ ತ್ರಿಕೋಣಂ ಸಾಷ್ಟಪತ್ರಂ ಸಕೇಸರಂ ಭೂಪುರೈಕೇಣ ಸಂಯುತಂ ತಸ್ಮಿನ್ ದೇವೀಂ ಹೃಲ್ಲೇಖಾಮಂಗೇ ವಿನ್ಯಸ್ಯ ಧ್ಯಾಯೇತ್ । ಅಭಿನವಜಲದನೀಲಾ ಕುಟಿಲ ದಂಷ್ಟ್ರಾ ವರಾಭಯಖಡ್ಗಮುಂಡಸಹಿತಹಸ್ತಾ ಕಾಲಿಕಾ ಧ್ಯೇಯಾ ॥೩॥

ಕಾಲೀ ಕಪಾಲಿನೀ ಕುಲ್ಲಾ ಕುರುಕುಲ್ಲಾ ವಿರೋಧಿನೀ ವಿಪ್ರಚಿತ್ತೇತಿ ಬಹಿಃ ಷಟ್ಕೋಣಗಾಃ । ಉಗ್ರಾ ಉಗ್ರಪ್ರಭಾ ದೀಪ್ತಾ ನೀಲಾ ಘನಾ ವಲಾಕಾ ಮಾತ್ರಾ ಮುದ್ರಾ ಅಮಿತೇತಿ ನವಕೋಣಗಾಃ । ಬ್ರಾಹ್ಮೀ ನಾರಾಯಣೀ ಮಾಹೇಶ್ವರೀ ಚಾಮುಂಡಾ ವಾರಾಹೀ ನಾರಸಿಂಹೀ ಕೌಮಾರೀ ಚಾಪರಾಜಿತೇತ್ಯಷ್ಟಪತ್ರಗಾಃ । ಚತುಷ್ಕೋಣೇಷು ಚತ್ವಾರೋ ಮಾಧವರುದ್ರವಿನಾಯಕಸೌರಾಃ । ದಿಕ್ಷು ದಿಕ್ಪಾಲಾಃ ॥೪॥

ಯಾವ ಉಪಾಸಕ ಮನುಷ್ಯನು ಮಂತ್ರವನ್ನೂ ಮಂತ್ರದಲ್ಲಿ ಐಕ್ಯವನ್ನು ಹೊಂದಿರುವುದರಿಂದ ಸಾಕ್ಷಾತ್ತಾಗಿ ದೇವಿಯನ್ನೂ ಒಂದುಸಲ ಮಾತ್ರ ಜಪಿಸುವನೋ ಅಂತಹ ಮನುಷ್ಯನು ಮುಂದೆ ಹೇಳುವಂತೆ ಅಸಾಧ್ಯವೂ ಅದ್ಭುತವೂ ಆದ ವಿವಿಧ ಫಲಗಳಿಗೆ ಭಾಗಿಯಾಗುತ್ತಾನೆ. ಅವನು ನಿಖಿಲ ದೇವತೆಗಳಿಗೂ, ಸಮಸ್ತ ಪ್ರಪಂಚಕ್ಕೂ, ಸಕಲ ಕಾಮಿನಿಯರಿಗೂ ಈಶ್ವರನಾಗುವನು. ಸರ್ವರಿಗೂ ಹಿತವನ್ನು ಉಪದೇಶಿಸುವ ಗುರುಸ್ವರೂಪನಾಗಿ ಸರ್ವರಿಗೂ ವಂದ್ಯನಾಗುವನು. ಈ ಮಂತ್ರವನ್ನು ಒಂದುಸಲ ಮಾತ್ರ ಜಪಿಸಿದ್ದರಿಂದಲೆ ಸಕಲವೇದಗಳನ್ನು ಅಧ್ಯಯನಮಾಡಿದಂತೆಯೂ ಗಂಗಾದಿ ಸರ್ವತೀರ್ಥಗಳಲ್ಲಿ ಸ್ನಾನಮಾಡಿದಂತೆಯೂ ಆಯಾಯಸಮಸ್ತ ಪುಣ್ಯಗಳನ್ನು ಆರ್ಜಿಸುತ್ತಾನೆ. ಮತ್ತು ಸಾಕ್ಷಾತ್ ಸದಾಶಿವ ಸ್ವರೂಪನೇ ಆಗುವನು. ||೨||

ಮುಂದಿನ ಭಾಗವು ಯಂತ್ರರಚನಾಕ್ರಮವನ್ನೂ ಯಂತ್ರದ ಆಯಾಯ ಸ್ಥಾನಗಳಲ್ಲಿ ಪೂಜಿಸಬೇಕಾದ ಅಂಗದೇವತಾ ಮುಂತಾದುವುಗಳನ್ನೂ ತಿಳಿಸುವುದು. ಯಂತ್ರವನ್ನು ನಿರ್ಮಿಸುವಾಗ ಕ್ರಮವಾಗಿ ಐದು ತ್ರಿಕೋಣಗಳನ್ನು, ಕೇಸರಗಳಿಂದ ಕೂಡಿದ ಅಷ್ಟದಲ ಕಮಲವನ್ನು ಮತ್ತು ಅದರ ಬಹಿರ್ಭಾಗದಲ್ಲಿ ಒಂದು ಭೂಗೃಹ ವನ್ನೂ ರಚಿಸಬೇಕು. ಇದು ಯಂತ್ರ ರಚನಾಕ್ರಮವು,ಅಂತಹ ಯಂತ್ರದಲ್ಲಿಯೂ ತನ್ನ ಶರೀರದಲ್ಲಿಯೂ ದೇವಿಯನ್ನು ನ್ಯಾಸಮಾಡಿ ಧ್ಯಾನಿಸಬೇಕು. ದೇವಿಯನ್ನು ಧ್ಯಾನ ಮಾಡುವಾಗ ಉಪಾಸಕರಿಗೆ ದರ್ಶನವನ್ನು ಕೊಟ್ಟು ಅನುಗ್ರಹಿಸಬೇಕೆಂಬ ಇಚ್ಛೆ ಯಿಂದ ಮುಂದೆ ತೋರಿಸುವ ಆಕಾರವನ್ನು ಧರಿಸಿದವಳನ್ನಾಗಿ ಸ್ಮರಿಸಬೇಕು. ಕಾಲಿಕಾ ದೇವಿಯು ನೀರುಂಡ ಕಾರ್ಮೋಡದಂತೆ ಕಪ್ಪು ಬಣ್ಣವುಳ್ಳವಳೂ ವಕ್ರವಾದ ಹಲ್ಲುಗಳಿಂದ ಕೂಡಿದವಳೂ ವರ, ಅಭಯ, ಖಡ್ಗ, ಮುಂಡಗಳನ್ನು ಚತುರ್ಭುಜ ಗಳಿಂದ ಧರಿಸಿದವಳೂ ಆಗಿರುವಳು. ||೩||

ಯಂತ್ರದ ಷಟ್‌ಕೋಣಗಳಲ್ಲಿ ಕ್ರಮವಾಗಿ ಪೂಜಿಸಲ್ಪಡಬೇಕಾದ ಆರು ದೇವತೆಗಳ ಹೆಸರುಗಳನ್ನು ಕಾಲೀ, ಕಪಾಲಿನೀ, ಕುಲ್ಲಾ, ಕುರುಕುಲ್ಲಾ, ವಿರೋಧಿನೀ, ವಿಪ್ರಚಿತ್ತಾ ಎಂಬುದಾಗಿ ತಿಳಿಯಬಹುದು, ಹಾಗೆಯೇ ಬಾಹ್ಯನವಕೋಣಗಳಲ್ಲಿ ಪೂಜಿಸಬೇಕಾದ ದೇವಿಗಳಿಗೆ ಕ್ರಮವಾಗಿ ಉಗ್ರಾ, ಉಗ್ರಪ್ರಭಾ, ದೀಪ್ತಾ, ನೀಲಾ, ಘನಾ, ಬಲಾಕಾ, ಮಾತ್ರಾ, ಮುದ್ರಾ, ಅಮಿತಾ ಎಂಬ ಒಂಭತ್ತು ಹೆಸರುಗಳು. ಬ್ರಾಹ್ಮೀ, ನಾರಾಯಣೀ, ಮಾಹೇಶ್ವರೀ, ಚಾಮುಂಡಾ, ವಾರಾಹೀ, ನಾರಸಿಂಹೀ, ಕೌಮಾರೀ, ಅಪರಾಜಿತಾ ಎಂಬ ಕ್ರಮವಾದ ಎಂಟು ನಾಮಾಂಕಿತರಾದ ಅಷ್ಟದೇವಿಯರನ್ನು ಅಷ್ಟದಲಗಳಲ್ಲಿ ಪೂಜಿಸಬೇಕು. ಯಂತ್ರದ ಚತುಷ್ಕೋಣಗಳಲ್ಲಿ ಮಾಧವ, ರುದ್ರ, ವಿನಾಯಕ, ಸೂರ್ಯರೆಂಬ ನಾಲ್ಕು ದೇವತೆಗಳನ್ನೂ ಅಷ್ಟದಿಕ್ಕುಗಳಲ್ಲಿ ಇಂದ್ರಾದಿ ಎಂಟು ದಿಕ್ಪಾಲಕರನ್ನೂ ಪೂಜಿಸಬೇಕು. ||೪||

ದೇವೀಂ ಸರ್ವಾಂಗೇಣಾದೌ ಸಂಪೂಜ್ಯ ಭಗೋದಕೇನ ತರ್ಪಣಂ ಪಂಚಮಕಾರೇಣ ಪೂಜನಮೇತಸ್ಯಾಃ । ಏವಂ ದ್ವಿತ್ರಿಕ್ರಮೇಣ ಕುರ್ವಾಣಾ ಮುನಯೋ ಭವಂತಿ । ನಾರಿಮಿತ್ರಾದಿಲಕ್ಷಣಮಸ್ಯ ವರ್ತತೇ । ಅಮುಷ್ಯಾ ಮಂತ್ರಪಾತಕಸ್ಯ ಗತಿರಸ್ತಿ । ನಾನ್ಯಸ್ಯೇಹ ಗತಿರಸ್ತಿ ॥೫॥

ಏತಸ್ಯಾಸ್ತಾರಾಮನೋರ್ದುರ್ಗಾಮನೋಸ್ಸುಂದರೀಮನೋರ್ವಾ ಸಿದ್ಧಿರಿದಾನೀಂ । ಸರ್ವಾಃ ಸುಪ್ತಾ ಭೂತಾಃ । ಅಸಿತಾಂಗೀ ಜಾಗರ್ತಿ । ಇಮಾಮಸಿತಾಂಗ್ಯುಪನಿಷದಂ ಯೋಽಧೀತೇ ಅಪುತ್ರೀ ಪುತ್ರೀ ಭವತಿ । ಯೋಽನ್ಯಸ್ಯ ವರದೋ ದೃಷ್ಟ್ವಾ ಜಗನ್ಮೋಹಯೇತ್ । ಗಂಗಾದಿತೀರ್ಥಕ್ಷೇತ್ರಾಣಾಮಗ್ನಿಷ್ಟೋಮಾದಿಯಜ್ಞಾನಾಂ ಫಲಭಾಗೀಯತೇ ॥೬॥

**ಇತಿ ಶ್ಯಾಮೋಪನಿಷತ್ ಸಮಾಪ್ತಾ.**

ಈ ಮಂತ್ರಸಾಧಕನು ಹಿಂದೆ ಹೇಳಿದಂತೆ ಮೊದಲು ದೇವಿಯನ್ನು ಸಕಲಾಂಗ ಪೂರ್ಣವಾಗಿ ಪೂಜಿಸಿ ಭಗೇಂದ್ರಿಯ ಉದಕದಿಂದ ಪೂಜಾಂತದಲ್ಲಿ ತರ್ಪಣವನ್ನೂ ಮಧು ಮದ್ಯಾದಿ ಮಕಾರಾದಿ ಶಬ್ದಸಂಕೇತವುಳ್ಳ ಪಂಚ ದ್ರವ್ಯಗಳ ನಿವೇದನ ರೂಪವಾದ ಪೂಜೆಯನ್ನೂ ಈ ದೇವಿಯ ತೃಪ್ತಿಗಾಗಿ ಆಚರಿಸಬೇಕು. ಈ ಅನುಷ್ಠಾನವನ್ನು ಯಥಾವಿಧಿಯಾಗಿ ಎರಡು ಅಥವಾ ಮೂರುಸಲ ಪುನಃ ಪುನಃ ನೆರವೇರಿಸುವ ಕ್ರಮದಿಂದ ಸಾಧಕರು ಮುನಿಗಳಾಗುತ್ತಾರೆ. ಮತ್ತು ಅಂತಹ ಸಾಧಕರಿಗೆ ದೇವೀ ತತ್ಪರತೆಯಿಂದ ಬಾಹ್ಯಪರಿವಾರವೇ ಕಾಣಿಸದಿರುವುದರಿಂದ ಅವರ ದೃಷ್ಟಿಯಲ್ಲಿ ಯಾರೊಬ್ಬರೂ ಶತ್ರು, ಅಥವಾ ಮಿತ್ರಲಕ್ಷಣದ ಭಾವನೆಯೇ ಇಲ್ಲ. ಈ ದೇವಿಯ ಮಂತ್ರಜಪಾನುಷ್ಠಾನ ಮಾಡುವವನಿಗೆ ಮಾತ್ರವೇ ಸದ್ಗತಿಯೆಂಬ ಮೋಕ್ಷವು ಲಭಿಸುವುದು. ಇತರರಿಗೆ ಎಂದಿಗೂ ಸದ್ಗತಿಯು ದೊರೆಯುವುದಿಲ್ಲ. ||೫||

ಈ ಮಂತ್ರವನ್ನು ಜಪಿಸುವುದರಿಂದ ತಾರಾಮಂತ್ರ, ದುರ್ಗಾಮಂತ್ರ, ಸುಂದರೀ ಮಂತ್ರಗಳನ್ನು ಜಪಿಸಿ ಹೊಂದುವ ಫಲಸಿದ್ಧಿಯೂ ತತ್‌ಕ್ಷಣದಲ್ಲಿ ಲಭಿಸುವುದು. ಆದ್ದರಿಂದ ಅನೇಕ ಮಂತ್ರಗಳನ್ನು ಜಪಿಸಿ ಕಾಲಾಂತರದಲ್ಲಿ ಪರ್ಯಾಯದಿಂದ ಹೊಂದಬೇಕಾದ ಸಿದ್ಧಿಗಳನ್ನು ಈ ಮಂತ್ರವು ಏಕಕಾಲದಲ್ಲಿಯೇ ಸಾಧಿಸುವುದಾದ್ದರಿಂದ ಹಿಂದೆ ಹೇಳಿದಂತೆ ಈ ಮಂತ್ರವು ಉತ್ತಮವೆಂಬುದರಲ್ಲಿ ಸಂಶಯವಿಲ್ಲ ಎಂದು ಅಭಿಪ್ರಾಯವು. ಈ ಮಂತ್ರದಿಂದ ಉಪಾಸ್ಯಳಾದ ಶ್ಯಾಮಾ (ಕಾಳೀ) ದೇವಿಯನ್ನೂ ಇತರ ಮಂತ್ರಾಭಿಮಾನಿ ದೇವಿಯರನ್ನೂ ತುಲನಾದೃಷ್ಟಿಯಿಂದ ನೋಡಿದರೆ ಇತರ ದೇವಿಯರು ಒಂದನ್ನೂ ತಿಳಿಯದೆ ನಿದ್ರೆಹೋಗುತ್ತಿರುವರೆಂದೂ ಶ್ಯಾಮಾದೇವಿಯು ಮಾತ್ರ ಜಾಗ್ರದವಸ್ಥೆಯಲ್ಲಿರುವಳೆಂದೂ ಹೇಳಬಹುದು. ಇನ್ನು ಮುಂದೆ ದೇವೀ ಉಪಾಸನೆಯನ್ನು ವಿಧಿಸುವ ಈ ಉಪನಿಷತ್ತಿನ ಅಧ್ಯಯನಕ್ಕೂ ಕೂಡ ಮಹಾ ಫಲ ಪ್ರದಾನಶಕ್ತಿಯನ್ನು ತೋರಿಸಿದೆ. ಈ ಶ್ಯಾಮೋಪನಿಷತ್ತನ್ನು ಯಾವನು ಅಧ್ಯಯನ ಮಾಡುವನೋ ಅವನು ಸಂತತಿಯಿಲ್ಲದವನಾದರೆ ಇದರ ಮಹಿಮೆಯಿಂದ ಸಂತತಿಯನ್ನು ಹೊಂದುವನು. ತನ್ನನ್ನು ಆಶ್ರಯಿಸಿದ ಇತರರಿಗೆ ಅವರವರ ವಾಂಛಿತವಾದ ವರಗಳನ್ನು ಕೊಡಲು ಸಮರ್ಥನೂ ಮತ್ತು ದರ್ಶನಮಾತ್ರದಿಂದಲೇ ನಿಖಿಲ ಜಗತ್ತನ್ನೂ ಮೋಹಪಡಿಸಿ ತನಗೆ ವಶ್ಯವನ್ನಾಗಿ ಮಾಡುವವನೂ ಆಗುತ್ತಾನೆ. ಗಂಗಾದಿ ತೀರ್ಥಕ್ಷೇತ್ರಗಳಲ್ಲಿ ತೀರ್ಥಯಾತ್ರೆಯನ್ನು ಮಾಡಿದ್ದರಿಂದಲೂ ಅಗ್ನಿಷ್ಟೋಮಾದಿ ಮಹಾಯಜ್ಞಗಳನ್ನು ಆಚರಿಸಿದ್ದರಿಂದಲೂ ಹೊಂದಬಹುದಾದ ಪುಣ್ಯರಾಶಿ ಮತ್ತು ತತ್ಫಲಗಳನ್ನು ಅನುಭವಿಸುವನು. ಇದರ ಅಧ್ಯಯನವೇ ಈ ಮಹಾಫಲಪ್ರಾಪಕವಾಗಿರುವಾಗ ಇಲ್ಲಿ ಪ್ರತಿಪಾದಿತವಾದ ಉಪಾಸನಾ ಅನುಷ್ಠಾನದ ಫಲಗಳನ್ನು ಎಷ್ಟು ಕೀರ್ತನಮಾಡಿದರೂ ಅಲ್ಪವೇ ಆಗುವುದು. ||೬||

ಶ್ಯಾಮೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.

॥ ಶ್ರೀರಸ್ತು ॥

## ॥ ಶ್ರೀಚಕ್ರೋಪನಿಷತ್ ।

---

ಓಂ ಅಥಾಹ ವೈ ಶ್ರೀಚಕ್ರೇ ನಿತ್ಯಾಕ್ರಾಂತೇ ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿ ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಇತಿ ಪ್ರತ್ಯಹಂ ಸಸಂಗತಿ ಸಹಸ್ರಂ ಕಲಶಾನ್ ಸ್ಥಾ ಸರ್ವಾಭಾವೇ ಪೂರ್ಣಾಭಿಷೇಕಂ ಚರೇತ್ । ಪಂಚ ಪಂಚಕಂ ವಾ ಚರೇತ್ । ಸರ್ವಾಭಾವೇ ಅಮೃತತ್ವಂ ಗಚ್ಛತಿ ॥೧॥

|| ಶ್ರೀಃ ||

# ಶ್ರೀಚಕ್ರೋಪನಿಷತ್ತಿನ ಕನ್ನಡ ಅನುವಾದವು.

---

ಹಿಂದಿನ ಉಪನಿಷತ್ತುಗಳಂತೆ ಶ್ರೀಚಕ್ರದ ಮಹಿಮಾಗರ್ಭಿತವಾದ ಶ್ರೀಚಕ್ರ ಉಪನಿಷತ್ತೆಂಬುದು ದೇವೀ ಉಪನಿಷತ್ತು ಆಗಿದೆ. ಆರಂಭದಲ್ಲಿ "ಓಂ, ಅಥ" ಎಂಬ ಮಂಗಲಾರ್ಥವಾದ ಎರಡು ಪದಗಳೂ "ಅಹ, ವೈ" ಎಂಬ ಪ್ರಸಿದ್ಧಿಯನ್ನು ಸೂಚಿಸುವ ಪದಗಳೂ ಇವೆ. ಶ್ರೀ ಚಕ್ರಾರ್ಚನಾಪರರು ಇಲ್ಲಿ ಹೇಳುವ ವಿಧಾನದ ಕಾಮ್ಯಪ್ರಯೋಗ ಒಂದರ ಅನುಷ್ಠಾನದಿಂದ ವಿವಿಧಫಲಲಾಭವನ್ನು ಹೊಂದುವರು. ಮೊದಲು ನಿತ್ಯಾದೇವಿಯು ತನ್ನ ಅಭಿಮಾನಸ್ಥಾನವಾಗಿ ನಿತ್ಯವೂ ಸನ್ನಿಧಾನವನ್ನಿಟ್ಟು ಆಕ್ರಮಿಸಿರುವ ಶ್ರೀಚಕ್ರದಲ್ಲಿ "ಗೌರೀರ್ಮಿಮಾಯ" ಎಂಬ ಋಙ್ಮಂತ್ರವನ್ನು ಪೂರ್ತಿಯಾಗಿ ಹೇಳಿ ಒಂದಕ್ಕೊಂದು ಸೇರುವಂತೆ ಒಂದು ಸಹಸ್ರಕಲಶಗಳನ್ನು ಸ್ಥಾಪಿಸಿ ಪ್ರತಿದಿನವೂ ಪೂಜಿಸಿ ಅದರ ತೀರ್ಥದಿಂದ ಪೂರ್ಣಾಭಿಷೇಕವನ್ನು ಆಚರಿಸ ಬೇಕು. ಆ ಋಙ್ಮಂತ್ರಕ್ಕೆ ಅರ್ಥವನ್ನು ಮುಂದೆ ವಿವರಿಸಿದೆ. ಗೌರೀ-ಶಬ್ದ ಬ್ರಹ್ಮರೂಪವಾದ ಶಕ್ತಿಯು ಘಟಪಟಾದಿ ಪದಾರ್ಥಗಳಿಗೆ ವಾಚಕವಾಗಿ ಅವುಗಳನ್ನು ಸೃಷ್ಟಿಸಿ, "ಏಕಪದೀ, ದ್ವಿಪದೀ, ಚತುಷ್ಪದೀ, ಅಷ್ಟಾಪದೀ, ನವಪದೀ," ಎಂದರೆ ಅವ್ಯಾಕೃತರೂಪದಿಂದ ಒಂದೇಪದ, ಸುಬಂತ ತಿಙಂತ ವಿಭಾಗದಿಂದ ಎರಡು ಪದ, ನಾಮ-ಆಖ್ಯಾತ-ಉಪಸರ್ಗ-ನಿಪಾತ ಭೇದಗಳಿಂದ ನಾಲ್ಕು ಪದ, ವಿಭಕ್ತಿಸ್ವರೂಪ ದಿಂದ ಎಂಟುಪದ, ಎಂಟು ವಿಭಕ್ತಿಗಳು ಮತ್ತು ಅವ್ಯಯವನ್ನೊಳಗೊಂಡು ಒಂಭತ್ತು ಪದಗಳೆಂಬ ವಿವಿಧ ರೂಪಗಳನ್ನು ಸ್ವೀಕರಿಸುವ ವೈಖರೀ ಶಬ್ದಕ್ಕೆ ಮೂಲ ಭೂತವಾಗಿ ಮೂಲಾಧಾರವೆಂಬ ಉತ್ಕೃಷ್ಟಸ್ಥಾನದಲ್ಲಿ ಪ್ರಸಿದ್ಧವಾಗಿದೆ ಎಂದು ಮಂತ್ರಾರ್ಥವು. ಇದನ್ನು ಅನುಸಂಧಾನಮಾಡುತ್ತ ಕರ್ಮವನ್ನು ಆಚರಿಸಬೇಕು. ಶ್ರೀಚಕ್ರದಲ್ಲಿ ಸ್ಥಾಪಿಸಬೇಕಾದ ಕಲಶಗಳ ಸಂಖ್ಯೆ ಒಂದು ಸಹಸ್ರವೆಂಬುದು ಮುಖ್ಯವಾದ ಕಲ್ಪವು. ಅದಕ್ಕೆ ಶಕ್ತಿಯಿಲ್ಲದವನು ಒಂದುನೂರು, ಅಥವಾ ಒಂಭತ್ತು ಕಲಶಗಳನ್ನು ಸ್ಥಾಪಿಸಬೇಕು. ಮುಖ್ಯಕಲ್ಪವನ್ನು ಆಚರಿಸಲು ಅಸಮರ್ಥನಾದ ಅಧಿಕಾರಿಯ ಅನುಗ್ರಹಾರ್ಥವಾಗಿಯೇ ಗೌಣಕಲ್ಪಗಳನ್ನು ಹೇಳಿರುವುದಾಗಿದೆ. ಸಮರ್ಥನಾದವನು ಗೌಣಕಲ್ಪಗಳನ್ನು ಆಚರಿಸಿದರೆ ವಿಧಿಲೋಪವುಂಟಾಗುವುದು. ಈ ರೀತಿಯ ವಿಧಾನವು ಪ್ರತಿದಿನವೂ ಕರ್ತವ್ಯವಾಗಿ ಪಠಿತವಾಗಿದೆ. ಅಶಕ್ತನು ಎಂಟು ಆವೃತ್ತಿಯಿಂದ ಎಂಟು ಕಲಶಗಳ, ಅದಕ್ಕೂ ಶಕ್ತಿಹೀನನು ಐದು ಆವೃತ್ತಿ ಯಿಂದ ಐದು ಕಲಶಗಳ ಸ್ಥಾಪನ ಪೂಜನಾದಿಗಳಿಂದ ಪ್ರಯೋಗವನ್ನು ಪೂರ್ತಿ ಗೊಳಿಸಬಹುದು. ಯಾವುದಕ್ಕೂ ಶಕ್ತಿಯಿಲ್ಲದವನು ಚಕ್ರದಲ್ಲಿ ಒಂದುನೂರು ಸಂಖ್ಯೆಯಿಂದ ಅರ್ಚನವನ್ನಾದರೂ ಮಾಡಬೇಕು. ಹೀಗೆ ಪೂಜೆಮಾಡುವವನು ಅಮೃತತ್ವ ಸ್ವರೂಪವಾದ ಮೋಕ್ಷವನ್ನು ಹೊಂದುವನು. ||೧||

ಶ್ರೀಚಕ್ರನ್ಯಾಸಂ ಚರೇತ್। ಸ ವ್ಯಾಪಕತ್ವಂ ಗಚ್ಛತಿ । ಮೂಲಾಧಾರಾದ್ಬಿಲಾಂತಂ ಕ್ರಮೇಣ ನ್ಯಸೇತ್ । ಸ್ವರಾಟ್ಚಕ್ರಂ ವಿರಾಟ್ಚಕ್ರಂ ಸಮ್ರಾಟ್ಚಕ್ರಂ ವಿರಾಜ್ಯಚಕ್ರಂ ವಿಶ್ವರೂಪಚಕ್ರಂ ಶತ್ರುಜಿಚ್ಚಕ್ರಂ ಕ್ರಮೇಣ ಸಪ್ತಕಲಾಮಯಂ ನ್ಯಸೇತ್ । ಸ ಶಿವೋ ಭವೇತ್ । ಸ ಕವಿರ್ಭವೇತ್ । ಸ ಸರ್ವಸಿದ್ಧೀಶ್ವರೋ ಭವೇತ್ । ಸ ನವನಾಥಾಧಿಷ್ಠಿತೋ ಭವೇತ್ । ಸ ಭುವನಾರಾಧಿತೋ ಭವೇತ್ । ನಿರ್ವಿಕಲ್ಪೇನ ಮನಸಾ ಯಶ್ಚರೇಚ್ಛಕ್ತಿದೇಹೆ ಸ ಕಾಲೀರೂಪೋ ಭವೇತ್ । ವಿನಾ ಶಕ್ತಿಂ ನ ಮೋಕ್ಷೋ ನ ಜ್ಞಾನಂ ನ ಸತ್ಯಂ ನ ಧರ್ಮೋ ನ ತಪೋ ನ ಹರಿರ್ನ ಹರೋ ನ ವಿರಿಂಚಿಃ । ಸರ್ವಂಶಕ್ತಿಯುಕ್ತಂ ಭವೇತ್ । ತತ್ಸಂಯೋಗಾತ್ಸಿದ್ಧೀಶ್ವರೋ ಭವೇತ್ ॥ ಇತಿ ಶಿವಮ್ ॥೨॥

**ಇತಿ ಶ್ರೀಚಕ್ರೋಪನಿಷತ್ ಸಮಾಪ್ತಾ.**



ಹಿಂದೆ ಅಭಿಷೇಕ ವಿಧಿಯಿಂದ ಕೂಡಿದ ಪೂಜಾಕ್ರಮವು ಹೇಳಲ್ಪಟ್ಟಿದೆ. ಮುಂದಿನ ಭಾಗವು ಶ್ರೀಚಕ್ರದ ನ್ಯಾಸವಿಧಿ ತತ್ಫಲಗಳನ್ನು ಕೀರ್ತನಮಾಡುತ್ತದೆ. ಶ್ರೀಚಕ್ರದ ನ್ಯಾಸವನ್ನು ಆಚರಿಸಬೇಕು. ಇದರಿಂದ ಸಾಧಕನು ವ್ಯಾಪ್ತಿ (ವಿಭುತ್ವ ಅಥವಾ ಸರ್ವಾಂತರ್ಯಾಮಿತ್ವ) ಯನ್ನು ಹೊಂದುತ್ತಾನೆ. ಮೂಲಾಧಾರಾದಿ ಬ್ರಹ್ಮರಂಧ್ರದವರೆಗಿನ ಆರು ಸ್ಥಾನಗಳಲ್ಲಿ ಕ್ರಮವಾಗಿ ಸ್ವರಾಟ್ಚಕ್ರ, ವಿರಾಟ್ಚಕ್ರ, ಸಮ್ರಾಟ್ಚಕ್ರ, ವಿರಾಜ್ಯಚಕ್ರ, ವಿಶ್ವರೂಪಚಕ್ರ, ಶತ್ರುಜಿಚ್ಚಕ್ರವೆಂಬ ಆರು ಚಕ್ರಗಳನ್ನು ಸಪ್ತಕಲಾಪರಿಪೂರ್ಣವನ್ನಾಗಿ ಭಾವಿಸಿ ನ್ಯಾಸಮಾಡಬೇಕು. ಇವೆಲ್ಲ ಶ್ರೀಚಕ್ರದ ಅವಾಂತರ ಭೇದಗಳಾದ್ದರಿಂದ ಶ್ರೀಚಕ್ರದ ನ್ಯಾಸವಿಧಾನದಲ್ಲಿ ಅಂತರ್ಗತ ವಾದುವುಗಳು. ಹೀಗೆ ನ್ಯಾಸವನ್ನು ಆಚರಿಸಿದವನು ಶಿವಸ್ವರೂಪಿಯೂ ಕವಿಯೂ ಸಿದ್ಧಿಗಳಿಗೆಲ್ಲ ಈಶ್ವರನೂ ಶ್ರೀ ವಿದ್ಯಾಗುರುಪರಂಪರೆಯಲ್ಲಿ ಆದಿಭೂತರಾದ ನವನಾಥರ ಅಂಶಪೂರ್ಣನೂ ಆಗುತ್ತಾನೆ. ಮತ್ತು ಸಕಲ ಭುವನಕ್ಕೂ ಈ ಉಪಾಸಕನು ಗುರುಸ್ಥಾನದಲ್ಲಿರುವವನಾಗಿ ವಂದ್ಯನಾಗುತ್ತಾನೆ. ಉಪಾಸಕನು ತನ್ನ ಮತ್ತು ದೇವಿಯ ಐಕ್ಯಾನುಸಂಧಾನದ ಅಭ್ಯಾಸದಿಂದ ತನ್ನ ದೇಹದ ಭೇದವನ್ನು ಮರೆತು ನಿರ್ವಿಕಲ್ಪಸಮಾಧಿಭಾವನಾತ್ಮಕವಾದ ಮನಸ್ಸಿನಿಂದ ಶಕ್ತಿ ದೇಹದಲ್ಲಿಯೇ ಸಂಚರಿಸು ವುದರಿಂದ ಕಾಲಿಕಾದೇವೀಸ್ವರೂಪನಾಗುವನು. ಉಪಾಸ್ಯದೇವಿಯೆಂಬ ಧರ್ಮರೂಪ ವಾದ ಶಕ್ತಿಯನ್ನು ಬಿಟ್ಟು ಮೋಕ್ಷವೆಂಬ ಸಿದ್ಧಿಯೂ, ಜ್ಞಾನ, ಸತ್ಯ, ಧರ್ಮ, ತಪಸ್ಸು ಮುಂತಾದ ಸಾಧನಮಾರ್ಗಗಳೂ, ಹರಿ, ಹರ, ವಿರಿಂಚಿ (ಬ್ರಹ್ಮ) ಎಂಬ ಜಗದಧಿಕಾರದಲ್ಲಿ ಪ್ರವೃತ್ತರಾದ ದೇವತೆಗಳೂ ಇದೊಂದೂ ಇರುವುದಿಲ್ಲ. ಸಾಧನ, ಸಾಧ್ಯ, ಸಿದ್ಧಿಎಲ್ಲವೂ ಶಕ್ತಿದೇವಿಯ ಅಂಶವಾದ ತನ್ನ ಅಸಾಧಾರಣ ಶಕ್ತಿಯಿಂದ ಪರಿಪೂರ್ಣವಾಗಿದೆಯೆಂದೂ ಶಕ್ತಿಶೂನ್ಯವಾದ ತತ್ವವು ಯಾವುದೂ ಇಲ್ಲವೆಂದೂ ತಾತ್ಪರ್ಯವು. ಎಲ್ಲವಸ್ತುವೂ ಶಕ್ತಿಪೂರ್ಣವಾಗಿರುವುದು. ಅಂತಹ ಶಕ್ತಿಯನ್ನು ಉಪಾಸನಾದಿವಿಧಾನದಿಂದ ತನ್ನಲ್ಲಿ ಒಲಿಸಿಕೊಳ್ಳುವುದರಿಂದ ಎಲ್ಲಸಿದ್ಧಿಗಳಿಗೂ ಅಧಿಪತಿಯಾಗುವನು ಎಂಬುದಾಗಿ ಶ್ರೀಚಕ್ರಾರ್ಚನೆಯ ವಿಷಯದಲ್ಲಿ ಗೂಢವಾದ ಇದೊಂದು ಪ್ರಯೋಗವು ಈ ಉಪನಿಷತ್ತಿನಲ್ಲಿ ವಿವರಿಸಲ್ಪಟ್ಟಿದೆ. ಉಪನಿಷತ್ತಿನ ಸಮಾಪ್ತಿಯಲ್ಲಿ ಮಂಗಲದಿಂದ ಸಮಾಪ್ತಿಯನ್ನು ಸೂಚಿಸಲು "ಶಿವಂ" ಎಂಬ ಪದವು ಇರುವುದು. ॥೨॥

ಶ್ರೀಚಕ್ರೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

# ॥ ಶ್ರೀ ವಿದ್ಯಾತಾರಕೋಪನಿಷತ್ ॥

ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ । ಓಂ ಶಾಂತಿಃ ಶಾಂತಿಃ ಶಾಂತಿಃ ॥

## ಪ್ರಥಮಃ ಪಾದಃ

ಅಥೈನಮಗಸ್ತ್ಯಃ ಪಪ್ರಚ್ಛ ಹಯಗ್ರೀವಂ ಕಿಂ ತಾರಕಂ ಕಿಂ ತರತಿ । ಸ ಹೋವಾಚ ಹಯಗ್ರೀವಃ । ತಾರದೀರ್ಘಾನುಲಂಬಿಪೂರ್ವಕಂ ಪ್ರಥಮಂ ಖಂಡಂ ತತೋ ದ್ವಿತೀಯಂ ಖಂಡಂ ತತಸ್ತೃತೀಯಂ ಖಂಡಂ

॥ ಶ್ರೀಃ ॥

# ಶ್ರೀ ವಿದ್ಯಾತಾರಕೋಪನಿಷತ್ತಿನ ಕನ್ನಡ ಅನುವಾದವು.

ಶಾಕ್ತ ಉಪನಿಷತ್ತುಗಳ ಗಣದಲ್ಲಿ ಶ್ರೀ ವಿದ್ಯೆಯಲ್ಲಿ ಮುಖ್ಯವಾದ ತಾರಕ ಮಂತ್ರಾಂಶವನ್ನು ಪ್ರತಿಪಾದಿಸುವುದರಿಂದ ಶ್ರೀ ವಿದ್ಯಾತಾರಕೋಪನಿಷತ್ ಎಂದು ಪ್ರಸಿದ್ಧವಾದುದೊಂದು ಉಪನಿಷತ್ತು. ಸಂಪ್ರದಾಯ ಸಿದ್ಧವಾಗಿ ಇದರ ಆರಂಭದಲ್ಲಿ "ಶಂನೋ ಮಿತ್ರಃ" ಎಂಬ ಶಾಂತಿಮಂತ್ರವನ್ನು ಪಠಿಸಬೇಕು. ಪ್ರಾಣ, ಅಹಸ್ಸುಗಳ ಅಭಿಮಾನಿಯಾದ ಮಿತ್ರದೇವನು ನಮಗೆ ಸುಖರೂಪನಾಗಿರಲಿ. ಅಪಾನ, ರಾತ್ರಿಗಳ ಅಭಿಮಾನಿಯಾದ ವರುಣದೇವ, ಚಕ್ಷುರಿಂದ್ರಿಯ ಅಭಿಮಾನಿ ಅರ್ಯಮ, ಬಲಾಭಿಮಾನಿ ಇಂದ್ರ, ವಾಕ್ ಬುದ್ಧಿಗಳ ಅಭಿಮಾನಿ ಬೃಹಸ್ಪತಿ, ಪಾದಗಳ ಅಭಿಮಾನಿ ತ್ರಿವಿಕ್ರಮಗಳನ್ನು ಮಾಡಿದ ವಿಷ್ಣು ಮುಂತಾದ ಆಧ್ಯಾತ್ಮಾಭಿಮಾನಿಗಳಾದ ನಿಖಿಲದೇವತೆಗಳೂ ನಮಗೆ ಸುಖರೂಪರಾಗಿರಲಿ. ಸೂತ್ರಾತ್ಮ ಸ್ವರೂಪನಾದ ಬ್ರಹ್ಮನಿಗೆ ನಮಸ್ಕಾರವು ಸೂತ್ರಾತ್ಮನ ಅಪರಾವತಾರವಾದ ಪ್ರಾಣವಾಯುವೆ! ನಿನಗೆ ನಮಸ್ಕಾರವು. ನೀನು ಪ್ರತ್ಯಕ್ಷ ಬ್ರಹ್ಮರೂಪನಾಗಿರುವೆ. ಆದ್ದರಿಂದ ನಿನ್ನನ್ನು ಪ್ರತ್ಯಕ್ಷ ಬ್ರಹ್ಮನೆಂದು ಹೇಳುವೆನು. ಶಾಸ್ತ್ರಾನುಸಾರವಾಗಿ ಮನಸ್ಸಿನಲ್ಲಿ ತೀರ್ಮಾನಿಸಿದ ಕರ್ತವ್ಯ ಮತ್ತು ವಾಕ್ ಕಾಯಗಳಿಂದ ನೆರವೇರುವ ಕರ್ತವ್ಯಗಳು ಕ್ರಮವಾಗಿ ಋತ ಸತ್ಯಶಬ್ದಗಳಿಂದ ಕರೆಯಲ್ಪಡುತ್ತವೆ. ಆ ಋತ ಸತ್ಯಗಳೆರಡೂ ನಿನ್ನ ಅಧೀನವಾಗಿ ನಡೆಯುವುವಾದ್ದರಿಂದ ನಿನ್ನನ್ನು ಋತ ಸತ್ಯವೆಂಬ ರೂಪದ್ವಯ ಸಹಿತನೆಂದು ಹೇಳುವೆನು. ಹೀಗೆ ಸ್ತುತಿಸಲ್ಪಟ್ಟ ಬ್ರಹ್ಮವಸ್ತುವು ವಿದ್ಯಾರ್ಥಿಯಾದ ನನ್ನನ್ನೂ ಆಚಾರ್ಯರಾದ ಉಪದೇಶಕರನ್ನೂ ಅವರವರಿಗೆ ಬೇಕಾದ ಶಕ್ತಿಯನ್ನು ಕೊಟ್ಟು ಕಾಪಾಡಲಿ. ಗುರುಶಿಷ್ಯರನ್ನು ಕಾಪಾಡಬೇಕೆಂಬ ಪ್ರಾರ್ಥನೆಯನ್ನು ಆತ್ಯಾದರದಿಂದ ಎರಡು ಸಲ ಆವೃತ್ತಿಮಾಡಿದೆ. ಕಡೆಯಲ್ಲಿ ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕರೂಪವಾದ ವಿದ್ಯಾಪ್ರತಿಬಂಧಕಗಳನ್ನು ನಿವೃತ್ತಿಮಾಡಲು ಶಾಂತಿಪದವನ್ನು ಮೂರುಸಲ ಪಠಿಸಿದೆ. ಓಂಕಾರವನ್ನುಚ್ಚರಿಸಿ ಓಂಕಾರ ವಾಚ್ಯವಾದ ಬ್ರಹ್ಮವಸ್ತುವನ್ನು ಸ್ಮರಣಮಾಡಲು ಓಂಕಾರವನ್ನೂ ಅದರ ಆದಿಯಲ್ಲಿ ಸೇರಿಸಿರುವುದು. ಇದು ಶಾಂತಿಪಾಠದಲ್ಲಿದ್ದ ಮಂತ್ರಗಳ ಅರ್ಥವು.

## ಪ್ರಥಮ ಪಾದವು.

ಈ ಉಪನಿಷತ್ತು ನಾಲ್ಕು ಪಾದಗಳಿಂದ ಕೂಡಿದೆ. ಉಪಕ್ರಮದಲ್ಲಿ ಅಗಸ್ತ್ಯ ಮುನಿಯು ಹಯಗ್ರೀವ ಋಷಿಯನ್ನು ಪ್ರಶ್ನಮಾಡಿದಂತೆಯೂ ಹಯಗ್ರೀವಋಷಿಯು ಅದಕ್ಕೆ ಉತ್ತರಕೊಟ್ಟಂತೆಯೂ ಸೂಚಿತವಾಗಿದೆ. ಆದ್ದರಿಂದ ಪ್ರಶ್ನೋತ್ತರ

ತತಶ್ಚತುರ್ಥಂ ಖಂಡಂ ಬ್ರಹ್ಮಾತ್ಮಸಚ್ಚಿದಾನಂದಾತ್ಮಕಮಂತ್ರಮಿತ್ಯುಪಾಸಿತವ್ಯಮ್ । ಅಕಾರಃ ಪ್ರಥಮಕೂಟಾಕ್ಷರೋ ಭವತಿ । ಉಕಾರೋ ದ್ವಿತೀಯಕೂಟಾಕ್ಷರೋ ಭವತಿ । ಮಕಾರಸ್ತೃತೀಯಕೂಟಾಕ್ಷರೋ ಭವತಿ। ಅರ್ಧಮಾತ್ರಕಾ ಚತುರ್ಥಕೂಟಾಕ್ಷರೋ ಭವತಿ। ಬಿನ್ದುಃ ಪಞ್ಚಮ ಕೂಟಾಕ್ಷರೋ ಭವತಿ । ನಾದಃ ಷಷ್ಠಕೂಟಾಕ್ಷರೋ ಭವತಿ । ತಾರಕತ್ವಾತ್ತಾರಕೋ ಭವತಿ । ತದೇವ ಮಂತ್ರತಾರಕಂ ಭವತಿ । ತದೇವ ಮಂತ್ರ ತಾರಕಬ್ರಹ್ಮ ತ್ವಂ ವಿದ್ಧಿ । ತದೇವೋಪಾಸಿತವ್ಯಮ್ । ಗರ್ಭಜನ್ಮಮರಣ ಸಂಸಾರಮಹದ್ಭಯಾತ್ತಾಂ ತಾರಯತಿ। ತಾರಕಮಿತ್ಯೇತತ್ತಾರಕಂ ಬ್ರಹ್ಮಣೋ ನಿತ್ಯಂ ಮಹೀಯತೇ। ಸ ಪಾಪ್ಮಾನಂ ತರತಿ । ಸ ಮೃತ್ಯುಂ ತರತಿ । ಸ ಬ್ರಹ್ಮ ಹತ್ಯಾಂ ತರತಿ । ಸ ಭ್ರೂಣಹತ್ಯಾಂ ತರತಿ । ಸ ವೀರಹತ್ಯಾಂ ತರತಿ । ಸ ಸರ್ವಂ ತರತಿ । ಸ ಸಂಸಾರಂ ತರತಿ । ಸೋಽವಿಮುಕ್ತಮಾಶ್ರಿತೋ ಭವತಿ ॥೧॥

ಸಂವಾದರೂಪವಾಗಿ ಈ ಉಪನಿಷತ್ತು ಹೊರಟಿರುವುದಾಗಿ ವ್ಯಕ್ತವಾಗುತ್ತದೆ. ಅಗಸ್ತ್ಯಮುನಿಯು ಹಯಗ್ರೀವಾಚಾರ್ಯರನ್ನು ಕುರಿತು ತಾರಕವೆಂಬುದು ಯಾವುದು ತರಣಮಾಡುವುದಾವುದು ಎಂದು ಪ್ರಶ್ನಿಸಲಾಗಿ ಹಯಗ್ರೀವಮುನಿಯು ಈರೀತಿಯಲ್ಲಿ ಉತ್ತರವಿತ್ತನು. ನೀನು ಪ್ರಶ್ನೆಮಾಡಿದ ತಾರಕವು ನಾಲ್ಕು ಖಂಡಗಳಿಂದ ಕೂಡಿದೆ. ಅದರ ವಿಶಿಷ್ಟ ಸ್ವರೂಪವು ತಾರಸ್ವರ, ದೀರ್ಘ, ಲಂಬಿತವಾಗುವನಾದ ಇವುಗಳಿಂದ ಪೂರ್ಣವಾದುದು. ಕ್ರಮವಾಗಿ ಮೊದಲು ಮೊದಲನೆಯ ಖಂಡವೂ ಅನಂತರ ಎರಡನೆಯ ಖಂಡವೂ ತರುವಾಯ ಮೂರನೆಯ ಖಂಡವೂ ತದನಂತರ ಚತುರ್ಥ ಖಂಡವೆಂದೂ ಕ್ರಮವಾಗಿ ನಾಲ್ಕುಖಂಡಗಳು ಅದರಲ್ಲಿ ಅಡಗಿವೆ. ಹೀಗೆ ನಾಲ್ಕು ಖಂಡಗಳ ಈ ಮಂತ್ರವನ್ನು ಪರಬ್ರಹ್ಮಸ್ವರೂಪ, ಸರ್ವಕ್ಕೂ ಆತ್ಮಭೂತವೂ ಸಚ್ಚಿದಾನಂದಾತ್ಮಕವೂ ಆದ ಅರ್ಥಕ್ಕೆ ವಾಚಕವಾಗಿರುವುದರಿಂದ ವಾಚ್ಯವಾಚಕಗಳಿಗೆ ಭೇದವಿಲ್ಲದ್ದರಿಂದ ಬ್ರಹ್ಮಾತ್ಮ ಸಚ್ಚಿದಾನಂದಾತ್ಮಕವನ್ನಾಗಿ ಉಪಾಸನೆ ಮಾಡಬೇಕು. ಈ ಮಂತ್ರದಲ್ಲಿರುವ ಆರು ಕೂಟಗಳಲ್ಲಿ ಕ್ರಮವಾಗಿ ಮುಂದೆ ಹೇಳುವಂತೆ ಅಕ್ಷರಗಳು ಸೇರಿವೆ. ಅಕಾರವೆಂಬುದು ಮೊದಲನೆಯ ಕೂಟಾಕ್ಷರವಾಗಿದೆ. ಉಕಾರವು ದ್ವಿತೀಯ ಕೂಟಾಕ್ಷರವು. ಮಕಾರವೆಂಬ ವರ್ಣವು ಮೂರನೆಯ ಕೂಟಾಕ್ಷರ ವಾಗಿದೆ. ಮುಂದೆ ವಿಭಾಗವು ತೋರದಂತೆ ಸೂಕ್ಷ್ಮರೂಪದಿಂದ ವರ್ಣರಾಶಿಯಿದೆ. ಅದನ್ನು ಅರ್ಧಮಾತೃಕಾ ಬಿಂದು ನಾದವೆಂದು ಮೂರಾಗಿ ವಿಂಗಡಿಸಬಹುದು. ಅರ್ಧಮಾತೃಕೆಯು ಚತುರ್ಥ ಕೂಟಾಕ್ಷರವು. ಬಿಂದುವೇ ಪಂಚಮಕೂಟಾಕ್ಷರವು. ಕಡೆಯಲ್ಲಿರುವ ನಾದವು ಷಷ್ಠಕೂಟಾಕ್ಷರವಾಗಿದೆ. ಇದು ಉಪಾಸಕರ ಸಂಸಾರ ತಾರಕವಾದ್ದರಿಂದ ಇದನ್ನು ತಾರಕಮಂತ್ರವೆಂದು ಕರೆಯುವರು. ಇದನ್ನು ಮಂತ್ರ ತಾರಕವೆಂದೂ ಕರೆಯುವುದುಂಟು. ವಾಚಕ ವಾಚ್ಯಗಳಿಗೆ ಭೇದವು ಪರಮಾರ್ಥ ವಲ್ಲದ್ದರಿಂದ ಆ ಮಂತ್ರ ತಾರಕವನ್ನು ಬ್ರಹ್ಮವೆಂದು ನೀನು ತಿಳಿದು ಉಪಾಸನೆ ಮಾಡು. ಈ ರೀತಿ ಭಜಿಸಿದವರನ್ನು ಮಂತ್ರಬ್ರಹ್ಮವು ಗರ್ಭವಾಸ ಜನ್ಮ ಮರಣ ರೂಪವಾದ ಮಹಾಸಂಸಾರಭಯದಿಂದ ದಾಟಿಸುತ್ತದೆ. ಬ್ರಹ್ಮವಸ್ತುವು ಸಂಸಾರ ದಿಂದ ತರಣಮಾಡಿಸುವುದರಿಂದಲೇ ಅದರ ತಾರಕವೆಂಬ ಸ್ವರೂಪವು ಯಾವಾಗಲೂ ಪೂಜ್ಯವಾದುದು ಮತ್ತು ಅತಿಶಯಿತವಾದುದು. ತಾರಕಮಂತ್ರೋಪಾಸಕನು ತಾರ ಕೋಪಾಸನಬಲದಿಂದ ಪಾಪ, ಮೃತ್ಯು, ಬ್ರಹ್ಮಹತ್ಯಾ, ಭ್ರೂಣಹತ್ಯಾ, ವೀರಹತ್ಯಾ ಮುಂತಾದ ಸಮಸ್ತತರಣೀಯವಾದ ದೋಷಗಳನ್ನೂ ತರಣಮಾಡಿ ಸಂಸಾರ ವನ್ನೇ ತರಣಮಾಡಿದ ಮಹಾತ್ಮನಾಗುತ್ತಾನೆ. ಮತ್ತು ಅಂತಹವನು ಅವಿಮುಕ್ತ ವೆಂಬ ಮುಕ್ತಿಕ್ಷೇತ್ರವನ್ನು ಆಶ್ರಯಿಸಿದವನಾಗುತ್ತಾನೆ. ॥೧॥

ಅಕಾರಾಕ್ಷರ ಸಮ್ಭೂತಾ ವಾಗ್ಭವಾ ವಿಶ್ವಭಾವಿತಾ ।
ಉಕಾರಾಕ್ಷರ ಸಮ್ಭೂತಾ ತೇಜಸಃ ಕಾಮರಾಜಕಾ ||೨||

ಪ್ರಾಜ್ಞೇ ಮಕಾರಸಮ್ಭೂತಾ ತಾರ್ತೀಯಾ ಚ ತೃತೀಯಕಾ ।
ಅರ್ಧಮಾತ್ರಾ ಷೋಡಶೀ ಚ ಬ್ರಹ್ಮಾನನ್ದೈಕವಿಗ್ರಹಾ ||೩||

ತಸ್ಯಾಃ ಸಾನ್ನಿಧ್ಯವಶತೋ ಜಗದಾನನ್ದದಾಯಿನೀ ।
ಉತ್ಪತ್ತಿಸ್ಥಿತಿಸಂಹಾರಕಾರಿಣೀ ಸರ್ವದೇಹಿನಾಮ್ ||೪||

ತ್ರಿಕೂಟಾ ಭವತಿ ಜ್ಞೇಯಾ ಮೂಲಪ್ರಕೃತಿಸಙ್ಗತಾ ।
ಪ್ರಕೃತಿಃ ಪ್ರಣವತ್ವಾಚ್ಚ ಸಾ ತ್ರಿಕೂಟತ್ರಯಾತ್ಮಿಕಾ ||೫||

ಏವಂ ಯಚ್ಚಾನ್ಯತ್ರಿಕಾಲಾತೀತಮ್ । ಚತುಷ್ಕೂಟಾತ್ಮಿಕೈವ ಸರ್ವಕೂಟಾತ್ಮಿಕಾ ಬ್ರಹ್ಮಮಯೀ । ತುರ್ಯಾತ್ಮ ಬ್ರಹ್ಮಾ ಸೋಽಯಮಾತ್ಮಾ ಚತುಷ್ಪಾಜ್ಜಗತಃ ಸ್ಥಾನಂ ನ ಬಹಿಃ ಪ್ರಜ್ಞಂ ನೋಭಯತಃ ಪ್ರಜ್ಞಂ ಸಪ್ತಾಙ್ಗ ಏಕೋನವಿಂಶತಿಮುಖಃ । ಸ್ಥೂಲಭುಗ್ವೈಶ್ವಾನರಾತ್ಮಿಕಾಂ ಕಾಮಪೀಠಾಲಯಾಂ ಮಿತ್ರೇಶನಾಥಾತ್ಮಿಕಾಂ ಜಾಗ್ರದ್ದಶಾಧಿಷ್ಠಾಯಿನೀಮಿಚ್ಛಾಶಕ್ತ್ಯಾತ್ಮಿಕಾಂ ಕಾಮೇಶ್ವರೀಂ ಪ್ರಥಮಕೂಟಾಂ ಮನ್ಯಂತೇ ||೬||

ಇತಿ ಪ್ರಥಮಃ ಪಾದಃ

ಈ ಮಂತ್ರದಲ್ಲಿ ವಾಗ್ಭವ ಖಂಡವೆಂದು ಹೇಳಲ್ಪಡುವ ಮೊದಲನೆಯ ಅಕಾರ ಸ್ವರೂಪ ಮಾತ್ರೆಯು ವಿಶ್ವಸ್ವರೂಪವೆಂದೂ ಕಾಮರಾಜಖಂಡವೆಂದು ಕರೆಯಲ್ಪಡುವ ಎರಡನೆಯ ಉಕಾರವೆಂಬ ಅಕ್ಷರದಿಂದ ಹುಟ್ಟಿದ ಮಾತ್ರೆಯು ತೈಜಸರೂಪವೆಂದೂ ಮಕಾರದಿಂದಾದ ತೃತೀಯ (ಶಕ್ತಿ) ಕೂಟವೆನ್ನಲ್ಪಡುವ ತೃತೀಯ ಮಾತ್ರೆಯು ಪ್ರಾಜ್ಞಸ್ವರೂಪವೆಂದೂ ತಿಳಿಯಲ್ಪಡಬೇಕು. ಷೋಡಶಕಲಾತ್ಮಕವಾದ ಕಡೆಯ ಅರ್ಧಮಾತ್ರೆಯು ಬ್ರಹ್ಮಾನಂದಸ್ವರೂಪವಾಗಿರುವುದು. ‖ ೨, ೩ ‖

ಅಂತಹ ಬ್ರಹ್ಮಾನಂದಾತ್ಮಕ ಅರ್ಧಮಾತ್ರಾ ಸಾನ್ನಿಧ್ಯದಿಂದ ಜಗತ್ತಿಗೆ ಆನಂದವನ್ನು ಕೊಡುವುದಾಗಿಯೂ ಸರ್ವಜನ್ಯವಸ್ತುಗಳ ಉತ್ಪತ್ತಿ ಸ್ಥಿತಿ ಸಂಹಾರ ಗಳನ್ನು ನೆರವೇರಿಸುವುದಾಗಿಯೂ ಕೂಟತ್ರಯದಿಂದ ಕೂಡಿದುದಾಗಿಯೂ ಇರುವ ಈ ಮಂತ್ರಮೂರ್ತಿಯು ಮೂಲಪ್ರಕೃತಿಯ ಸಂಬಂಧದಿಂದಲೂ ಪ್ರಣವಸ್ವರೂಪ ದಿಂದಲೂ ಕೂಟತ್ರಯಾತ್ಮಕವಾದ ಪ್ರಕೃತಿಯಾಗಿರುವುದು. ‖ ೪, ೫ ‖

ಭೂತ ಭವಿಷ್ಯತ್ ವರ್ತಮಾನವೆಂಬ ಕಾಲತ್ರಯದಿಂದ ಪರಿಚ್ಛೇದ್ಯವೂ ಮತ್ತು ಅಪರಿಚ್ಛೇದ್ಯವೂ ಆದ ವಸ್ತುವೆಲ್ಲವೂ ಈ ಮಂತ್ರದ ಚತುರ್ಥಮಾತ್ರಾತ್ಮಕ ವಾದುದು. ಕೂಟಚತುಷ್ಟಯದಿಂದ ಕೂಡಿದ ಈ ಮಂತ್ರವು ಸರ್ವಕೂಟಾಂಶ ದಿಂದಲೂ ಬ್ರಹ್ಮಸ್ವರೂಪವೇ ಆಗಿದೆ. ಪೂರ್ವ ಪೂರ್ವ ಪಾದವನ್ನು ಉತ್ತರೋತ್ತರ ಪಾದದಲ್ಲಿ ಪ್ರವಿಲಾಪನ ಮಾಡಿದರೆ ತುರೀಯವಾಗಿ ನಿಲ್ಲುವ ನಿರ್ವಿಶೇಷ ಬ್ರಹ್ಮ ವಸ್ತುವು ಸರ್ವರಿಗೂ ಪ್ರತ್ಯಗಾತ್ಮಸ್ವರೂಪದಿಂದಿರುವುದು. ಇದಕ್ಕೆ ಮೊದಲಿರುವ ಮೂರು ಮಾತ್ರೆಗಳು ಉತ್ತರೋತ್ತರ ಪ್ರವಿಲಾಪನ ಕ್ರಮದಿಂದ ಬ್ರಹ್ಮವಸ್ತುವಿನ ಪ್ರತಿಪತ್ತಿ (ಸಾಕ್ಷಾತ್ಕರ)ಗೆ ಸಾಧನವಾಗಿರುವುದರಿಂದ ಪಾದವೆಂದು ಕರೆಯಲ್ಪಡುವುವು. ಕಡೆಯ ಮಾತ್ರೆಯು ಪ್ರತಿಪತ್ (ಸಾಕ್ಷಾತ್ಕಾರ) ರೂಪವಾದ್ದರಿಂದ ಪಾದವೆನ್ನಲ್ಪಡು ವುದು. ಹೀಗೆ ಕಾಲ್ಪನಿಕ ಪಾದ ಚತುಷ್ಟಯದಿಂದ ಕೂಡಿದ ಬ್ರಹ್ಮವಸ್ತುವು ನಾನಾ ಅವಸ್ಥಾವಿಕಾರಗಳಿಂದ ಕೂಡಿದ ಜಗತ್ತಿಗೆ ಕಾರಣವಾಗಿಯೂ ಬಹಿಃ ಪ್ರಜ್ಞೆಯೇ ಪ್ರಧಾನವಾಗಿರುವ ವಿಶ್ವಾವಸ್ಥಾ ಶೂನ್ಯವೂ ಅಂತಃ ಪ್ರಜ್ಞಾಪ್ರಧಾನವಾದ ಸ್ವಪ್ನಾವಸ್ಥಾ ಶೂನ್ಯವೂ ಉಭಯತಃ ಪ್ರಜ್ಞಾಪ್ರಧಾನವಾದ ಸ್ವಪ್ನ ಸುಷುಪ್ತಿಗಳ ಅಂತರಾಳಾವಸ್ಥಾ ಶೂನ್ಯವೂ ಉಪಾಧಿಪರತಂತ್ರತೆಯಿಂದಬಂದ ಮೂರ್ಧ, ಚಕ್ಷು, ಪ್ರಾಣ, ದೇಹಮಧ್ಯ, ಬಸ್ತಿ, ಪಾದ, ಮುಖಗಳೆಂಬ ಸಪ್ತಾಂಗಗಳಿಂದಲೂ ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚಪ್ರಾಣ, ಮನಸ್ಸು-ಬುದ್ಧಿ-ಅಹಂಕಾರ-ಚಿತ್ತವೆಂಬ ಅಂತಃಕರಣ ಚತುಷ್ಟಯವೂ ಸೇರಿ ಹತ್ತೊಂಭತ್ತು ಜ್ಞಾನಸಾಧನವಾದ ದ್ವಾರಗಳಿಂದಲೂ ಕೂಡಿದೆ. ಇದರ ಮೊದಲನೆಯ ಪಾದವನ್ನು ಶಬ್ದಾದಿಬಾಹ್ಯಸ್ಥೂಲವಿಷಯಗಳನ್ನು ವೈಶ್ವಾನರ ರೂಪದಿಂದ ಭುಂಜಿಸುತ್ತಾ ಕಾಮಪೀಠವೆಂಬ ಆಲಯದಲ್ಲಿ ಮಿತ್ರೇಶನಾಥಸ್ವರೂಪದಿಂದ ಜಾಗ್ರದ್ದಶೆಗೆ ಅಭಿಮಾನಿ ಇಚ್ಛಾಶಕ್ತಿ ಪ್ರಧಾನ ಮತ್ತು ಪ್ರಥಮಕೂಟಾಭಿಮಾನಿ ದೇವ ತೆಯೂ ಆಗಿರುವ ಕಾಮೇಶ್ವರೀ ರೂಪವೆಂದು ತಿಳಿದು ಉಪಾಸನೆಮಾಡುತ್ತಾರೆ. ‖೬‖

ಪ್ರಥಮಪಾದವು ಸಮಾಪ್ತವು.

## ದ್ವಿತೀಯಃ ಪಾದಃ

ಸ್ವಪ್ನಸ್ಥಾನೇಽನನ್ತಃ ಸಂಜ್ಞಾಸಪ್ತಾಙ್ಗ ಏಕೋನವಿಂಶತಿಮುಖಃ ಪ್ರವಿಭಕ್ತೋಽಭೂತ್ । ತೈಜಸಾತ್ಮಿಕಾಂ ಜಾಲಂಧರಪೀಠಾಲಯಾಂ ಷಷ್ಠೀಶನಾಥಾತ್ಮಿಕಾಂ ವಜ್ರೇಶ್ವರೀಂ ವಿಷ್ಣ್ವಾತ್ಮಿಕಾಂ ಕ್ರಿಯಾರೂಪಾಂ ಸ್ವಪ್ನಾವಸ್ಥಾನಸ್ಥಿತಿರೂಪಾಮಿಚ್ಛಾಶಕ್ತಿಸ್ವರೂಪಿಣೀಂ ದ್ವಿತೀಯಕೂಟಾಂ ಮನ್ಯಂತೇ ॥೭॥

ಇತಿ ದ್ವಿತೀಯಃ ಪಾದಃ

## ತೃತೀಯಃ ಪಾದಃ

ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ತತ್ಸುಷುಪ್ತಮ್ । ಪಶ್ಯನ್ತಿ ಯತ್ಸುಷುಪ್ತಸ್ಥಾನ ಏಕೀಭೂತಪ್ರಜ್ಞಾನಘನ ಏವಾನನ್ದೋಽಭೂತ್ । ಇಚ್ಛಾಶಕ್ತಿರೂಪಾಂ ಸ್ವಪ್ನಾವಸ್ಥಾನ ಸುಷುಪ್ತಿದಶಾಧಿಷ್ಠಾಯಿನೀಂ ಸಾನನ್ದಕಲಾಂ ತೃತೀಯಕೂಟಾಂ ಮನ್ಯಂತೇ ॥೮॥

ಇತಿ ತೃತೀಯಃ ಪಾದಃ

## ಚತುರ್ಥಃ ಪಾದಃ

ಏಷಾ ಸರ್ವೇಶ್ವರ್ಯೇಷಾ ಸರ್ವೋತ್ತಮ್ಯೈಷಾನ್ತರ್ಯಾಮ್ಯೇಷಾ ಯೋನಿಃ ಸರ್ವೇಷಾಂ ಪ್ರಭವಾಪ್ಯಯೌ ಹಿ ಭೂತಾನಾಮ್ ।ನೋಭಯತಃ ಪಜ್ಞಾಂ ಪ್ರಜ್ಞಾನಘನಾಂ ನ ಪ್ರಜ್ಞಾಂ ನಾಪ್ರಜ್ಞಾಮದೃಷ್ಟಾಮವ್ಯವಹಾರ್ಯಾಮಗ್ರಾಹ್ಯಾಮಲಕ್ಷಣಾಮಚಿಂತ್ಯಾಮವ್ಯಪದೇಶ್ಯಾಮೇಕಾತ್ಮಪ್ರತ್ಯಯಸಾರಾಂ ಪ್ರಪಞ್ಚೋಪಶಮನೀಂ ಶಾನ್ತಾಂ ಶಿವಾಮದ್ವೈತಾಂ ಷೋಡಶಾಕ್ಷರೀಂ ಸ್ಫುರತ್ತಾದೃಶಾಧಿಷ್ಠಾಯಿನೀಂ ಚತುರ್ಥಖಂಡಾತ್ಮಿಕಾಂ ಮನ್ಯಂತೇ । ಸಾತ್ಮಾ ವಿಜ್ಞೇಯಾ । ಸದೋಜ್ಜ್ವಲಾವಿದ್ಯಾ । ತತ್ಕಾರ್ಯಹೀನಾ ಸ್ವಾತ್ಮಬನ್ಧಹರಾ ಸರ್ವದಾದ್ವೈತಾನನ್ದರೂಪಾ ಸರ್ವಾಧಿಷ್ಠಾನ

ದ್ವಿತೀಯಪಾದವು ಸ್ವಪ್ನ ಅವಸ್ಥಾಪ್ರಧಾನವಾಗಿರುವಾಗ ವಾಸನಾನಿರ್ಮಿತವಾದ ಸೂಕ್ಷ್ಮಪದಾರ್ಥಗಳನ್ನು ಮಾತ್ರ ವಿಷಯೀಕರಿಸಿ ಅಂತಃ ಪ್ರಜ್ಞೆಯುಳ್ಳದ್ದೂ ವಾಸನಾನಿರ್ಮಿತವಾದ ಪೂರ್ವೋಕ್ತ ಸಪ್ತಾಂಗಗಳಿಂದಲೂ ಹತ್ತೊಂಭತ್ತು ಜ್ಞಾನ ಸಾಧನಗಳಿಂದಲೂ ಕೂಡಿ ವಾಸನಾಮಯವಾದ ಪದಾರ್ಥಗಳನ್ನು ಮಾತ್ರ ಭುಜಿಸುವುದರಿಂದ ಪ್ರವಿವಿಕ್ತಭೋಗವುಳ್ಳದ್ದೂ ಆಗಿರುವುದು. ಇದನ್ನು ತೈಜಸಸ್ವರೂಪವನ್ನಾಗಿಯೂ ಜಾಲಂಧರ ಪೀಠದಲ್ಲಿರುವುದನ್ನಾಗಿಯೂ ಷಷ್ಠೀಶನಾಥಸ್ವರೂಪನ್ನಾಗಿಯೂ ವಜ್ರೇಶ್ವರೀ ನಾಮಾಂಕಿತವನ್ನಾಗಿಯೂ ವಿಷ್ಣು ಆತ್ಮಕವನ್ನಾಗಿಯೂ ಕ್ರಿಯಾ ಮತ್ತು ಸ್ವಪ್ನಾವಸ್ಥಾ ಇಚ್ಛಾಶಕ್ತಿಗಳ ಆಕಾರವನ್ನು ಧರಿಸಿರುವುದನ್ನಾಗಿಯೂ ಮತ್ತು ದ್ವಿತೀಯ ಕೂಟಾಭಿಮಾನಿಯನ್ನಾಗಿಯೂ ತಿಳಿದು ಉಪಾಸನೆ ಮಾಡುತ್ತಾರೆ. ||೭||

ದ್ವಿತಿಯಪಾದವು ಸಮಾಪ್ತವು.

ಯಾವ ಅವಸ್ಥೆಯಲ್ಲಿ ನಿದ್ರೆಯನ್ನು ಅನುಭವಿಸುವ ಮನುಷ್ಯನು ಯಾವದೊಂದು ಕಾಮವನ್ನು ಕಾಮಿಸುವುದಿಲ್ಲವೋ ಅದೇ ಸುಷುಪ್ತಾವಸ್ತೆಯು. ಆ ಅವಸ್ಥೆಯಲ್ಲಿ ಪ್ರಜ್ಞಾನಘನನಾಗಿಯೂ ಆನಂದ ಪೂರ್ಣನಾಗಿಯೂ ಇರುವ ಏಕರೂಪವನ್ನಾಗಿ ಜ್ಞಾನಿಗಳು ಸಾಕ್ಷಾತ್ಕರಿಸುವರು. ಈ ಮೂರನೆಯಪಾದವನ್ನು ಸ್ವಪ್ನಾವಸ್ಥೆಯಿಂದ ಸುಷುಪ್ತಿ ದಶಾಕ್ಕೆ ಅಭಿಮಾನದಿಂದ ಕೊಂಡೊಯ್ಯುವ ಆನಂದಕಲಾಪೂರ್ಣವಾದ ತೃತೀಯ ಕೂಟಾಭಿಮಾನಿಯನ್ನಾಗಿ ತಿಳಿದು ಸೇವಿಸುತ್ತಾರೆ. || ೮ ||

ತೃತೀಯಪಾದವು ಸಮಾಪ್ತವು.

ಸುಷುಪ್ತಾವಸ್ಥೆಯಲ್ಲಿ ಕಾಣುವ ಸ್ವಸ್ವರೂಪಮಾತ್ರದಲ್ಲಿರುವ ವಸ್ತುವು ಸರ್ವೇಶ್ವರಿಯೂ ಸರ್ವೋತ್ತಮಳೂ ಸರ್ವಪ್ರಾಣಿವರ್ಗದಲ್ಲಿಯೂ ಚೇತನರೂಪದಿಂದ ಅಂತರ್ಯಾಮಿಯೂ ಮತ್ತು ಸರ್ವಭೂತಗಳ ಸೃಷ್ಟಿಪ್ರಲಯಗಳಿಗೆ ಕಾರಣಳೂ ಆಗಿರುವುದು. ಉಭಯತಃ ಪ್ರಜ್ಞಾಶೂನ್ಯಳೂ ಎಂದರೆ ಆಂತರಾಳಿಕ ಅವಸ್ಥೆಯಿಂದ ವರ್ಜಿತಳೂ ಜಡವಿಲಕ್ಷಣಳಾದ್ದರಿಂದ ಪ್ರಜ್ಞಾನಘನರೂಪಳೂ ಜ್ಞಾನಕರ್ತೃತ್ವ, ಜಡತ್ವವಿಲ್ಲದ್ದರಿಂದ ಪ್ರಜ್ಞಾ-ಅಪ್ರಜ್ಞಾ ಭಿನ್ನಳೂ ಜ್ಞಾನೇಂದ್ರಿಯಕ್ಕೆಗೋಚರಳಲ್ಲದ್ದರಿಂದ ಅದೃಷ್ಟಳೂ ಹಾನೋಪಾದಾನಗಳಿಗೆ ಅಗೋಚರಳಾದ್ದರಿಂದ ಅವ್ಯವಹಾರ್ಯಳೂ ಕರ್ಮೇಂದ್ರಿಯಗಳಿಂದ ಗ್ರಾಹ್ಯಳಲ್ಲದವಳೂ ಊಹಿಸಿ ತಿಳಿಯಲು ಅನುಕೂಲವಾದ ಲಿಂಗವರ್ಜಿತಳೂ ಆದ್ದರಿಂದ ಚಿಂತಿಸಲು ಅಶಕ್ಯಳೂ ವಾಕ್ಕುಗಳಿಗೆ

ಸನ್ಮಾತ್ರಾ ನಿರಸ್ತಾವಿದ್ಯಾತಮೋಮೋಹಾಹಮೇವೇತಿ ಸಮ್ಯಗ್ವ್ಯಾಹಮೋಂ ತತ್ಸದ್ಯತ್ ಪರಂ ಬ್ರಹ್ಮ ಚತುಷ್ಕೂಟಾ ಪರಂ ಜ್ಯೋತಿಃ ಸಾಹಮೋಮಿತ್ಯಾತ್ಮಾನಮಾದಾಯ ಮನಸಾ ಚತುಷ್ಕೂಟಾಮೇಕಕಾರ್ಯಾಂ ತದಾ ಚತುಷ್ಕೂಟಾಹಮಿತಿ ತತ್ಪರಾಃ ಪ್ರವದನ್ತಿ । ಯೇನ ತೇ ಸಂಸಾರಿಣಃ । ಆತ್ಮನಾ ವಿರಾಗಾ ಏವ । ನ ಸಂಸಾರಿಣಃ । ಯ ಏವಂ ವೇದ ಸ ಮುಕ್ತೋ ಭವತಿ ಸಂ ಮುಕ್ತೋ ಭವತಿ ಇತ್ಯಗಸ್ತ್ಯಃ । ಇತ್ಯುಪನಿಷತ್ ॥೯॥

ಇತಿ ಚತುರ್ಥಃ ಪಾದಃ

ಇತಿ ಶ್ರೀ ವಿದ್ಯಾತಾರಕೋಪನಿಷತ್ ಸಮಾಪ್ತಾ.



ಅಗೋಚರಳಾದ್ದರಿಂದ ಅವ್ಯಪದೇಶ್ಯಳೂ ಸೋಹಂಭಾವವೆಂಬ ಆತ್ಮಪ್ರತ್ಯಯ ಒಂದರಿಂದಲೇ ತಿಳಿಯಬೇಕಾದವಳೂ ಸರ್ವವಿಶೇಷಾಕಾರವಾದಪ್ರಪಂಚ ನಿಷೇಧ ಸ್ವರೂಪಳೂ ಶಾಂತಳೂ ಮಂಗಳರೂಪಳೂ ದ್ವಿತೀಯವಸ್ತು ನಿಷೇಧಾಧಿಕರಣಳೂ ಷೋಡಶಾಕ್ಷರೀವಿದ್ಯಾವ್ಯಂಗ್ಯಳೂ ಸ್ಫುರಣರೂಪಕ್ಕೆ ಅಧಿಷ್ಠಾನಳಾದವಳೂ ಚತುರ್ಥ ಕೂಟಕ್ಕೆ ಅಭಿಮಾನಿಯೂ ಆದ ದೇವತೆಯು ನಿರ್ವಿಶೇಷ ತುರೀಯರೂಪವೆಂದು ಉಪಾಸನೆಮಾಡುತ್ತಾರೆ. ವಿಶ್ವ–ತೈಜಸ–ಪ್ರಾಜ್ಞರೆಂಬ ಅವಸ್ಥಾಪ್ರಧಾನವಾದ ರೂಪಗಳು ಅವಸ್ಥಾನಾಶದಿಂದ ನಾಶವುಳ್ಳವುಗಳಾಗಿವೆ. ಅವಸ್ಥಾ ವಿಶೇಷನಿಷೇಧಕ್ಕೆ ಆಸ್ಪದವಾಗಿ ನಿಲ್ಲುವ ಶಕ್ತಿ–ಅಥವಾ ಬ್ರಹ್ಮವಸ್ತುವು ಪರಮಾರ್ಥವಾದುದು. ಸಕಲ ಪ್ರಪಂಚನಿಷೇಧವನ್ನು ತೋರಿಸಲು ಅನೇಕ ನಿಷೇಧಗರ್ಭಿತವಾದ ವಿಶೇಷಣಗಳೂ ಶೂನ್ಯವಾದವನ್ನು ನಿರಾಕರಿಸಲು ಶಾಂತ–ಶಿವಾದಿ ವಿಧಿರೂಪವಿಶೇಷಣಗಳೂ ವರ್ಣಿತ ವಾಗಿವೆ. ಅಂತಹ ತುರೀಯ ವಸ್ತುವನ್ನು ಆತ್ಮರೂಪವಾಗಿ ತಿಳಿಯಬೇಕು. ಮತ್ತು ಉಜ್ಜ್ವಲವಾದ ವಿದ್ಯಾರೂಪವೂ ಕಾರ್ಯಕಾರಣವರ್ಜಿತವೂ ಸ್ವಾತ್ಮಬಂಧವನ್ನು ಅಪಹರಿಸುವುದೂ ಸದದ್ವೈತಾನಂದಪೂರ್ಣವೂ ಸರ್ವವಸ್ತುವಿಗೂ ಅಧಿಷ್ಠಾನವಾದ ಸನ್ಮಾತ್ರಸ್ವರೂಪವೂ ಅವಿದ್ಯೆಯೆಂಬ ಜ್ಞಾನಾವಾರಕ ಮೋಹರೂಪವಾದ ತಮಸ್ಸಿನಿಂದ ದೂರವೂ ಆದುದೆಂದು ಭಾವಿಸಿ ಅದನ್ನು ಸೋಹಂಭಾವನೆಯಿಂದ ಉಪಾಸನೆ ಮಾಡಬೇಕು. ತತ್ ಸತ್ ಮುಂತಾದ ಶಬ್ದಗಳಿಂದ ಪ್ರತಿಪಾದ್ಯವಾಗಿ ಪರಬ್ರಹ್ಮ ವೆಂದು ಪ್ರಸಿದ್ಧವಾಗಿರುವ ತತ್ತ್ವವೂ ಪರಜ್ಯೋತಿರ್ಮಯವೂ ಪ್ರತ್ಯಗಭೇದದಿಂದ ಸಾಕ್ಷಾತ್ಕರಿಸಬೇಕೆಂದು ಇಲ್ಲಿ ವಿವರಿಸಲ್ಪಟ್ಟ ಚತುಷ್ಕೂಟಮಂತ್ರ ಪ್ರತಿಪಾದ್ಯಶಕ್ತಿ ದೇವಿಯೂ ಅಭಿನ್ನವಾದುವು. ಇದನ್ನು ಅಹಂಸಾಅಸ್ಮಿ ನಾನು ಆತತ್ತ್ವವೇ ಆಗಿರುವೆನೆಂದು ಅನುಸಂಧಾನಮಾಡಬೇಕು, ಈ ಅನುಸಂಧಾನದಲ್ಲಿ ಲೀನರಾದವರು ಸ್ವಾತ್ಮವನ್ನು ಚತುಷ್ಕೂಟಸ್ವರೂಪದಿಂದ ಸಾಕ್ಷಾತ್ಕರಿಸಿ ಹಾಗೆಯೇ ತಮ್ಮ ಅನುಭವ ವನ್ನು ಇತರರಿಗೆ ಉಪದೇಶಿಸುತ್ತಾರೆ. ಈ ಸಾಕ್ಷಾತ್ಕಾರವನ್ನು ಹೊಂದಿದ ಮಹಾ ಮಹಿಮರು ಸಂಸಾರ ದುಃಖ ಅಸ್ಪೃಷ್ಟರಾಗಿ ವಿರಕ್ತರೇ ಆಗುವರು. ಯಾವಾಗಲೂ ಸಂಸಾರದುಃಖ ಭಾಗಿಗಳಾಗುವುದಿಲ್ಲ. ಈ ರೀತಿಯಾಗಿ ಈ ಉಪನಿಷತ್ಪ್ರತಿಪಾದ್ಯ ವಿಷಯವನ್ನು ಅರಿತವನು ಮುಕ್ತನಾಗುವನು. ಎಂದು ಹಯಗ್ರೀವಮುನಿಯ ಉಪದೇಶವನ್ನು ತೆಗೆದುಕೊಂಡ ಅಗಸ್ತ್ಯಮುನಿಯು ತನ್ನ ಅನುಭವವನ್ನು ಈ ಮೂಲಕ ಸಾರಿರುವನು. ಇಲ್ಲಿಗೆ ಉಪನಿಷತ್ತು ಮುಗಿದುದು.

ನಾಲ್ಕನೆಯ ಪಾದವು ಸಮಾಪ್ತವು.

ಶ್ರೀ ವಿದ್ಯಾತಾರಕೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

## ॥ ಷೋಢೋಪನಿಷತ್ ॥

---

ಅಥಾಹ ವೈ ಶ್ಮ ಶವಃ ಶಾನಂ ಶಯನಂ ಶವಾನಾಂ ಶಯನಂ ಶ್ಮಶಾನಂ ತದಧಿಷ್ಠಾನೋ ಮಹಾಕಾಲಸ್ತತ್ಪಯಙ್ಕಸಮಾಸೀನಾಂ ವಿಶ್ವ ವ್ಯಾಪಕರೂಪಿಣೀಂ ಕಾಲೀಂ ಕಾಲಾದಿಸಂತ್ರಾಸಾತ್ ಕಾಲೀಂ ಚತುರ್ಯುಗಾಧಿಷ್ಠಾತ್ರೀಂ ಸ್ವಸ್ಮಿನ್ ಭಾವ್ಯ ಷೋಢಾಂ ನ್ಯಸೇತ್ ॥೧॥

ಸ್ಥಾನಶುದ್ಧಿನ್ಯಾಸಂ ವಿಧಾಯ ಷೋಢಾಂ ನ್ಯಸೇತ್ । ಅಥ ಷೋಢಾನ್ಯಾಸೀ ಷಟ್ಕಾಲಿತ್ವಂ ಗಚ್ಛತಿ । ಸೇಯಂ ಷಟ್ಕಲಾ ಪರಾ ಪರಾತ್ಪರಾ ಪರಾತ್ಪರಾತೀತಾ ಚಿತ್ಪರಾ ಚಿತ್ಪರಾತ್ಪರಾ ಚಿತ್ಪರಾತ್ಪರಾತೀತಾ । ಷಣ್ಣಾಂ ಯೋಗೇ ಷೋಢಾ ಭವೇತ್ । ವೈಷ್ಣವಕಲಾಯುಕ್ತಾಂ ಮಾತೃಕಾಯುಕ್ತಾಂ ವೈಷ್ಣವೀಂ ನ್ಯಸೇದಿತಿ ಪ್ರಥಮಃ । ಸ ಪರಾರೂಪೋ ಭವೇತ್ । ಸ ಭೂಮಿಂ ಜಯತಿ । ಸ ಶಕ್ತಿರೂಪೋ ಭವೇತ್ ॥೨॥

|| ಶ್ರೀಃ ||

# ಷೋಢೋಪನಿಷತ್ತಿನ ಕನ್ನಡ ಅನುವಾದವು.

---

ಕಾಲಿಕಾದೇವಿಯ ನ್ಯಾಸವಿಶೇಷ ವಿಧಿಯನ್ನು ಪ್ರತಿಪಾದಿಸುವ ಶಾಕ್ತೋಪನಿಷತ್ತುಗಳಲ್ಲಿ ಒಂದಾದ ಈ ಷೊಢೋಪನಿಷತ್ತು ಅಥರ್ವವೇದದ ಶಾಖೆಗೆ ಸೇರಿದುದಾಗಿದೆ. ಇದರ ಆರಂಭದಲ್ಲಿ ನ್ಯಾಸಮಾಡಬೇಕಾದ ದೇವಿಯ ಆಕಾರವನ್ನು ಸೂಚಿಸಿದೆ. ಅಥ ಎಂಬ ಶಬ್ದವು ಮಂಗಲಾರ್ಥವಾಗಿ ಪ್ರಯುಕ್ತವಾಗಿದೆ. ಅಹ, ವೈ, ಇವು ಪ್ರಸಿದ್ಧಿಯನ್ನು ಸೂಚಿಸುವ ಶಬ್ದಗಳಾಗಿವೆ. ಶ್ಮಶಾನಂ ಎಂಬ ಶಬ್ದದಲ್ಲಿ "ಶ್ಮ" ಮತ್ತು "ಶಾನ" ಎಂಬ ಎರಡು ಭಾಗಗಳಿವೆ. ಅವುಗಳಿಗೆ ಶ್ಮ=ಶವ, ಶಾನ=ಶಯನ ಎಂದು ಅರ್ಥವು. ಶವಗಳು ಶಯನವಮಾಡಿರುವ ಸ್ಥಳವೆಂದು ಸಮುದಾಯದಿಂದ ಲಭಿಸುವ ಅರ್ಥವು. ಅಂತಹ ಶ್ಮಶಾನದಲ್ಲಿ ವಾಸಿಸುವ ಮಹಾಕಾಲೇಶ್ವರನ ಪರ್ಯಂಕದಲ್ಲಿ ಕುಳಿತಿರುವ, ಪ್ರಪಂಚವನ್ನು ವ್ಯಾಪಿಸಿದ ರೂಪವುಳ್ಳ, ಸರ್ವವಸ್ತುಗಳನ್ನು ಜರಣ ಮಾಡುವ ಕಾಲವನ್ನು ಬೆದರಿಸಿ ಅಧೀನದಲ್ಲಿಟ್ಟುಕೊಳ್ಳುವಳಾದ್ದರಿಂದ ಕಾಲೀ ಎಂಬ ಅನ್ವರ್ಥ ನಾಮಾಂಕಿತಳಾದ, ಕೃತ, ತ್ರೇತಾದಿ ಚತುರ್ಯುಗಗಳೆಂಬ ಕಾಲಾಂಶಗಳನ್ನು ನಿಯಮಿಸುವ ದೇವಿಯನ್ನು ತನ್ನಲ್ಲಿ ಭಾವಿಸಿ ಷಟ್ (ಆರು) ಅವಯವಗಳಿಂದ ಕೂಡಿರುವುದೆಂಬ ಅರ್ಥವನ್ನು ಬೋಧಿಸುವ ಷೋಢಾ ಎಂಬ ಪದದ ಸಂಕೇತವುಳ್ಳ ಷೋಢಾನ್ಯಾಸವನ್ನು ಆಚರಿಸಬೇಕು. ||೧||

ಆರಂಭದಲ್ಲಿ ಆಸನಶುದ್ಧಿಗಾಗಿ ಮಾಡಬೇಕಾದ ನ್ಯಾಸವಿಧಿಯನ್ನು ಆಚರಿಸಬೇಕು. ಈ ಷೋಢಾನ್ಯಾಸವನ್ನು ಶಾಸ್ತ್ರವಿಧಿಯಂತೆ ಆಚರಿಸಿದವನು ಕಾಲಿಕಾದೇವಿಯ ಮುಂದೆ ವಿವರಿಸುವಂತೆ ಆರು ಕಲೆಗಳ ರೂಪವನ್ನು ಹೊಂದುವನಾದ್ದರಿಂದ ಆರು ಕಾಲಿಕಾರೂಪಗಳನ್ನು ಪರಿಗ್ರಹಿಸುವನು. ಆ ಆರು ಕಲೆಗಳು—ಪರಾ, ಪರಾತ್ಪರಾ, ಪರಾತ್ಪರಾತೀತಾ, ಚಿತ್ಪರಾ, ಚಿತ್ಪರಾತ್ಪರಾ, ಚಿತ್ಪರಾತ್ಪರಾತೀತಾ ಎಂಬುವಾಗಿವೆ. ಈ ಆರು ಕಲೆಗಳು ಸೇರಿದರೆ ಷೋಢಾರೂಪವಾಗುವುದು. ವೈಷ್ಣವ ಕಲೆಯಿಂದ ಕೂಡಿದ ಮಾತೃಕೆಯನ್ನು ಮಾತೃಕಾಯುಕ್ತವಾದ ವೈಷ್ಣವ ಕಲೆಯನ್ನು ನ್ಯಾಸಮಾಡುವುದು ಮೊದಲನೆಯ ನ್ಯಾಸವು. ಇದರಿಂದ ಮೊದಲನೆಯ ಪರಾ ಎಂಬ ಕಲಾತ್ಮಕನಾಗುವನು. ಭೂಮಿಯನ್ನೆಲ್ಲ ಗೆಲ್ಲುವನು. ಮತ್ತು ಶಕ್ತಿಸ್ವರೂಪನಾಗುವನು. ||೨||

ಅಥ ವೈ ಕಾಮಕಲಾಪುಟಿತಾಂ ಶ್ರೀಕಲಾಂ ಶ್ರೀಕಲಾಪುಟಿತಾಂ ಕಾಮಕಲಾಂ ಲಿಪಿಸ್ಥಾನೇ ನ್ಯಸೇತ್ । ದ್ವಿತೀಯಾರೂಪೋ ಭವೇತ್ । ಸೋಽಮೃತತ್ವಂ ಗಚ್ಛತಿ । ಸ ಜಲಂ ತರತೀತಿ ವೈ ಯಜ್ಞೋ ಗೀರ್ಣಂ ಭವತಿ ॥೩॥

ಆದಿಕಲಾ ಪುಟಿತಾಂ ಶ್ರೀಕಲಾಂ ಶ್ರೀಕಲಾಪುಟಿತಾಮಾದಿಕಲಾಂ ಮಾತೃಸ್ಥಾನೇ ನ್ಯಸೇತ್ । ಸ ಸಿದ್ಧೀಶ್ವರೋ ಭವೇತ್ । ಸ ವಹ್ನಿಂ ಜಯತಿ । ದಿವಾರಾತ್ರಿವ್ಯಾಪೀ ಭವೇತ್ ॥೪॥

ಕೂರ್ಚಂ ಚಂದ್ರಂ ಕೂರ್ಚಂ ಚಂದ್ರಮನ್ತರ್ದೃಷ್ಟಿಮುದ್ದೀಪನ ಮಂತ್ರಂ ರಾಜ್ಞೀಪುಟಿತಮೇತೇನ ಪುಟಿತಾಂ ರಾಜ್ಞೀಂ ನ್ಯಸೇತ್ । ಸ ಖೇಚರೋ ಭವೇತ್ । ಸ ವಾಯುಪುರಗಾಮೀ ಭವೇತ್ । ಸ ಕಲಾವಾನ್ ಭವೇತ್ । ಚತುರ್ಥೀರೂಪೋ ಭವೇತ್ ॥೫॥

ಅನುಲೋಮವಿಲೋಮೇನ ಮೂಲಮಂತ್ರಂ ಕೇವಲಂ ನ್ಯಸೇತ್ । ವಿದ್ಯಾನ್ಯಾಸರೂಪೋ ಭವೇತ್ । ಸರ್ವಂ ಜಯತಿ । ಸ ಪಞ್ಚಮೀರೂಪೋ ಭವೇತ್ । ಸ ಚಾಕಾಶಂ ಜಯತಿ । ಅಷ್ಟೋತ್ತರಶತಾನುಲೋಮ ವಿಲೋಮಾಕೃತಿಕ್ರಮೇಣ ದೇವತಾಂ ವ್ಯಾಪಯೇತ್ । ಸ ಧ್ವನಿರೂಪೋ ಭವೇತ್ । ಸರ್ವಂ ಜಯತಿ । ಸರ್ವಂ ಜರತಿ । ಮಹಾಪಾತಕೋಪ ಪಾತಕಾನಿ ತರತಿ । ವಯಃಸ್ಥೈರ್ಯಕರೋ ಭವೇತ್ । ಅಷ್ಟಸಿದ್ಧಿದಾತಾ ಭವೇತ್ । ತದ್ದರ್ಶನೇನ ದೇವತ್ವಂ ಭವೇತ್ । ಷಷ್ಠೀಕಲಾವಾನ್ ಭವೇತ್ ॥೬॥

ಕಾಮಕಲೆಯಿಂದ ಸಂಪುಟಿತವಾದ ಶ್ರೀಕಲೆ, ಶ್ರೀಕಲೆಯಿಂದ ಸಂಪುಟಿತವಾದ ಕಾಮಕಲೆಯನ್ನು ಲಿಪಿಸ್ಥಾನದಲ್ಲಿ ನ್ಯಾಸಮಾಡಬೇಕು. ಅಂತಹವನು ದ್ವಿತೀಯ ಕಲಾತ್ಮಕನಾಗುವನು ಅಮೃತತ್ವವೆಂಬ ಮರಣವರ್ಜಿತವಾದ ಮುಕ್ತಿಯನ್ನು ಹೊಂದುವನು. ಜಲವನ್ನು ಎಲ್ಲ ವಶಪಡಿಸುವ ಶಕ್ತಿಯನ್ನು ಹೊಂದಿ ಯಜ್ಞಾದಿ ಕರ್ಮಗಳ ಅನುಷ್ಠಾನದಿಂದ ಲಭಿಸುವಂತೆ ಜಲವನ್ನು ವೃಷ್ಟ್ಯಾದಿ ರೂಪದಿಂದ ಕೊಡುವನು. ವೃಷ್ಟಿಗೆ ನಿಯಮಕನಾಗುವನು ಎಂದು ತಾತ್ಪರ್ಯವು. ||೩||

ಆದಿಕಲೆಯಿಂದ ಸಂಪುಟಿತವಾದಂತಿರುವ ಶ್ರೀಕಲಾ, ಶ್ರೀಕಲೆಯಿಂದ ಸಂಪುಟಿತ ವಾದಂತಿರುವ ಆದಿಕಲಾ, ಇವುಗಳನ್ನು ಮಾತೃಸ್ಥಾನದಲ್ಲಿ ನ್ಯಾಸಮಾಡಬೇಕು. ಇದರಿಂದ ಸಕಲಸಿದ್ಧಿಗಳ ಈಶ್ವರನಾಗುವನು. ಮತ್ತು ಅಗ್ನಿಯನ್ನು ಗೆಲ್ಲುವನು. ದಿವಾ ರಾತ್ರಿಗಳೆಂಬ ಕಾಲವನ್ನು ನಿಯಮನಮಾಡುವ ವ್ಯಾಪಕರೂಪಿಯಾಗುವನು.

ಕೂರ್ಚ–ಚಂದ್ರವೆಂದರೆ ಅನುಸ್ವಾರ ಸಹಿತವಾದ ಹೂಂ ಎಂಬ ವರ್ಣವು ಇದು ಪ್ರತ್ಯಕ್ ದೃಷ್ಟಿಯನ್ನು ಅನುಗ್ರಹಿಸುವ ದೀಪನಮಂತ್ರವು. ರಾಜ್ಞೀಮಂತ್ರ ದಿಂದ ಪುಟಿತವಾದ ದೀಪನಮಂತ್ರವನ್ನೂ ದೀಪನಮಂತ್ರ ಸಂಪುಟಿತವಾದ ರಾಜ್ಞೀ ಮಂತ್ರವನ್ನೂ ನ್ಯಾಸಮಾಡಬೇಕು. ಅವನು ಆಕಾಶಸಂಚಾರಿಯಾಗುವನು. ಮತ್ತು ವಾಯುಲೋಕಕ್ಕೆ ಸ್ವತಂತ್ರವಾಗಿ ಹೋಗುವನೂ ಚತುರ್ಥಕಲಾ ಸ್ವರೂಪಿಯೂ ಆಗುವನು. ||೫||

ಪೂರ್ತಿಮೂಲಮಂತ್ರವನ್ನು ಆದಿಯಿಂದ ಕಡೆಯವರೆಗೆ ಕ್ರಮದಿಂದ ವರ್ಣ ರಾಶಿಯನ್ನುಚ್ಚರಿಸುವುದರಮೂಲಕವೂ ಕಡೆಯಿಂದ ಆದಿಯವರೆಗೆ ವ್ಯುತ್ಕ್ರಮ ದಿಂದ ವರ್ಣರಾಶಿಯನ್ನುಚ್ಚರಿಸುವುದರ ಮೂಲಕವೂ ನ್ಯಾಸಮಾಡಬೇಕು. ಇದು ಸಂಪೂರ್ಣವಿದ್ಯಾನ್ಯಾಸರೂಪವಾದುದು. ಇದು ಆಕಾಶವನ್ನೂ ಮತ್ತೆಲ್ಲವನ್ನೂ ಜಯಿಸುವುದಲ್ಲದೇ ಪಂಚಮ ಕಲಾತ್ಮಕತ್ವವನ್ನು ಕೊಡುವ ಸಾಧನವು. ಹಿಂದೆ ಹೇಳಿದಂತೆ ಅನುಲೋಮಕ್ರಮ ವಿಲೋಮಕ್ರಮಗಳಿಂದ ಒಂದುನೂರ ಎಂಟು ನ್ಯಾಸಗಳನ್ನಾಚರಿಸಿ ದೇವತೆಯನ್ನು ವ್ಯಾಪಿಸಿರುವಂತೆ ಭಾವಿಸಬೇಕು. ಅಂತಹ ಸಾಧಕನು ಧ್ವನಿಯಸೂಕ್ಷ್ಮರೂಪವನ್ನು ಹೊಂದುವನು. ಎಲ್ಲವನ್ನೂ ಜಯಿ ಸುವನು ಮತ್ತು ಜೀರ್ಣಿಸಿಕೊಳ್ಳುವನು. ಅನೇಕ ಮಹಾಪಾತಕ ಉಪಪಾತಕ ಗಳನ್ನು ಕಳೆದುಕೊಳ್ಳುವನು. ವಯಸ್ಸನ್ನೂ ಅಚಲವಾಗಿರುವಂತೆ ಮಾಡುವನು. ಅಣಿಮಾದಿ ಅಷ್ಟಸಿದ್ಧಿಗಳನ್ನು ಅನುಗ್ರಹಿಸುವನು. ಅಂತಹ ಉಪಾಸಕನ ದರ್ಶನ ಪಡೆದವನು ದೇವತ್ವವನ್ನು ಹೊಂದುತ್ತಾನೆ. ಮತ್ತು ಉಪಾಸಕನು ಆರನೆಯ ಕಲಾಸಾರೂಪ್ಯವನ್ನು ಹೊಂದುತ್ತಾನೆ. ||೬||

ವಿಶ್ವರೂಪೋ ಭವೇತ್ । ಯಂ ಪಶ್ಯತಿ ತಂ ಶಿವಂ ಕುರುತೇ । ನಮಸ್ಕಾರಾನ್ಮೂರ್ತಿಸ್ಫೋಟೋ ಭವೇತ್ । ಸ ಗಾರೂಪನಾಶಕೋ ಭವೇತ್ । ಸ ಮಹೇಂದ್ರಜಾಲದರ್ಶಕೋ ಭವೇತ್ । ತದ್ದರ್ಶನಾತ್ ಸಿದ್ಧೀಶ್ವರೋ ಭವೇತ್। ಪುಟತಿ ಛಿನ್ನಾಕಲ್ಪಾಮುಗ್ರಾಯಾಮುಜ್ಗಷೋಢಾಂ ನ್ಯಸೇತ್ । ತತ್ಸ್ಪರ್ಶಾದಷ್ಟಲೋಹಸ್ಪರ್ಶೋ ಭವೇತ್ । ಶಕ್ತಿಕುಣ್ಡೇ ಜಿಹ್ವಾಂ ನಾಡೀಂ ವಾ ನ್ಯಸ್ಯ ಯೋ ಜಪೇತ್ ಸ ಕಾಲೀರೂಪೋ ಭವೇತ್ ॥
ಇತಿ ಶಿವಮ್ ॥೭॥

ಇತಿ ಷೋಢೋಪನಿಷತ್ ಸಮಾಪ್ತಾ.



ಈ ಸಂಪೂರ್ಣಷೋಢಾನ್ಯಾಸವನ್ನಾಚರಿಸಿದವನು ನಾನಾರೂಪವನ್ನು ಧರಿಸುವನು. ತನ್ನ ದೃಷ್ಟಿಮಾತ್ರದಿಂದ ಇತರರಿಗೆ ಸಕಲ ಮಂಗಲವನ್ನು ಸಂಪಾದಿಸುವನು. ಅಂತಹ ಉಪಾಸಕನು ಸರ್ವವಂದ್ಯನಾದ್ದರಿಂದ ಇತರ ಮೂರ್ತಿಯನ್ನು ಅವನು ನಮಸ್ಕರಿಸಿದರೆ ಆ ಮೂರ್ತಿಯು ಭಿನ್ನವಾಗುವುದು. ಆ ಉಪಾಸಕನು ಚಂಚಲ ವಿಕಾರರೂಪಗಳನ್ನು ನಾಶಮಾಡುವವನೂ ಮಹೇಂದ್ರಜಾಲವನ್ನು ಪ್ರದರ್ಶಿಸುವ ಶಕ್ತಿಸಂಪನ್ನನೂ ಆಗುವನು. ಅವನ ದರ್ಶನವು ಸಿದ್ಧಿಗಳ ಆಧಿಪತ್ಯವನ್ನು ಕೊಡುವುದು. "ಪುಟಿತಿ" ಎಂಬ ಮಂತ್ರೋಚ್ಚಾರಣೆಯನ್ನು ಮಾಡಿ "ಭಿನ್ನಾಕಲ್ಪಾ-ಉಗ್ರಾ" ಎಂಬ ವಿವಿಧ ಸಂಜ್ಞೆಯಿಂದ ಕೂಡಿದ ಆರು ಅವಯವಗಳಿಂದ ಕೂಡಿದ ದೇವಿಯನ್ನು ನ್ಯಾಸ ಮಾಡಬೇಕು. ಅದರಿಂದ ಲೋಹದಂತೆ ದೃಢಗಾತ್ರನಾಗುವುದರಿಂದ ಎಂಟು ಲೋಹಗಳನ್ನು ಮುಟ್ಟಿದಂತೆ ಅವನ ಗಾತ್ರಸ್ಪರ್ಶದಿಂದ ಭಾಸವಾಗುವುದು. ಶಕ್ತಿ ದೇವಿಯನ್ನುದ್ದೇಶಿಸಿ ಕುಂಡದಲ್ಲಿ ನಾಲಿಗೆಯನ್ನು ಅಥವಾ ನಾಡಿಯನ್ನು ಹಾಕಿ ಜಪಮಾಡಿದವನು ಕಾಲೀಸ್ವರೂಪವನ್ನು ಹೊಂದುವನು. ಇದೊಂದು ಕಾಮ್ಯ ಪ್ರಯೋಗವು. ಈ ರೀತಿಯಾಗಿ ನ್ಯಾಸ ವಿಧಾನವು ಇಲ್ಲಿ ವಿವರಿಸಲ್ಪಟ್ಟಿದೆ. ಶಿವಂ ಎಂಬುದು ಸಮಾಪ್ತಿಯಲ್ಲಿ ಮಾಡಿದ ಮಂಗಲಸ್ಮರಣವು. ||೭||

ಷೋಢೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



|| ಶ್ರೀರಸ್ತು ||

## || ಸುಮುಖ್ಯುಪನಿಷತ್ ||

---

ಅಥೈನಾಮಾವಾಹಯಾಮ್ಯನವದ್ಯಾಂ ಶವಾಧಿರೂಢಾಂ ರಕ್ತ ವಸ್ತ್ರಾಲಙ್ಕಾರಯುಕ್ತಾಂ ರಕ್ತಪೀಠೋಪವಿಷ್ಟಾಂ ಗುಞ್ಜಾಹಾರವಿಭೂಷಿತ ಹೃದಯಾಂ ಷೋಡಶಸಮಾಸಮಾಕಾರಾಂ ಯುವತೀಂ ಪೀನೋನ್ನತ ಘನಸ್ತನೀಂ ಸ್ವಹೃದಯೇ ಚಿನ್ತಯಿತ್ವೋಚ್ಛಿಷ್ಟಪದಮಾಭಾಷ್ಯ ಚಂಡಾಲಿನೀ ಮಭಿಮತಾಂ ಸುಮುಖೀಂ ತದಂತೇ ದೇವೀಂ ಚೋಕ್ತ್ವಾ ಮಹಾ ಪಿಶಾಚಿನೀಂ ತಸ್ಮಾದ್ಧರಾಮಗ್ನಿಮಾಯಾಂ ಬಿಂದುಮೌಲಿನೀಂ ಸಮು ಚ್ಚಾರ್ಯ ಠಾಂತತ್ರಯಂ ಸವಿಸರ್ಗಂ ಸಮುದ್ಧೃತ್ಯ ದೇವೀಂ ಹೃದಯೇ ವಿಭಾವ್ಯ ಈಙ್ಕಾರಸ್ವರೂಪಂ ಸಬಿಂದುಮುಖಂ ಯುಗ್ಮಸ್ತನಪದಾಂತಂ ಭಾವಯಿತ್ವಾ ಯಂತ್ರಂ ಯೋನಿಂ ತದುಪರಿ ಶಿವವಕ್ತ್ರಯೋನಿಮಷ್ಟಪತ್ರಂ ಷೋಡಶಾಬ್ಜಕಂ ವೃತ್ತಮೇಕಂ ಚತುರಶ್ರಂ ಯಂತ್ರರಾಜಂ ವಿಚಿಂತ್ಯಾದೌ ದೇವೀಮಾವಾಹ್ಯ ಬಿಂದೌ ಗಂಧಾಕ್ಷತಪುಷ್ಪಧೂಪದೀಪಾನ್ ಸಂಸ್ಕೃತಾನ್ನಂ ನಾನಾವಿಧಂ ನಿವೇದ್ಯಾದ್ಯಂ ಫಲಂ ಮೀನಾದ್ಯನ್ನಂ ಮೂಲೇನ ಮೂಲಾಂ ಸಂತರ್ಪ್ಯ ಸಂಸ್ಕೃತಾಂ ಪುರಸ್ಕೃತಾಂ ಯೋನಿಂ ದೇವತಾಯೈ ನಿವೇದಯೇತ್ ||೧||

|| ಶ್ರೀಃ ||

# ಸುಮುಖ್ಯುಪನಿಷತ್ತಿನ ಕನ್ನಡ ಅನುವಾದವು.

---

ಸುಮುಖ್ಯುಪನಿಷತ್ತು—ಇದು ಒಂದು ಶಾಕ್ತೋಪನಿಷತ್ತಾಗಿ ಅಥರ್ವಶಾಖೆಗೆ ಸೇರಿದೆ. ಇದರಲ್ಲಿ ಒಂದು ಕಾಳೀಮಂತ್ರ ಜಪಾದಿವಿಧಿಯು ಪ್ರತಿಪಾದಿಸಲ್ಪಟ್ಟಿದೆ. ಪ್ರಯೋಗಾದಿಯಲ್ಲಿ ದೇವಿಯನ್ನು ಧ್ಯಾನಮಾಡಲು ಧ್ಯೇಯಸ್ವರೂಪವನ್ನು ವಿವರಿಸಿದೆ. ನಿರ್ದುಷ್ಟಳಾಗಿಯೂ ಶವಾಸನದಲ್ಲಿ ಕುಳಿತಿರುವಳಾಗಿಯೂ ಕೆಂಪಾದ ವಸ್ತ್ರ ಅಲಂಕಾರಗಳನ್ನು ಧರಿಸಿದವಳೂ ಕೆಂಪು ಆಸನದಲ್ಲಿ ಕುಳಿತಿರುವಳೂ ಗುಲಗುಂಜಿ ಮಣಿಗಳ ಹಾರದಿಂದ ಅಲಂಕರಿಸಲ್ಪಟ್ಟ ಹೃದಯವುಳ್ಳವಳೂ ಹದಿನಾರುವರ್ಷಗಳ ತರುಣಿಯ ಆಕಾರವುಳ್ಳವಳೂ, ಸ್ಥೂಲ ಉನ್ನತ ಕಠಿನ ಸ್ತನಗಳಿಂದ ಕೂಡಿದವಳೂ ಆದ ದೇವಿಯನ್ನು ಉಪಾಸಕನು ತನ್ನ ಹೃದಯದಲ್ಲಿ ಧ್ಯಾನಿಸಿ ಆವಾಹಿಸಿ ಅನಂತರ ಮಂತ್ರವನ್ನು ಜಪಿಸಬೇಕು. ಮಂತ್ರವನ್ನು ಮುಂದಿನ ವಾಕ್ಯವು ತೋರಿಸುತ್ತದೆ. ಮೊದಲು ಉಚ್ಛಿಷ್ಟಪದವನ್ನು ಹೇಳಬೇಕು. ಅನಂತರ “ಚಂಡಾಲಿನೀಂ ಸುಮುಖೀಂ ದೇವೀಂ” ಎಂಬ ನಾಮಗಳನ್ನು ಸೇರಿಸಬೇಕು. ಅದರ ಮುಂದೆ “ಮಹಾಪಿಶಾಚಿನೀಂ ಹ್ರೀಂ ಠಃ ಠಃ ಠಃ” ಎಂಬುದನ್ನು ಸೇರಿಸಿದರೆ ಸಂಪೂರ್ಣಮಂತ್ರವಾಗುವುದು. ಈ ಮಂತ್ರ ಪ್ರತಿಪಾದ್ಯಳಾದ ದೇವಿಯನ್ನು ಹೃದಯದಲ್ಲಿರುವಂತೆ ಧ್ಯಾನಿಸಬೇಕು. ಮತ್ತು ದೇವಿಗೆ ಈಂಕಾರವು ಸ್ವರೂಪವೂ, ಬಿಂದುವೇ ಮುಖವೂ, ಯುಗ್ಮಪದಗಳು ಸ್ತನಗಳೆಂದೂ ಭಾವಿಸಬೇಕು. ಈ ಆಕಾರಗಳಿಂದ ಮಂತ್ರದೇವತೆಗಳ ಐಕ್ಯದ ಅನುಸಂಧಾನವನ್ನು ಮಂತ್ರ ಜಪಕಾಲದಲ್ಲಿ ಮಾಡಬೇಕು. ಆಮೇಲೆ ಯಂತ್ರ ಪೂಜಾವಿಧಾನಕ್ಕೆ ಯಂತ್ರವನ್ನು ರಚಿಸಬೇಕು. ಅದರ ರಚನಾಕ್ರಮವು ಮುಂದೆ ವಿಹಿತವಾಗಿದೆ. ಮೊದಲು ಯೋನಿ (ತ್ರಿಕೋಣ) ಯನ್ನು ರಚಿಸಬೇಕು. ಆಮೇಲೆ ಐದು ತ್ರಿಕೋಣಗಳನ್ನೂ ಅಷ್ಟದಲ, ಷೋಡಶದಲ, ವೃತ್ತ, ಚತುರಶ್ರಗಳನ್ನೂ ರಚಿಸಬೇಕು. ಆಗ ಸಂಪೂರ್ಣಯಂತ್ರವಾಗುವುದು. ಮಧ್ಯ ಬಿಂದುವಿನಲ್ಲಿ ದೇವಿಯನ್ನು ಆವಾಹಿಸಿ ಗಂಧ, ಅಕ್ಷತ, ಪುಷ್ಪ, ಧೂಪ, ದೀಪೋಪಚಾರಗಳನ್ನೂ ನಾನಾ ಬಗೆಯಾದ ಸಂಸ್ಕೃತವಾದ ಅನ್ನ, ವಿವಿಧ ಫಲ, ಮತ್ಸ್ಯ ಇವೇ ಮುಂತಾದ್ದನ್ನೂ ದೇವಿಗೆ ನಿವೇದನಮಾಡಿ ಮೂಲಮಂತ್ರದಿಂದ ತರ್ಪಣಮಾಡಿ ಉಚಿತ ಸಂಸ್ಕಾರಗಳಿಂದ ಶೋಭಿತವಾದ ಯೋನಿಯನ್ನು ದೇವತೆಗೆ ಅರ್ಪಿಸಬೇಕು. ||೧||

ಸುಕೃತೀ ಚತುರಶ್ರಾನ್ ದೇವಾನಿಂದ್ರಾಗ್ನಿಯಮನಿರ್ಋತಿವರುಣ ವಾಯುಕುಬೇರೇಶಾನಾನ್ ವಾಮಾವರ್ತೇನ ಸಂಪೂಜ್ಯ ಷೋಡಶಾಬ್ಜಕೇ ಕಲಾವತೀ ಕಪಾಲಿನೀ ಕಲ್ಯಾಣೀ ನಿತ್ಯಾ ಕಮಲಾ ಕ್ರಿಯಾ ಕೃಪಾ ಆಕುಲಾ ಕುಲೀನಾ ಕುಮಾರೀ ಕುಂಡಲಾ ಆಕರಾ ಕಿಶೋರೀ ಕೋಮಲಾ ಕಲಾ। ಕುಮುದಾ ಏತಾಃ ಪೂಜಯೇತ್ । ಅಷ್ಟಾಬ್ಜೇ ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಾ ಮಹಾಲಕ್ಷ್ಮೀಃ। ತತೋ ಯೋನಿಪಂಚಕೇ ಚಂದ್ರಾ ಚಂದ್ರಾನನಾ ಚಾರುಮುಖೀ ಚಾಮೀಕರ ಪ್ರಭಾ ಚತುರಾ । ತತೋ ಯೋನೌ ವಾಮಾ ಜ್ಯೇಷ್ಠಾ ರೌದ್ರೀ। ತದಂತೇ ರತಿಪ್ರೀತಿ ಮನೋಭವಾಃ ಪೂಜ್ಯಾಃ ॥೨॥

ಪ್ರಾಂತೇ ಪೂಜಾಂ ಸಂತರ್ಪ್ಯ ಪುನರ್ನೈವೇದ್ಯಂ ಬಹುಗುಣಂ ನಿವೇದ್ಯಾರಾತ್ರಿಕಂ ನಿವೇದ್ಯ ಪರಾಂ ಪೂಜಯನ್ ಮಹಾಛತ್ರಚಾಮರಾದಿ ಸರ್ವದೇವೈರ್ನಮಸ್ಕೃತಾಮಾದ್ಯಶಕ್ತಿಮಷ್ಟಜಾತೀಯಾಂಸ್ವಯಂ ಭೈರವೋ ಭೂತ್ವಾ ಕುಲಾಕುಲಾಮೃತೈರ್ದೇವೀಂ ಸಂತರ್ಪ್ಯ ಸ್ವಹೃದಯೇ ತಾಂ ಪರಾಂ ವಿಸೃಜ್ಯ ಸುಖೇನೈವ ಶಿವಶಕ್ತ್ಯಾತ್ಮಕೋ ಭಾವಯನ್ ವಿಹರೇತ್ । ಸ ಸಿದ್ಧೀಶ್ವರೋ ಭವೇತ್ । ಸ ಸರ್ವೇಶ್ವರೋ ಭವೇತ್ । ಸ ಲೋಕಾಧ್ಯಕ್ಷೋ ಭವೇತ್ । ಭವೋ ಭೂತ್ವಾ ವಿಭಾವಯೇತ್ ॥೩॥

ಇತಿ ಸುಮುಖ್ಯುಪನಿಷತ್ ಸಮಾಪ್ತಾ.



ಯಂತ್ರದ ಆಯಾಯ ಸ್ಥಾನಗಳಲ್ಲಿ ಮುಂದೆ ಹೇಳುವಂತೆ ಅಂಗದೇವತೆಗಳನ್ನು ಆವಾಹಿಸಿ ಪೂಜಿಸಬೇಕು. ಚತುರಶ್ರದಲ್ಲಿ ಅಪ್ರದಕ್ಷಿಣಾವರ್ತನದಿಂದ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನರೆಂಬ ಅಷ್ಟದಿಕ್ಪಾಲಕ ರನ್ನಾವಾಹಿಸುವುದು. ಷೋಡಶದಲದಲ್ಲಿ ಕಲಾವತೀ, ಕಪಾಲಿನೀ, ಕಲ್ಯಾಣೀ, ನಿತ್ಯಾ, ಕಮಲಾ, ಕ್ರಿಯಾ, ಕೃಪಾ, ಆಕುಲಾ, ಕುಲೀನಾ, ಕುಮಾರೀ, ಕುಂಡಲಾ, ಆಕರಾ ಕಿಶೋರೀ, ಕೋಮಲಾ, ಕಲ್ಪಾ, ಕುಮುದಾ ಎಂಬ ದೇವತೆಗಳನ್ನು ಆವಾಹಿಸಬೇಕು. ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ, ಮಹಾಲಕ್ಷ್ಮೀ ಎಂಬ ಶಕ್ತಿದೇವತೆಗಳನ್ನು ಅಷ್ಟದಲದಲ್ಲಿ ಆವಾಹಿಸ ಬೇಕು. ಐದು ಯೋನಿಗಳಲ್ಲಿ ಚಂದ್ರಾ, ಚಂದ್ರಾನನಾ, ಚಾರುಮುಖೀ, ಚಾಮೀಕರ ಪ್ರಭಾ, ಚತುರಾ ಎಂಬ ದೇವತೆಗಳನ್ನು ಕ್ರಮವಾಗಿ ಪೂಜಿಸುವುದು. ಮಧ್ಯ ಯೋನಿಯಲ್ಲಿ ವಾಮಾ–ಜ್ಯೇಷ್ಠಾ–ರೌದ್ರೀ ದೇವತೆಗಳನ್ನೂ ಅದರ ಮಧ್ಯದಲ್ಲಿ ರತಿ–ಪ್ರೀತಿ–ಮನೋಭವಾ ದೇವತೆಗಳನ್ನೂ ಆವಾಹಿಸಿ ಪೂಜಿಸಬೇಕು. ||೨||

ಸಮಾಪ್ತಿಯಲ್ಲಿ ಸಮಸ್ತೋಪಚಾರಗಳಿಂದ ಕೂಡಿದ ಸಾಂಗೋಪಾಂಗಪೂಜೆ ಯನ್ನು ದೇವಿಗೆ ಸಮರ್ಪಿಸಿ ಮತ್ತೆ ಅನೇಕವಿಧ ನೈವೇದ್ಯವನ್ನು ನಿವೇದನ ಮಾಡಿ ಆರತಿಯೆತ್ತಿ ಪರಾದೇವಿಯನ್ನು ಪೂಜಿಸುತ್ತ ಛತ್ರ ಚಾಮರಾದಿ ಉಪಚಾರಗಳನ್ನು ಅರ್ಪಣ ಮಾಡುವುದು. ಅನಂತರದಲ್ಲಿ ಸಕಲ ದೇವತೆಗಳಿಂದ ವಂದ್ಯಳಾದ ಬ್ರಾಹ್ಮೀ ಮುಂತಾದ ಎಂಟು ರೂಪಗಳನ್ನು ಧರಿಸಿದ ಆದ್ಯಶಕ್ತಿರೂಪಳಾದ ದೇವಿಯನ್ನು ತನ್ನನ್ನು ಭೈರವ ರೂಪನನ್ನಾಗಿ ಧ್ಯಾನಿಸಿ ತೃಪ್ತಿಪಡಿಸಿ ಕುಲ, ಅಕುಲವೆಂಬ ಸಂಪ್ರದಾಯಾನುಸಾರ ಅರ್ಪಿಸಬೇಕಾದ ಆಯಾಯ ಉಪಕರಣಗಳೆಂಬ ಅಮೃತ ದಿಂದ ತೃಪ್ತಿಪಡಿಸಿ ಆ ದೇವಿಯನ್ನು ತನ್ನ ಹೃದಯದಲ್ಲಿ ವಿಸರ್ಜನಮಾಡಿ ಶಿವಶಕ್ತಿಗಳ ಐಕ್ಯವನ್ನು ಭಾವಿಸುತ್ತ ವಿಹರಿಸಬೇಕು. ಇಂತಹ ಸಾಧಕನು ಸಕಲ ಸಿದ್ಧಿಗಳಿಗೂ, ಸರ್ವನಿಯಾಮಕರಿಗೂ, ಸಮಸ್ತಲೋಕಗಳಿಗೂ ಈಶ್ವರನಾಗುತ್ತಾನೆ. ಮತ್ತು ತಾನೇ ಶಿವಸ್ವರೂಪನಾಗಿ ಸೃಷ್ಟಿ ಮುಂತಾದ ವ್ಯಾಪಾರಗಳನ್ನು ನಿರ್ವಹಿಸುತ್ತಾನೆ. ||೩||

ಸುಮುಖ್ಯುಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



|| ಶ್ರೀರಸ್ತು ||

## || ಹಂಸಷೋಢೋಪನಿಷತ್ ||

ಅಥಾಹ ವೈ ಹಂಸಷೋಢಾನ್ಯಾಸೀ ಶಿವೋ ಭವೇತ್ । ಸರ್ವ ಸಿದ್ಧೀಶ್ವರೋ ಭವೇತ್। ಏತತ್ಫಲಂ ವಕ್ತುಂ ಸದಾಶಿವೋಽಪಿ ನ ಸಮರ್ಥಃ । ಷೋಢಾನ್ಯಾಸಸ್ಯ ವಿರೂಪಾಕ್ಷಮಹಾಕಾಲಋಷಿಃ । ಅನುಷ್ಟುಪ್ ಛಂದಃ । ಕಾಲೀ ದೇವತಾ । ಕಾಲೀದೇಹಾರ್ಥೇ ವಿನಿಯೋಗಃ। ಹಂಸೇನಾಂಗಷಟ್ಕಂ। ಸ ನಿರ್ವಾಣರೂಪೋ ಭವೇತ್ । ಹಂ ಸಃ ಕಂ ಖಂ ಗಂ ಘಂ ಙಂ ಮಹಾ ಮುಂಡಮಾಲಾ ಧಾರಿಣಿ ಮಹಾಕಾಲಪ್ರಿಯೇ ಮಾಂ ರಕ್ಷ ರಕ್ಷ । ಷಟ್ಚಕ್ರ ವಾಸಿನಿ ವಾಗೀಶ್ವರಿ ಜಿಹ್ವಾಗ್ರೇ ವಸ । ಹಂ ನಮಃ ಶಿರಸಿ ಪ್ರೋತಂ ವೇದ ಶಿವೋ ಭವೇತ್ । ಹಂ ಸಃ ಚಂ ಛಂ ಜಂ ಝಂ ಞಂ ಮಹಾತ್ರಿಪುರಭೈರವಿ ಪುಸ್ತಕಾಕ್ಷಮಾಲಾಧಾರಿಣಿ ಶತ್ರುಮುಖಸ್ತಂಭನಂ ಕುರು ಕುರು ಸ್ವಾಹೇತಿ ಮಹಾಪದ್ಮೇ । ಹಂ ಸಃ ಟಂ ಠಂ ಡಂ ಢಂ ಣಂ ಡಾಂ ಡೀಂ ಡಂ ಡಾಕಿನಿ ಮಾಂ ರಕ್ಷ ರಕ್ಷ ಸ್ವಾಹೇತ್ಯನಾಹತೇ ನ್ಯಸೇತ್ । ತೃತೀಯಾರೂಪೋ ಭವೇತ್ ||೧||

ಹಂ ಸಃ ತಂ ಥಂ ದಂ ಧಂ ನಂ ಮಹಾಮಾರಿ ಮಾರಹಾರಿಣಿ ಹುಂ ಹುಂ ದಾರಿದ್ರ್ಯಂ ಹರ ಹರ ಸ್ವಾಹಾ । ಗುಂ ನ್ಯಸೇತ್ । ಸ ಬ್ರಹ್ಮಕಾಲೀತ್ವಂ ಗಚ್ಛತಿ । ಚತುರ್ಥತ್ವಂ ಗಚ್ಛತಿ । ಹಂ ಸಃ ಪಂ ಫಂ ಬಂ ಭಂ ಮಂ ಮಾರ್ಜಾರಿ ವೀರಾವಲಿ ಮಮಾಲಸ್ಯಂ ನಾಶಯ ನಾಶಯ । ಹಂ ಸಃ ಯಂ ರಂ ಲಂ ವಂ ಶಂ ಷಂ ಸಂ ಹಂ ಲಂಬೋದರಿ ಮಾತರ್ಮಹಾಮಂಗಲ

|| ಶ್ರೀಃ ||

# ಹಂಸಷೋಢೋಪನಿಷತ್ತಿನ ಕನ್ನಡ ಅನುವಾದವು.

ಹಂಸಷೋಢಾನ್ಯಾಸವಿಧಿಯನ್ನು ತೋರಿಸುವುದರಿಂವ ಅದೇ ಅನ್ವರ್ಥ ನಾಮಾಂಕಿತವಾದ ಈ ಉಪನಿಷತ್ತು ಅಥರ್ವಶಾಖಾಂತರ್ಗತವೇ ಆಗಿದೆ. ಇಲ್ಲಿ ಹೇಳಿದಂತೆ ಹಂಸಷೋಢಾನ್ಯಾಸವನ್ನು ಮಾಡಿದವನು ಶಿವರೂಪನಾಗುವನು. ಸರ್ವ ಸಿದ್ಧಿಗಳಿಗೆ ಅಧಿಪತಿಯಾಗುವನು. ಇದರ ಫಲವನ್ನು ಕೀರ್ತನಮಾಡಲು ಸದಾಶಿವನಿಗೆ ಕೂಡ ಅಶಕ್ಯವು. ಈ ಷೋಢಾನ್ಯಾಸಕ್ಕೆ ಆರಂಭದಲ್ಲಿ ಋಷಿ–ದೇವತಾ–ಛಂದಸ್ಸುಗಳನ್ನು ಸ್ಮರಿಸುವುದು ಆವಶ್ಯಕವು. ವಿರೂಪಾಕ್ಷ ಮಹಾಕಾಲ ಋಷಿಯು, ಅನುಷ್ಟುಪ್ ಎಂಬ ಛಂದಸ್ಸು, ಕಾಲೀದೇವತೆಯು, ಕಾಲೀದೇಹೈಕ್ಯವೆಂಬ ಅರ್ಥದಲ್ಲಿ ವಿನಿಯೋಗವು, ಈ ರೀತಿಯಾಗಿ ಋಷಿ ದೇವತಾ ಛಂದಸ್ಸು ವಿನಿಯೋಗಗಳನ್ನು ಸ್ಮರಿಸಬೇಕು. ಹಂಸಮಂತ್ರದಿಂದ ಷಡಂಗನ್ಯಾಸವನ್ನು ಮಾಡಬೇಕು. ಅವನು ಮುಕ್ತರೂಪನಾಗುವನು. "ಹಂಸಃ ಕಂಖಂಗಂಘಂಙಂ ಮಹಾಮುಂಡ ಮಾಲಾ ಧಾರಿಣಿ ಮಹಾಕಾಲಪ್ರಿಯೇಮಾಂ ರಕ್ಷ ರಕ್ಷ" ಎಂಬ ಹಂಸಪದ, ಅನುಸ್ವಾರದಿಂದ ಕೂಡಿದ ಮಾತೃಕಾ ಬೀಜಾಕ್ಷರ, ಮುಂಡಮಾಲೆಯನ್ನು ಧರಿಸಿದ ಮಹಾಕಾಲೇಶ್ವರನ ವಲ್ಲಭೆಯೆ ! ನನ್ನನ್ನು ಕಾಪಾಡು ಎಂಬ ಅರ್ಥಗಳಿಂದ ಕೂಡಿದ ಮಂತ್ರವನ್ನೂ ಆರು ಚಕ್ರಗಳಲ್ಲಿ ವಾಸಮಾಡುವ ವಾಗೀಶ್ವರಿಯೆ ! ನಾಲಿಗೆಯ ಅಗ್ರದಲ್ಲಿ ವಾಸಮಾಡು ಎಂಬ ಅರ್ಥದ "ಷಟ್ಚಕ್ರವಾಸಿನಿ ವಾಗೀಶ್ವರಿ ಜಿಹ್ವಾಗ್ರೇವಸ" ಎಂಬ ಮಂತ್ರವನ್ನೂ ಹೇಳುತ್ತ ಶಿರಸ್ಸಿನಲ್ಲಿ ನ್ಯಾಸಮಾಡಿ ಶಿರಸ್ಸಿನಲ್ಲಿ ದೇವಿಯ ಅಧಿಷ್ಠಾನವನ್ನು ಭಾವಿಸುವುದು. ಈ ಮಂತ್ರಗಳಲ್ಲಿ ಬೀಜಾಕ್ಷರಗಳು ಶಾಸ್ತ್ರ ಸಂಪ್ರದಾಯಗಳ ಆಧಾರದಿಂದ ಬಂದಿರುವುವು. "ಹಂಸಃ ಚಂ ಛಂ ಜಂ ಝಂ ಞಂ ಮಹಾತ್ರಿಪುರಭೈರವಿ ಪುಸ್ತಕಾಕ್ಷ ಮಾಲಾಧಾರಿಣಿ ಶತ್ರುಮುಖ ಸ್ತಂಭನಂ ಕುರು ಕುರು ಸ್ವಾಹಾ" ಎಂಬುದು ಎರಡನೆಯ ಮಂತ್ರವು. ಪುಸ್ತಕ ಜಪಮಾಲೆಗಳನ್ನು ಧರಿಸಿದ ತ್ರಿಪುರಭೈರವೀ ದೇವಿಯೆ ! ಶತ್ರುಗಳ ಮುಖಸ್ತಂಭನಮಾಡು ಎಂದು ಮಂತ್ರದ ಅರ್ಥವು. ಈ ಮಂತ್ರದಿಂದ ಮಹಾಪದ್ಮದಲ್ಲಿ ನ್ಯಾಸಮಾಡುವುದು. "ಹಂಸಃ ಟಂ ಠಂ ಡಂ ಢಂ ಣಂ ಡಾಂ ಡೀಂ ಡಂ ಡಾಕಿನಿ ಮಾಂ ರಕ್ಷ ರಕ್ಷ ಸ್ವಾಹಾ" ಎಂಬ ಮಂತ್ರದಿಂದ ಅನಾಹತ ಚಕ್ರದಲ್ಲಿ ನ್ಯಾಸ ಮಾಡಬೇಕು. ಡಾಕಿನಿ ದೇವಿಯೆ ! ನನ್ನನ್ನು ಕಾಪಾಡು ಎಂಬುದು ಮಂತ್ರಾರ್ಥ. ಈ ನ್ಯಾಸವು ತೃತೀಯಕಲಾ ರೂಪವನ್ನು ಸಾಧಕನಿಗೆ ಉಂಟುಮಾಡುವುದು. ||೧||

"ಹಂಸಃ ತಂ ಥಂ ದಂ ಧಂ ನಂ ಮಹಾಮಾರಿ ಮಾರಹಾರಿಣಿ ಹುಂ ಹುಂ ದಾರಿದ್ರ್ಯಂ ಹರ ಹರ ಸ್ವಾಹಾ" ಎಂಬ ನಾಲ್ಕನೆಯ ಮಂತ್ರವನ್ನೂ ಗುಂ ಎಂಬ ವರ್ಣವನ್ನೂ ನ್ಯಾಸಮಾಡಬೇಕು. ಮನ್ಮಥನನ್ನು ಅಡಗಿಸಿದ ಮಹಾಮಾರೀ ದೇವಿಯು ದಾರಿದ್ರ್ಯವನ್ನು ಹೋಗಲಾಡಿಸಲಿ ಎಂದು ಮಂತ್ರದ ತಾತ್ಪರ್ಯವು. ಈ ನ್ಯಾಸವು ಬ್ರಹ್ಮಾತ್ಮಕ ಕಾಲೀಸ್ವರೂಪ, ಚತುರ್ಥ ಕಲಾತ್ಮಕತ್ವಪ್ರಾಪ್ತಿಗೆ ಸಾಧನವು.

ಪ್ರಿಯೇ ಮಮ ಜಾಡ್ಯಂ ಛೇದಯ ಛೇದಯ । ಭ್ರಂಶ ಭ್ರಂಶ । ಭಗವತಿ ಮಾಂ ರಕ್ಷ ರಕ್ಷ । ಭುವನಧಾರಿಣಿ ಮಾಂ ಧಾರಯ ಧಾರಯ । ಸ್ವಾಹಾ ಪದದ್ವಯಂ ನ್ಯಸ್ಯ ಶಿವೋ ಭವೇತ್ ॥೨॥

ಅಥ ವೈ ಷಷ್ಠೀಂ ನ್ಯಸೇತ್ । ಹಂ ಸಃ ಲಂ ಕ್ಷಂ ಮಹಾಲಕ್ಷ್ಮಿ ರಾಜ ರಾಜೇಶ್ವರಿ ಮಹಾಕಾಲಪ್ರಿಯೇ ಕಾಲಖಂಡಿನಿ ಖಂಡಿನಿ ಖಂಡಯ ಖಂಡಯ ಖಾಂ ಖೀಂ ಖೂಂ ಖೈಂ ಖೋಂ ಖೌಂ ಖಃ ಖನಿತ್ರಿ ನಮೋ ಸ್ವಾಹೇತಿ ಸರ್ವಾಂಗೇ ನ್ಯಸೇತ್ । ಹಂಸಃ ಪೂರ್ಣಾತ್ಮಶಬ್ದವ್ಯಾಪಕಂ ಕುರ್ಯಾತ್ । ಇತಿ ಷಷ್ಠೀ । ಸ ಶಿವೋ ಭವೇತ್ । ಸ ಸೋಮಯಾಜೀ ಭವೇತ್ । ಸ ವಿರಕ್ತೋ ಭವೇತ್ । ಸ ಸರ್ವದೀಕ್ಷಿತೋ ಭವೇತ್ । ಸೋಽಮೃತತ್ವಂ ಗಚ್ಛತಿ । ಸ ಸರ್ವಕಾಲತ್ವಂ ಗಚ್ಛತಿ । ಸ ಸರ್ವನ್ಯಾಸಕಾರೀ ಭವೇತ್ । ಅನಧೀತಗತಿರ್ವಿದ್ಯಾಂ ಲಭೇತ್ । ತರ್ಕವ್ಯಾಕರಣಾದಿಕರ್ತಾ ಭವೇತ್ । ಸರ್ವಸಿದ್ಧೀಶ್ವರೋ ಭವೇತ್ । ಕಾಲೀರೂಪೋ ಭವೇತ್ । ಸೋಽಹಂ ಹಂಸ ಇತ್ಯಾಹ ಭಗವಾನ್ ಸದಾ ಶಿವ ಇತಿ ಪ್ರೋಕ್ತಂ ವೇದ ॥೩॥

ಇತಿ ಹಂಸಷೋಢೋಪನಿಷತ್ ಸಮಾಪ್ತಾ.

"ಹಂಸಃ ಪಂ ಫಂ ಬಂ ಭಂ ಮಂ ಮಾರ್ಜಾರಿ ವೀರಾವಲಿ ಮಮಾಲಸ್ಯಂ ನಾಶಯ ನಾಶಯ" ಎಂಬುದೊಂದು ಮಂತ್ರವು. ವೀರಾವಲೀರೂಪಳಾದ ಮಾರ್ಜಾರೀ ದೇವಿಯು ಆಲಸ್ಯವನ್ನು ದೂರಮಾಡಲಿ ಎಂದು ಅರ್ಥ. "ಹಂಸಃ ಯಂ ರಂ ಲಂ ವಂ ಶಂ ಷಂ ಸಂ ಹಂ ಲಂಬೋದರಿ ಮಾತರ್ಮಹಾಮಂಗಲಪ್ರಿಯೇ ಮಮ ಜಾಡ್ಯಂ ಛೇದಯ ಛೇದಯ । ಭ್ರಂಶ ಭ್ರಂಶ । ಭಗವತಿ ಮಾಂ ರಕ್ಷ ರಕ್ಷ । ಭುವನಧಾರಿಣಿ ಮಾಂ ಧಾರಯ ಧಾರಯ" ಎಂಬುದು ಮತ್ತೊಂದು ಮಂತ್ರವು. ಮಂಗಲಗಳಲ್ಲಿ ಪ್ರೀತಿಯುಳ್ಳ ಲಂಬೋದರವುಳ್ಳ ಜನನಿಯೆ ! ನನ್ನ ಜಾಡ್ಯವನ್ನು ಛೇದಿಸು ಅದನ್ನು ತೊಲಗಿಸು. ಪೂಜ್ಯಳೆ! ನನ್ನನ್ನು ಕಾಪಾಡು, ಪ್ರಪಂಚವನ್ನೆಲ್ಲ ಧರಿಸಿದ ದೇವಿ ! ನನ್ನನ್ನೂ ಧರಿಸು ಎಂದು ಅರ್ಥ, ಈ ಕಡೆಯ ಮಂತ್ರದ ಅಂತದಲ್ಲಿ ಎರಡು ಸ್ವಾಹಾ ಎಂಬ ಶಬ್ದಗಳನ್ನು ಪಠಿಸಬೇಕು. ಈ ಮಂತ್ರಗಳಿಂದ ನ್ಯಾಸಮಾಡಬೇಕು. ಸಾಕ್ಷಾತ್ ಶಿವಸ್ವರೂಪವನ್ನು ಈ ಮಂತ್ರ ಪಠನಪೂರ್ವಕವಾದ ನ್ಯಾಸಗಳಿಂದ ಹೊಂದುತ್ತಾನೆ. ॥೨॥

ಆಮೇಲೆ ಆರನೆಯ ನ್ಯಾಸವನ್ನು ಮಾಡಬೇಕು. "ಹಂಸಃ ಲಂ ಕ್ಷಂ ಮಹಾಲಕ್ಷ್ಮಿ ರಾಜರಾಜೇಶ್ವರಿ ಮಹಾಕಾಲಪ್ರಿಯೇ ಕಾಲಖಂಡಿನಿ ಖಂಡಿನಿ ಖಂಡಯ ಖಂಡಯ ಖಾಂ ಖೀಂ ಖೂಂ ಖ್ರೈಂ ಖೋಂ ಖೌಂ ಖಃ ಖನಿತ್ರಿ ನಮೋ ಸ್ವಾಹಾ" ಎಂಬ ಮಂತ್ರವನ್ನು ಪಠಿಸಿ ಸರ್ವಾಂಗಗಳಲ್ಲಿಯೂ ನ್ಯಾಸಮಾಡಬೇಕು. ಮಹಾಲಕ್ಷ್ಮಿ ರಾಜರಾಜೇಶ್ವರಿ ಎಂಬ ಅಪರಾವತಾರಗಳನ್ನು ಸ್ವೀಕರಿಸಿದ, ಮಹಾಕಾಲೇಶ್ವರನ ಸತಿಯಾದ, ಕಾಲವನ್ನೆ ನಿಗ್ರಹಿಸಿ ಸಮಸ್ತ ಪ್ರತಿಕೂಲವಸ್ತುವನ್ನು ಖಂಡಿಸುವ ದೇವಿಯು ನಮ್ಮ ಪ್ರತಿಶತ್ರು ಮುಂತಾದ ವಿಪತ್ತನ್ನು ಖಂಡಿಸಲಿ ಎಂದು ಮಂತ್ರಾರ್ಥವು, ಇಷ್ಟಾದಮೇಲೆ ಹಂಸಮಂತ್ರವನ್ನು ಪಠಿಸಿ ಐವತ್ತು ವ್ಯಾಪಕನ್ಯಾಸಗಳನ್ನು ಆಚರಿಸಬೇಕು. ಇದು ಷಷ್ಠನ್ಯಾಸವು. ಈ ನ್ಯಾಸಾಚರಣೆಯು ಮುಂದೆ ಹೇಳುವ ಫಲಗಳನ್ನು ಕೊಡುವುದು. ಇದನ್ನು ಆಚರಿಸಿದವನು ಶಿವರೂಪನಾಗುತ್ತಾನೆ. ಸೋಮಯಾಗವನ್ನು ಮಾಡಿದವನಂತೆ ಆಗಿ ಯಾಗ ಫಲವನ್ನು ಅನುಭವಿಸುತ್ತಾನೆ. ವಿರಕ್ತನಾಗುವನು. ಸರ್ವದೀಕ್ಷಾ ವಿಧಿಗಳಿಂದ ದೀಕ್ಷಿತನು ಆಗುವನು. ಅಮೃತತ್ವವನ್ನು ಹೊಂದುವನು. ಸರ್ವವನ್ನು ಅಧೀನದಲ್ಲಿರಿಸುವ ಕಾಲಸ್ವರೂಪವನ್ನು ಹೊಂದುತ್ತಾನೆ. ಸರ್ವನ್ಯಾಸಗಳನ್ನು ಆಚರಿಸಿದವನಾಗುತ್ತಾನೆ. ಅಧ್ಯಯನವನ್ನು ಮಾಡದವನು ಕೂಡ ಸರ್ವ ವಿದ್ಯೆಗಳನ್ನೂ ಹೊಂದುತ್ತಾನೆ. ತರ್ಕ-ವ್ಯಾಕರಣಾದಿ ಶಾಸ್ತ್ರಗಳನ್ನು ರಚಿಸುತ್ತಾನೆ. ಸರ್ವಸಿದ್ಧಿಗಳಿಗೆ ಪತಿಯಾಗುತ್ತಾನೆ. ಕಾಲೀರೂಪನಾಗುತ್ತಾನೆ. ಇಂತಹ ಅನೇಕ ಫಲಗಳನ್ನು ಕೊಡುವ ನ್ಯಾಸವಿಧಿಯು ಇಲ್ಲಿ ತೋರಿಸಲ್ಪಟ್ಟಿದೆ. ಪ್ರತಿಯೊಂದು ಮಂತ್ರವೂ ಹಂಸ ಪದದಿಂದ ಆರಂಭವಾಗುವುದರಿಂದ ಈ ನ್ಯಾಸವು ಹಂಸಷೋಢಾ ನ್ಯಾಸವೆನ್ನಲ್ಪಡುವುದು. ಸೋಹಂ ಹಂಸಃ ಎಂಬುದು ಹಂಸರೂಪಿಯಾದ ಪರಮಾತ್ಮ ಜೀವಾತ್ಮರ ಐಕ್ಯವನ್ನು ಬೋಧಿಸುವ ಮುಖ್ಯ ಹಂಸಮಂತ್ರವು ಎಂದು ಪೂಜ್ಯ ಗುರುವಾದ ಸದಾಶಿವನು ಉಪದೇಶಿಸಿರುವನು. ಇದರಿಂದಲೇ ಸರ್ವವೂ ವ್ಯಾಪ್ತವಾಗಿದೆಯೆಂದು ಉಪಾಸಕನು ತಿಳಿಯುವ ಜ್ಞಾನವು ಮಹಾಫಲದಾಯಕವಾದುದು॥೩॥

ಹಂಸಷೋಢೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.

|| ಶ್ರೀರಸ್ತು ||

# || ಗಾಯತ್ರ್ಯುಪನಿಷತ್ ||

---

ಓಂ ಭೂಮಿರನ್ತರಿಕ್ಷಂ ದ್ಯೌರಿತ್ಯಷ್ಟಾವಕ್ಷರಾಣಿ । ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹಾಸ್ಯಾ ಏತತ್ಸ ಯಾವದೇತೇಷು ಲೋಕೇಷು ತಾವದ್ಧ ಜಯತಿ । ಯೋಽಸ್ಯಾ ಏತದೇವಂ ಪದಂ ವೇದ ಋಚೋ ಯಜೂಂಷಿ ಸಾಮಾನೀತ್ಯಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹಾಸ್ಯಾ ಏತತ್ಸ ಯಾವತೀಯಂ ತ್ರಯೀ ವಿದ್ಯಾ ತಾವದ್ಧ ಜಯತಿ । ಯೋಽಸ್ಯಾ ಏತದೇವಂ ಪದಂ ವೇದ ಪ್ರಾಣೋಪಾನೋವ್ಯಾನ ಇತ್ಯಷ್ಟಾವಕ್ಷರಾಣ್ಯಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹಾಸ್ಯಾ ಏತತ್ಸ ಯಾವದಿದಂ ಪ್ರಾಣಿತಿ ತಾವದ್ಧ ಜಯತಿ । ಯೋಽಸ್ಯಾ ಏತದೇವಂ ಪದಂ ವೇದಾಥಾಸ್ಯಾ ಏತದೇವ ತುರೀಯಂ ದರ್ಶಿತಂ ಪದಂ ಪರೋಽ ರಜಾ ಯ ಏಷ ತಪತೀತಿ ಯದ್ವೈ ಚತುರ್ಥಂ ತತ್ತುರೀಯಂ ದರ್ಶಿತಂ ಪದಮಿತಿ ದದರ್ಶ ಇವ ಹ್ಯೇಷ ಪರೋಽರಜಾ ಇತಿ ಸರ್ವ ಮುಹ್ಯೇಷ ರಜ ಉಪರ್ಯುಪರಿ ತಪತ್ಯೇವಂ ಹ ವಾ ಏಷ ಶ್ರಿಯಾ ಯಶಸಾ ತಪತಿ ||೧||

॥ ಶ್ರೀಃ ॥

# ಗಾಯತ್ರ್ಯುಪನಿಷತ್ತಿನ ಕನ್ನಡ ಅನುವಾದವು.

---

ಗಾಯತ್ರ್ಯುಪನಿಷತ್ ಎಂಬ ಹೆಸರಿನಿಂದ ಗಾಯತ್ರಿಯ ಮಹಿಮೆಯು ಇಲ್ಲಿ ಹೇಳಲ್ಪಡುವುದೆಂಬುದು ಸ್ಪಷ್ಟವಾಗುತ್ತದೆ. ಛಂದೋರೂಪವಾದ ಗಾಯತ್ರಿಯ ಮಂತ್ರವನ್ನೂ ಅದರಿಂದ ಪ್ರತಿಪಾದ್ಯವಾದ ದೇವತೆಯನ್ನೂ ದೇವತೆಯೆಂಬ ಮೂಲಕಾರಣದಿಂದ ಹುಟ್ಟಿದ ಸಕಲ ಲೋಕ, ವಾಙ್ಮಯ, ಅಧ್ಯಾತ್ಮವಸ್ತುಗಳನ್ನೂ ಅಭಿನ್ನತತ್ತ್ವಗಳನ್ನಾಗಿ ಭಾವಿಸಬೇಕು. ಇದಕ್ಕೆ ಅನುಕೂಲವಾಗಿ ಈ ಉಪನಿಷತ್ತಿನಲ್ಲಿ ಗಾಯತ್ರಿಗೆ ಲೋಕ, ವಾಙ್ಮಯ, ಅಧ್ಯಾತ್ಮ ವಸ್ತುಗಳನ್ನು ಒಂದೊಂದು ಪಾದವನ್ನಾಗಿ ಕಲ್ಪಿಸಿದೆ. ಒಂದೊದು ಪಾದವೂ ಅಷ್ಟಾಕ್ಷರಗಳಿಂದ ಕೂಡಿದೆಯೆಂದೂ ಅದನ್ನು ಉಪಾಸನೆಮಾಡುವುದರಿಂದ ವಿವಿಧವಾದ ಕಾಮ್ಯಫಲಗಳನ್ನು ಹೊಂದಬಹುದೆಂದೂ ತಿಳಿಸಿದೆ. ಆದಿಯಲ್ಲಿ ಉಪಾಸ್ಯದೇವತಾವಾಚಕವೂ ಪ್ರತೀಕವೂ ಆದ ಓಂ ಶಬ್ದವನ್ನು ಪಠಿಸಿದೆ. “ಭೂಮಿರಂತರಿಕ್ಷಂದ್ಯೌಃ” ಎಂಬ ಮಂತ್ರವು ಗಾಯತ್ರಿಯ ಪ್ರಥಮ ಪಾದವು. ಇದು ಲೋಕತ್ರಯವೆಂಬ ಅರ್ಥವನ್ನು ಬೋಧಿಸುತ್ತದೆ. ಶಬ್ದ-ಅರ್ಥಗಳಿಗೆ ಭೇದವಿಲ್ಲದ್ದರಿಂದ ಅರ್ಥರೂಪವಾದ ದೇವತೆಗೆ ಮಂತ್ರಪ್ರತಿಪಾದ್ಯವಾದ ಲೋಕತ್ರಯವು ಒಂದುಪಾದವೆಂದೂ ಶಬ್ದಾತ್ಮಕ ದೇವತೆಗೆ ಈ ಮಂತ್ರರಾಶಿಯೇ ಒಂದುಪಾದವೆಂದೂ ಉಪಾಸನೆಮಾಡಬೇಕು. ಯ-ರ-ಲ-ವ ಕಾರಗಳ ಸಂಯೋಗಾಕ್ಷರವಿದ್ದಲ್ಲಿ ಬೇರೆವರ್ಣಗಳನ್ನಾಗಿ ಎಣಿಸಿ ಛಂದಸ್ಸಿಗೆ ಬೇಕಾದಷ್ಟು ವರ್ಣಪೂರ್ತಿಯನ್ನು ಮಾಡಿಕೊಳ್ಳುವ ವಾಡಿಕೆಯಿರುವುದರಿಂದ ಇಲ್ಲಿಯೂ ಅಷ್ಟಾಕ್ಷರಗಳು ಇವೆಯೆಂದು ಹೇಳಬಹುದು. ಈ ಅಷ್ಟಾಕ್ಷರಗಳಿಂದ ಕೂಡಿದ ಗಾಯತ್ರಿಯ ಮೊದಲನೆಯ ಪಾದವನ್ನು ಉಪಾಸನೆಮಾಡಿದವನು ಲೋಕತ್ರಯದಲ್ಲಿ ಭೋಗ್ಯವಸ್ತುವಿರುವವರೆಗೂ ಎಲ್ಲವನ್ನೂ ಅನುಭವಿಸುವ ಮಹಿಮೆಯಿಂದ ಗೆಲ್ಲುತ್ತಾನೆ. ಮುಂದೆ “ಋಚೋ ಯಜೂಂಷಿ ಸಾಮಾನಿ” ಋಕ್ ಯಜುಸ್‌ಸಾಮವೆಂಬ ವೇದತ್ರಯವನ್ನು ಬೋಧಿಸುವುದೊಂದು ಗಾಯತ್ರಿಯಪಾದ; ಇದು ಎರಡನೆಯದು. ಇದೂ ಅಷ್ಟಾಕ್ಷರಗಳಿಂದ ಕೂಡಿದೆ. ಈ ಪಾದವನ್ನು ಉಪಾಸನೆ ಮಾಡಿದವನು ತ್ರಯೀವಿದ್ಯೆಯು ಪ್ರತಿಷ್ಠಿತವಾಗಿರುವಷ್ಟು ಅವಧಿಯಲ್ಲಿ ಅನೇಕ ಸೌಖ್ಯಗಳನ್ನು ಅನುಭವಿಸುವ ಮಹಿಮೆಯಿಂದ ಜಯಶೀಲನಾಗುತ್ತಾನೆ. ಪ್ರಾಣ, ಅಪಾನ, ವ್ಯಾನಗಳೆಂಬ ಶರೀರದೊಳಗಿನ ವಾಯು ಪ್ರಭೇದಗಳನ್ನು ಬೋಧಿಸುವ “ಪ್ರಾಣೋಽಪಾನೋ ವ್ಯಾನಃ” ಎಂಬುದು ಮೂರನೆಯ ಪಾದವು. ಇದು ಹಿಂದೆ ಹೇಳಿದಂತೆ ಸಂಯುಕ್ತಾಕ್ಷರಗಳನ್ನು ವಿಂಗಡಿಸಿ ಗಣನೆ

ಯೋಽಸ್ಯಾ ಏತದೇವಂ ಪದಂ ವೇದ ಸ್ಯೈಷಾ ಗಾಯತ್ರೀ ಏತಸ್ಮಿಂಸ್ತುರೀಯೇ ದರ್ಶಿತೇ ಪದೇ ಪರೋರಜಸಿ ಪ್ರತಿಷ್ಠಿತಾ ತದ್ವೈ ಸತ್ಸತ್ಯೇ ಪ್ರತಿಷ್ಠಿತಂ ಚಕ್ಷುರ್ಹಿ ವೈ ಸತ್ಯಂ ತಸ್ಮಾದ್ಯದಿದಾನೀಂ ದ್ವೌ ವಿವದಮಾನಾವೇಯಾತಾಂ ಅಹಮದ್ರಾಕ್ಷಮಹಮಶ್ರೌಷಮಿತಿ । ಯ ಏವ ಬ್ರೂಯಾದಹಮದ್ರಾಕ್ಷಮಿತಿ ತಸ್ಯಾ ಏವ ಶ್ರದ್ಧನ್ಯಾ ಯ ಏತದ್ವೈ ತತ್ ಸತ್ಯಂ ಬಲೇ ಪ್ರತಿಷ್ಠಿತಂ ತಸ್ಮಾದಾಹುರ್ಬಲಂ ಸತ್ಯಾದೌ ಜ್ಞೀಯಂ ಏವಂ ವೈಷಾ ಗಾಯತ್ರ್ಯಧ್ಯಾತ್ಮಂ ಪ್ರತಿಷ್ಠಿತಾ ಸಾ ಹೈಷಾ ಗಾಯಂಸ್ತತೇ ಪ್ರಾಣಾ ವೈ ಗಾಯಾಸ್ತಾನ್ ಪ್ರಾಣಾಂಸ್ತತೇ ಉದ್ಯದ್ಗಾಯಂಸ್ತತೇ ತಸ್ಮಾದ್ಗಾಯತ್ರೀ ನಾಮ ಸ ಯಾಮೇವಾಮೂಂ ಮತ್ವಾ ಹೈಷೈವಮಾಸ ಯಸ್ಮಾ ಇತ್ಯಾಹ ತಸ್ಯ ಪ್ರಮಾಣಂ ತ್ರಾಯತೇ ॥೨॥

ಮಾಡುವುದರಿಂದ ಎಂಟು ಅಕ್ಷರಗಳನ್ನು ಹೊಂದಿದೆ. ಈ ಪಾದದ ಉಪಾಸಕನು ಜಗತ್ತಿನಲ್ಲಿ ಯಾವುದಾದರೊಂದು ವಸ್ತು ಎದುವರೆಗೂ ಪ್ರಾಣವನ್ನು ಧರಿಸಿದೆಯೋ ಅದುವರೆಗೊ ಅನಂತಭೋಗಗಳ, ಅನುಭವದಿಂದ ಜಯಶೀಲನಾಗುತ್ತಾನೆ. ಇದು ವರೆಗೆ ಫಲಪ್ರಾಪ್ತಿಸಹಿತವಾದ ಪಾದತ್ರಯೋಪಾಸನೆಯು ವಿಹಿತವಾಗಿದೆ. ಮುಂದೆ ಚತುರ್ಥವಾದವನ್ನು ತೋರಿಸಬೇಕು. ಗಾಯತ್ರಿಯ ಅವ್ಯಕ್ತರೂಪದ "ಪರೋಜಸೇ ಸಾವದೋಮ್" ಎಂಬುದೇ ನಾಲ್ಕನೆಯಪಾದ. ಹಿಂದೆಹೇಳಿರುವ ಮೂರುಪಾದಗಳು ಕಲ್ಪಿತಗಳೂ ನಾಲ್ಕನೆಯ ಪಾದವು ಮಾತ್ರ ಅಕಲ್ಪಿತವೂ ಆಗಿವೆ. ಈ ನಾಲ್ಕನೆಯ ಪಾದದಲ್ಲಿ ಪರೋರಜಾಃ ಎಂಬ ಪದವಿದೆ. ಇದು ರಜಸ್ಸನ್ನು ಮೀರಿಸಿರುವುದು ಎಂಬ ಯೋಗಾರ್ಥವನ್ನು ಬೋಧಿಸುತ್ತದೆ. ಈ ಅರ್ಥಕ್ಕೆ ದರ್ಶಿತಂ ಎಂಬ ವಿಶೇಷಣ ವನ್ನು ತೋರಿಸಿದೆ. ಎಲ್ಲ ಲೋಕಗಳ ಊರ್ಧ್ವಭಾಗದಲ್ಲಿ ಆದಿತ್ಯನು ತಪಿಸುತ್ತ ಎಲ್ಲವನ್ನೂ ಸಾಕ್ಷಾತ್ಕರಿಸುತ್ತಿರುವನು. ಆದ್ದರಿಂದ ದರ್ಶಿತಂ ಎಂಬ ವಿಶೇಷಣ ದಿಂದಲೂ ಪರೋರಜಾಃ ಎಂಬ ವಿಶೇಷ್ಯದಿಂದಲೂ ಬೋಧಿಸಲ್ಪಡುವನು. ಆದಿತ್ಯ ಮಂಡಲವೆಂಬ ಉತ್ಕೃಷ್ಟೋಪಾಧಿಯಲ್ಲಿ ಪ್ರತಿಬಿಂಬಿಸಿದ ಚೈತನ್ಯಾತ್ಮಕ ವಿಶಿಷ್ಟ ದೇವತೆಯು ನಾಲ್ಕನೆಯ ಪಾದವೆಂದು ಅರಿತು ಉಪಾಸನೆಮಾಡುವವನು ಸಂಪತ್ತು, ಕೀರ್ತಿ ಮುಂತಾದುವುಗಳಿಂದ ತುಂಬಿ ಗಣ್ಯನಾಗುತ್ತಾನೆ. ||೧||

ಹಿಂದೆ ತೋರಿಸಿದ ಪಾದತ್ರಯಗಳಿಂದ ಕೂಡಿದ ಗಾಯತ್ರಿಯು ಪೂರ್ವಪಾದ ಗಳು ಉಪಾಸನಾರ್ಥವಾಗಿ ಕಲ್ಪಿತವಾದ್ದರಿಂದ ಪರಮಾರ್ಥವಾದ ನಾಲ್ಕನೆಯ "ದರ್ಶಿತ" ಎಂಬ ವಿಶೇಷಣದಿಂದ ಕೂಡಿದ "ಪರೋರಜಾ" ಎಂಬ ಪಾದದಲ್ಲಿ ಪ್ರತಿಷ್ಠೆ ಯನ್ನು ಹೊಂದಿರುವುದು. ಇದನ್ನು ಆಧ್ಯಾತ್ಮ, ಆಧಿದೈವ ಎಂಬ ಎರಡು ವಿಧದಿಂದ ಉಪಾಸನೆಮಾಡಬೇಕು. ಶರೀರದೊಳಗಿನ ಉತ್ಕೃಷ್ಟ ಉಪಾಧಿವಸ್ತುವಿನಲ್ಲಿ ಗಾಯತ್ರೀ ದೃಷ್ಟಿಯಿಂದ ಮಾಡುವ ಉಪಾಸನೆ ಆಧ್ಯಾತ್ಮೋಪಾಸನೆಯು. ದೇವ ವೃಂದದಲ್ಲಿನ ಒಂದು ಉಪಾಧಿಯಲ್ಲಿ ಮಾಡುವ ಉಪಾಸನೆ ಆಧಿದೈವೋಪಾಸನೆಯು. ಗಾಯತ್ರಿಯು ಸತ್ಯಸ್ವರೂಪದಲ್ಲಿ ಪ್ರತಿಷ್ಠಿತಳಾದವಳು. ಕಾರ್ಯಕರಣ ಸಂಘಾತ ರೂಪವಾದ ಶರೀರದಲ್ಲಿ ಚಕ್ಷುರಿಂದ್ರಿಯವು ಸತ್ಯಸ್ವರೂಪವು. ಆದ್ದರಿಂದಲೇ ಈಗಿನ ವ್ಯವಹಾರದಲ್ಲಿ ಯಾವುದಾದರೊಂದು ವಿಷಯವನ್ನಧಿಕರಿಸಿ ಇಬ್ಬರು ವಾದಿಗಳು ಒಬ್ಬನು ಆ ವಸ್ತುವನ್ನು ಪ್ರತ್ಯಕ್ಷವಾಗಿನೋಡಿಕೊಂಡು ಮತ್ತೊಬ್ಬನು ಯಾರಿಂದಲೋ ಕೇಳಿಕೊಂಡು ಬಂದು ವಿರುದ್ಧಪಕ್ಷಗಳನ್ನವಲಂಬಿಸಿ ವಾದ ಹೂಡಿದರೆ ಯಾವನು ನೋಡಿಕೊಂಡು ಬಂದಿರುವನೋ ಅವನ ಪಕ್ಷವೇ ಸತ್ಯವೆಂದು ಅವನ ಮಾತು ನಂಬಿಕೆಗೆ ಅರ್ಹವಾಗುತ್ತದೆ. ಇದರಿಂದ ಚಕ್ಷುರೂಪವಾದ ಸತ್ಯದಲ್ಲಿ ಪ್ರತಿಷ್ಠಿತ ಳೆಂದು ತಿಳಿದಂತಾಗಿದೆ. ಸತ್ಯವು ಬಲದಲ್ಲಿ ಪ್ರತಿಷ್ಠಿತವಾಗಿದೆ. ಚಕ್ಷುರಿಂದ್ರಿಯವು

ತಾಂ ಹೈಕೇ ಸಾವಿತ್ರೀಮನುಷ್ಟುಭಮನ್ವಾಹುರನುಷ್ಟುಬ್ಭೈತದ್ವಾಚ ಮನುಬ್ರೂಮ ಇತಿ ನ ತಥಾ ಕುರ್ಯಾದ್ಗಾಯತ್ರೀಮೇವಾನುಬ್ರೂಯಾದ್ಯದಿ ಹ ವಾಪಿ ಬಹ್ವಿವ ಪ್ರತಿಗೃಹ್ಣಾತಿ । ಇಹೈವ ತದ್ಗಾಯತ್ರ್ಯಾ ಏಕಂಚನ ಪದಂ ಪ್ರತಿ ಯ ಇಮಾಂಸ್ತ್ರೀನ್ ಲೋಕಾನ್ ಪೂರ್ಣಾನ್ ಪ್ರತಿಗೃಹ್ಣೀಯಾತ್ ಸೊಸ್ಯಾ ಏತತ್ಪ್ರಥಮಂ ಪದಮಾಪ್ನುಯಾತ್ । ಅಥ ಯಾವತೀಯಂ ತ್ರಯೀ ವಿದ್ಯಾ ಯಸ್ತಾವತ್ ಪ್ರತಿಗೃಹ್ಣೀಯಾತ್ ಸೋಸ್ಯಾ ಏತದ್ವಿತೀಯ ಮಾಪ್ನುಯಾತ್ । ಅಥ ಯಾವದಿದಂ ಪ್ರಾಣಿತಿ ಯಸ್ತಾವತ್ ಪ್ರತಿಗೃಹ್ಣೀಯಾತ್ । ತಸ್ಯಾ ಉಪಸ್ಥಾನಾ ಗಾಯತ್ರ್ಯೇಕಪದೀ ದ್ವಿಪದೀ ತ್ರಿಪದೀ ಚತುಷ್ಪದ್ಯಪದಾ ಸಾ ನಹಿ ಪದ್ಯತೇ । ಯಸ್ತೇ ತುರೀಯಾಯ ಪದಾಯ ದರ್ಶಿತಾಯ ಪರೋರಜಸೇ ಸಾವದೋಮಿತಿ ಸಮಧೀಯೀತ ವಾ ನ ಹೈವಾಸ್ಮೈ ಸ ಕಾಮಃ ಸಮೃಧ್ಯತೇ । ಯಸ್ಮಾ ಏವಮುಪತಿಷ್ಠತೇ ಹ ಮದಃ ಪ್ರಾಪಮಿತಿ ವಾ ಏತದ್ಧವೈ ತಜ್ಜನಕೋ ವೈದೇಹೋ ವುರಿಲಮಾಶ್ರಿತರಾಶ್ವಿಮುವಾಚ । ಯತ್ತು ಹೋತ ಗಾಯತ್ರೀಂ ಕಥಂ ಹಲೀಭೂತೋ ವಹಸೀತಿ । ಮುಖಂ ಹ್ಯಸ್ಯಾಃ ಸಸಂಭ್ರಮಂ ವಿದಾಂಚಕಾರೇತಿ ಹೋವಾಚ । ತಸ್ಯಾ ಅಗ್ನಿರೇವ ಮುಖಂ ಯದಿಹ ವಾಪಿ ವಹ್ನಿ ಮಾನಗ್ನಾವಭ್ಯಾದಧಾತಿ ಸರ್ವಮೇತತ್ಸಂದಹತ್ಯೇವಂ

ಶಾರೀರಬಲವಿರುವವರೆಗೂ ತನ್ನ ಶಕ್ತಿಯನ್ನು ಉಪಯೋಗಿಸಿ ಅರ್ಥಗ್ರಹಣ ಮಾಡುವುದು. ಅರ್ಥವನ್ನು ಗ್ರಹಿಸಿದಾಗ ಗೃಹೀತವಾದ ಅರ್ಥವು ಸತ್ಯಸ್ವರೂಪವಾಗಿದ್ದುದರ ಬಲದಿಂದ ವಿರುದ್ಧಪಕ್ಷವನ್ನು ದೂರಮಾಡುವುದು. ಈ ಯುಕ್ತಿಯಿಂದ ಸತ್ಯವು ಬಲದಲ್ಲಿ ಪ್ರತಿಷ್ಠಿತವೆಂಬುದು ಸ್ಥಿರವಾಗಿದೆ. ಹೀಗೆ ಚಕ್ಷುಸ್ಸು ಬಲಗಳಲ್ಲಿ ಪ್ರತಿಷ್ಠಿತವಾದಂತೆ ತಿಳಿದು ಅಧ್ಯಾತ್ಮೋಪಾಸನೆಯನ್ನು ಆಚರಿಸಬೇಕು. ಆದಿತ್ಯಮಂಡಲದಲ್ಲಿ ಗಾಯತ್ರೀ ದೇವಿಯನ್ನು ಪ್ರತಿಷ್ಠಿತವೆಂದು ತಿಳಿದು ಅಧಿದೈವೋಪಾಸನೆಯನ್ನು ಮಾಡಬೇಕು. "ಗಾಯತ್ರೀ" ಎಂಬ ಪದದಲ್ಲಿರುವ ಗಾಯ ಎಂಬುದು ಪ್ರಾಣಬೋಧಕವಾದ ಅಂಶ, ಅಂತಹ ಪ್ರಾಣವನ್ನು ತ್ರಾಣ (ರಕ್ಷಣ) ಮಾಡುವುದರಿಂದ ಗಾಯತ್ರೀ ಎಂದು ಹೆಸರು ಬಂದಿರುವುದು. ||೨||

ಕೆಲವರು ಗಾಯತ್ರಿಗಿಂತಲೂ ಅನುಷ್ಟುಪ್ ಛಂದೋಬದ್ಧವಾದ ವಾಕ್ಯಗಳು ವ್ಯವಹಾರದಲ್ಲಿ ಹೆಚ್ಚಾಗಿರುವುದರಿಂದ ಅದನ್ನೇ ಉಪಾಸಿಸಬೇಕೆಂದು ಅಭಿಪ್ರಾಯಪಡುತ್ತಾರೆ. ಆದರೆ ಅದು ಸರಿಯಲ್ಲ. ಗಾಯತ್ರಿಯನ್ನೇ ಅನುವಚನ ಎಂದರೆ ಜಪಪಾರಾಯಣಾದಿ ವಿಧಾನದಿಂದ ಸೇವಿಸಬೇಕು. ಅನೇಕ ವಸ್ತುಗಳನ್ನು ಹೊಂದಬೇಕೆಂದು ಬಯಸುವುದಾದರೆ ಪೂರ್ಣವಾದ ಮೂರುಲೋಕಗಳನ್ನು ಪ್ರಥಮಪಾದದ ಉಪಾಸನೆಯಿಂದಲೂ ತ್ರಯೀ ವಿದ್ಯಾತ್ಮಕವಾದ ವಾಙ್ಮಯ ಪ್ರಪಂಚವನ್ನು ದ್ವಿತೀಯಪಾದದ ಉಪಾಸನೆಯಿಂದಲೂ ಪ್ರಾಣಧಾರಣಮಾತ್ರದಿಂದ ಕೂಡಿದ ಪ್ರತಿಯೊಂದು ಆಪ್ತವ್ಯವಸ್ತುವನ್ನು ಮೂರನೆಯ ಪಾದದ ಉಪಾಸನೆಯಿಂದಲೂ ಹೊಂದುವನು. ಮತ್ತು ಒಂದು ಪಾದ, ಎರಡುಪಾದ, ಮೂರುಪಾದ, ನಾಲ್ಕು ಪಾದಗಳಿಂದ ಕೂಡಿದ್ದರೂ, ಪಾದಗಳು ಕಲ್ಪಿತವಾದ್ದರಿಂದ ಅಪದಾ ಪದಶೂನ್ಯವು ಎಂದಾಗಲಿ, ಸಾಮಾನ್ಯಜನರಿಗೆ ಜ್ಞೇಯಳಲ್ಲದವಳೆಂದಾಗಲಿ ವಿಶೇಷಧರ್ಮವನ್ನು ತಿಳಿಯಬೇಕು. ಹಿಂದೆ ತೋರಿಸಲ್ಪಟ್ಟ ನಾಲ್ಕನೆಯ ಪಾದದಲ್ಲಿರುವಂತೆ "ಸಾವದೋಂ" ಎಂದು ಅಧ್ಯಯನಮಾಡಿದರೆ ಅವನ ಕಾಮವು ಸಿದ್ಧವಾಗುವುದಿಲ್ಲ. ತತ್ ಮತ್ತು ಅದಸ್ ಇವೆರಡೂ ವ್ಯವಹಿತವಸ್ತುಗಳನ್ನು ಬೋಧಿಸುವುವು. ಅವುಗಳಿಂದ ಅಹಂಭಾವೋಪಾಸನೆಗೆ ಅವಕಾಶವಿಲ್ಲ. "ಅಹಮದಃ" ಎಂದು ಸೇರಿಸಿ ಅಧ್ಯಯನಮಾಡಿದರೆ ಆ ಉಪಾಸ್ಯರೂಪವನ್ನು ನಾನು ಹೊಂದಿರುವೆನೆಂಬ ಅರ್ಥವನ್ನು ಬೋಧಿಸುವುದರಿಂದ ವಾಂಛಿತವಾದ ಫಲವು ಈ ಉಪಾಸನೆಯಿಂದ ಲಭಿಸುವುದು. ವಿದೇಹರಾಜನಾದ ಜನಕನು ಅಶ್ವತರಾಶವಿಪುತ್ರನಾದ ವುಡಿಲ ಎಂಬ ಶಿಷ್ಯನಿಗೆ ಈ ಉಪಾಸನೆಯನ್ನು ಉಪದೇಶಿಸಿರುವನು. ಮತ್ತು ಹೊತೃಋತ್ವಿಜನೆ! ಗಾಯತ್ರಿಯನ್ನು ನೇಗಲು ಮೊದಲಾದ ಉಪಕರಣದಿಂದ ಸಕಲ ಫಲಪ್ರಾಪ್ತಿಯನ್ನು ಅಪೇಕ್ಷಿಸುವ ಕೃಷೀವಲನಂತೆ ಹೇಗೆ ಉಪಾಸನೆಮಾಡುವೆ ಎಂದು ಜನಕನು ಪ್ರಶ್ನಿಸಲಾಗಿ ವುಡಿಲನು ಈ

ವಿದ್ಯದ್ಯಪಹ್ನವೀತ ಪಾಪಂ ಕರೋತಿ ಸರ್ವಮೋಽನ್ಯೈತತ್ಸನ್ಯ್ಮಗ್ನಿಶುದ್ಧೋಽ
ಯತೋಽಜರೋಽಮೃತಃ ಸ ಭವತೀತಿ ॥೩॥

ಇತಿ ಗಾಯತ್ರ್ಯುಪನಿಷತ್ ಸಮಾಪ್ತಾ.



ರೀತಿಯಾಗಿ ಉತ್ತರವಿತ್ತನು. ಈ ಗಾಯತ್ರಿಯ ಮುಖವನ್ನು ಸಂಭ್ರಮಾದರಗಳಿಂದ ಉಪಾಸನೆ ಮಾಡುವೆನು. ಗಾಯತ್ರಿಗೆ ಅಗ್ನಿಯೇ ಮುಖವು. ಆ ಅಗ್ನಿಮುಖದಲ್ಲಿ ಯಾವ ಹವಿಸ್ಸನ್ನು ಋತ್ವಿಜರು ಹಾಕಿದರೂ ಭಸ್ಮೀಭೂತವಾಗಿ ಹೋಗುವಂತೆ ಈ ಉಪಾಸಕನು ಎಂತಹ ದೊಡ್ಡ ಪಾಪಗಳನ್ನಾಚರಿಸಿದ್ದರೂ ಎಲ್ಲವೂ ಭಸ್ಮವಾಗುವುದು. ಹಾಗೆ ಸಕಲ ಪಾಪಗಳೂ ಈ ಉಪಾಸನೆಯಿಂದ ಭಸ್ಮವಾಗುವುದರಿಂದ ಪಾಪ ನಿರ್ಮುಕ್ತನಾದ ಉಪಾಸಕನು ಜರಾಮರಣ ವರ್ಜಿತವಾದ ಮೋಕ್ಷ ಪುರುಷಾರ್ಥವನ್ನು ಹೊಂದುವಹಾಗೆ ಸಂಸ್ಕೃತನೂ ಶುದ್ಧನೂ ಆಗುವನು. ಮೋಕ್ಷ ಪುರುಷಾರ್ಥರೂಪ ನಾದ ಪರಮಾತ್ಮನಾಗುವನು ಎಂದು ಅಭಿಪ್ರಾಯವು. ಈ ರೀತಿಯಾಗಿ ಗಾಯತ್ರೀ ದೇವಿಯ ವಿಷಯದಲ್ಲಿ ಅಧ್ಯಾತ್ಮ ಅಧಿದೈವೋಪಾಸನೆಗಳು ಇಲ್ಲಿ ವಿಹಿತಗಳಾಗಿವೆ.||೩||

ಗಾಯತ್ರ್ಯುಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.



॥ ಶ್ರೀರಸ್ತು ॥

# ॥ ಗಾಯತ್ರೀರಹಸ್ಯೋಪನಿಷತ್ ॥

---

ಓಂ ಸ್ವಸ್ತಿ ಸಿದ್ಧಂ । ಓಂ ನಮೋ ಬ್ರಹ್ಮಣೇ । ಓಂ ನಮಸ್ಕೃತ್ಯ ಯಾಜ್ಞವಲ್ಕ್ಯಃ ಋಷಿಃ ಸ್ವಯಂಭುವಂ ಪರಿಪೃಚ್ಛತಿ । ಹೇ ಬ್ರಹ್ಮನ್ ಗಾಯತ್ರ್ಯಾ ಉತ್ಪತ್ತಿಂ ಶ್ರೋತುಮಿಚ್ಛಾಮಿ । ಅಥಾತೋ ವಸಿಷ್ಠಃ ಸ್ವಯಂಭುವಂ ಪರಿಪೃಚ್ಛತಿ । ಯೋ ಬ್ರಹ್ಮಾ ಸ ಬ್ರಹ್ಮೋವಾಚ । ಬ್ರಹ್ಮ ಜ್ಞಾನೋತ್ಪತ್ತೇಃ ಪ್ರಕೃತಿಂ ವ್ಯಾಖ್ಯಾಸ್ಯಾಮಃ । ಕೋ ನಾಮ ಸ್ವಯಂಭೂಃ ಪುರುಷ ಇತಿ । ತೇನಾಂಗುಲೀಮಥ್ಯಮಾನಾತ್ ಸಲಿಲಮಭವತ್ । ಸಲಿಲಾತ್ಫೇನಮಭವತ್ । ಫೇನಾದ್ಬುದ್ಬುದಮಭವತ್ । ಬುದ್ಬುದಾದಂಡಮಭವತ್ । ಅಂಡಾದ್ಬ್ರಹ್ಮಾಭವತ್ । ಬ್ರಹ್ಮಣೋ ವಾಯುರಭವತ್ । ವಾಯೋರಗ್ನಿರಭವತ್ । ಅಗ್ನೇರೋಂಕಾರೋಽಭವತ್ । ಓಂಕಾರಾದ್ವ್ಯಾಹೃತಿರಭವತ್ । ವ್ಯಾಹೃತ್ಯಾ ಗಾಯತ್ರ್ಯಭವತ್ । ಗಾಯತ್ರ್ಯಾಃ ಸಾವಿತ್ರ್ಯಭವತ್ । ಸಾವಿತ್ರ್ಯಾಃ ಸರಸ್ವತ್ಯಭವತ್ । ಸರಸ್ವತ್ಯಾಃ ಸರ್ವೇ ವೇದಾ ಅಭವನ್ । ಸರ್ವೇಭ್ಯೋ ವೇದೇಭ್ಯಃ ಸರ್ವೇ ಲೋಕಾ ಅಭವನ್ । ಸರ್ವೇಭ್ಯೋ ಲೋಕೇಭ್ಯಃ ಸರ್ವೇ ಪ್ರಾಣಿನೋಽಭವನ್ ॥೧॥

ಅಥಾತೋ ಗಾಯತ್ರೀ ವ್ಯಾಹೃತಯಶ್ಚ ಪ್ರವರ್ತಂತೇ । ಕಾ ಚ ಗಾಯತ್ರೀ । ಕಾಶ್ಚ ವ್ಯಾಹೃತಯಃ । ಕಿಂ ಭೂಃ ಕಿಂ ಭುವಃ ಕಿಂ ಸುವಃ ಕಿಂ ಮಹಃ ಕಿಂ ಜನಃ ಕಿಂ ತಪಃ ಕಿಂ ಸತ್ಯಂ ಕಿಂ ತತ್ ಕಿಂ ಸವಿತುಃ ಕಿಂ ವರೇಣ್ಯಂ ಕಿಂ ಭರ್ಗಃ ಕಿಂ ದೇವಸ್ಯ ಕಿಂ ಧೀಮಹಿ ಕಿಂ ಧಿಯಃ ಕಿಂ ಯಃ ಕಿಂ ನಃ ಕಿಂ ಪ್ರಚೋದಯಾತ್ ॥೨॥

॥ ಶ್ರೀಃ ॥

# ಗಾಯತ್ರೀರಹಸ್ಯೋಪನಿಷತ್ತಿನ ಕನ್ನಡ ಅನುವಾದವು.

---

ತ್ರೈವರ್ಣಿಕರೆಲ್ಲರೂ ತಪ್ಪದೇ ಜಪಿಸುವ ಮಹಾಮಂತ್ರವಾದ ಗಾಯತ್ರಿಯ ರಹಸ್ಯಾರ್ಥಗಳನ್ನು ಪ್ರತಿಪಾದಿಸುವುದರಿಂದ ಇದಕ್ಕೆ ಗಾಯತ್ರೀರಹಸ್ಯೋಪನಿಷತ್ ಎಂಬ ಸಂಜ್ಞೆಯು ಬಂದಿರುವುದು. ಓಂ, ಸ್ವಸ್ತಿ ಸಿದ್ಧಂ ಎಂಬ ಪದಗಳು ಕ್ರಮವಾಗಿ ತನಗೆ ವಾಚ್ಯವಾದ ಪರಬ್ರಹ್ಮ–ಮಂಗಲ–ಸಿದ್ಧಿಯುಳ್ಳದ್ದು ಎಂಬ ಅರ್ಥಗಳನ್ನು ಬೋಧಿಸುವುವಾದ್ದರಿಂದ ಸಿದ್ಧಿಯುಕ್ತ ಮಂಗಲಾತ್ಮಕ ಪರಬ್ರಹ್ಮದ ಅನುಸಂಧಾನವು ಆರಂಭದಲ್ಲಿ ಲಭಿಸುವುದು. ಮತ್ತು ಗಾಯತ್ರಿಯ ಉತ್ಪತ್ತಿಗೆ ಹೇತುವಾದ ಬ್ರಹ್ಮನಿಗೆ ನಮಸ್ಕಾರವು ಸೂಚಿಸಲ್ಪಟ್ಟಿದೆ. ಯಾಜ್ಞವಲ್ಕ್ಯ ಮುನಿಯು ಸ್ವಯಂಭು ಬ್ರಹ್ಮನನ್ನು ನಮಸ್ಕರಿಸಿ ಪ್ರಶ್ನಿಸುವನು, ಬ್ರಹ್ಮದೇವನೆ! ಗಾಯತ್ರಿಯ ಉತ್ಪತ್ತಿಯನ್ನು ಕೇಳಲು ಅಪೇಕ್ಷೆಯುಳ್ಳವನಾಗಿದ್ದೇನೆ. ಎಂದು ಯಾಜ್ಞವಲ್ಕ್ಯ ಮುನಿಯು ಪ್ರಶ್ನಿಸಿದಾಗ ಹಿಂದೆ ವಸಿಷ್ಠ ಮುನಿಯು ಇದೇ ಪ್ರಶ್ನೆಯನ್ನು ಮಾಡುವಾಗ ಉಪದೇಶ ಮಾಡಿರುವ ಬ್ರಹ್ಮದೇವನೇ ಈಗಲೂ ಉತ್ತರರೂಪವಾಗಿ ಉಪದೇಶಿಸುವನು. ಮೊದಲು ಬ್ರಹ್ಮಜ್ಞಾನದ ಉತ್ಪತ್ತಿಗೆ ಕಾರಣವಾದ ಮೂಲಪ್ರಕೃತಿ ಮತ್ತು ಅದರಿಂದ ವಿಕಾರಗಳು ಹುಟ್ಟುವ ಕ್ರಮವನ್ನು ವ್ಯಾಖ್ಯಾನಮಾಡುತ್ತೇವೆ. ಸ್ವಯಂಭೂ ಎಂಬ ಸಂಜ್ಞೆಯುಳ್ಳ ಪುರುಷ ಅಥವಾ ಪೂರ್ಣರೂಪವಾದ ಬ್ರಹ್ಮವು ಕಃ ಎಂಬ ಸಂಜ್ಞೆಯಿಂದ ಪ್ರಸಿದ್ಧವಾಗಿರುವುದು. ಇದು ಜಗತ್ಕಾರಣವಾದ ಚಿದ್ರೂಪವಸ್ತು. ಅವನು ಬೆರಳುಗಳನ್ನು ಕಡೆದಿರುವುದರಿಂದ ಮೊದಲು ನೀರು ಉತ್ಪತ್ತಿಯಾಯಿತು. ಆಮೇಲೆ ಪೂರ್ವಪೂರ್ವವಸ್ತುಗಳಿಂದ ಕ್ರಮವಾಗಿ ಉತ್ತರೋತ್ತರ ವಸ್ತುಗಳು ಜನಿಸುತ್ತ ನೊರೆ, ಅದಕ್ಕೂ ಗಟ್ಟಿಯಾಗುವ ಗರ್ಭಾವಸ್ಥೆಯ ಬುದ್ಬುದ, ಮೊಟ್ಟೆ, ಚತುರ್ಮುಖಬ್ರಹ್ಮಾ, ವಾಯು, ಅಗ್ನಿ, ಓಂಕಾರ, ವ್ಯಾಹೃತಿ, ಗಾಯತ್ರೀ, ಸಾವಿತ್ರೀ, ಸರಸ್ವತೀ, ವೇದ, ಲೋಕ, ಪ್ರಾಣಿವರ್ಗ ಈ ವಿಧವಾದ ಸಮಸ್ತ ವಸ್ತುಗಳೂ ಜನಿಸಿದವು. ॥೧॥

ಗಾಯತ್ರೀ-ವ್ಯಾಹೃತಿಗಳಿಗೆ ಇರುವ ರಹಸ್ಯಾರ್ಥವನ್ನು ಪ್ರಕಟಪಡಿಸಲು ಅದರಲ್ಲಿರುವ ಪ್ರತಿಯೊಂದು ಪದಗಳನ್ನು ಪೃಥಕ್ಕರಿಸಿ ಅದರದರ ರಹಸ್ಯಾರ್ಥವೇನು ? ಎಂಬ ಪ್ರಶ್ನೆಯು ಉಪಕ್ರಮಿಸಲ್ಪಟ್ಟಿದೆ. ಗಾಯತ್ರೀ-ವ್ಯಾಹೃತಿಯೆಂದರೇನು ? ಭೂಃ ಭುವಃ ಸುವಃ ಮಹಃ ಜನಃ ತಪಃ ಸತ್ಯಂ ತತ್ ಸವಿತುಃ ವರೇಣ್ಯಂ ಭರ್ಗಃ ದೇವಸ್ಯ ಧೀಮಹಿ ಧಿಯಃ ಯಃ ನಃ ಪ್ರಚೋದಯಾತ್ ಎಂಬ ಪದಗಳು ವ್ಯಾಹೃತಿ ಗಾಯತ್ರೀ ಮಂತ್ರರೂಪದಿಂದಿವೆಯಷ್ಟೆ. ಇದಕ್ಕೆಲ್ಲ ರಹಸ್ಯಾರ್ಥವೇನು ? ॥೨॥

ಓಂ ಭೂರಿತಿ ಭುವೋ ಲೋಕಃ । ಭುವ ಇತ್ಯಂತರಿಕ್ಷಲೋಕಃ । ಸ್ವರಿತಿ ಸ್ವರ್ಗಲೋಕಃ । ಮಹಇತಿ ಮಹರ್ಲೋಕಃ । ಜನಇತಿ ಜನೋ ಲೋಕಃ । ತಪಇತಿ ತಪೋಲೋಕಃ । ಸತ್ಯಮಿತಿ ಸತ್ಯಲೋಕಃ । ತದಿತಿ ತದಸೌ ತೇಜೋಮಯಂ ತೇಜೋಗ್ನಿರ್ದೇವತಾ । ಸವಿತುರಿತಿ ಸವಿತಾ ಸಾವಿತ್ರಮಾದಿತ್ಯೋ ವೈ । ವರೇಣ್ಯಮಿತ್ಯತ್ರ ಪ್ರಜಾಪತಿಃ । ಭರ್ಗ ಇತ್ಯಾಪೋವೈ ಭರ್ಗಃ । ದೇವಸ್ಯ ಇತೀಂದ್ರೋ ದೇವೋ ದ್ಯೋತತ ಇತಿ ಸ ಇಂದ್ರಸ್ತಸ್ಮಾತ್ ಸರ್ವಪುರುಷೋ ನಾಮ ರುದ್ರಃ । ಧೀಮಹೀತ್ಯಂತರಾತ್ಮಾ । ಧಿಯ ಇತ್ಯಂತರಾತ್ಮಾ ಪರಃ । ಯ ಇತಿ ಸದಾಶಿವಪುರುಷಃ । ನೋ ಇತ್ಯಸ್ಮಾಕಂ ಸ್ವಧರ್ಮೇ । ಪ್ರಚೋದಯಾದಿತಿ ಪ್ರಚೋದಿತಕಾಮ ಇಮಾನ್ ಲೋಕಾನ್ ಪ್ರತ್ಯಾಶ್ರಯತೇ ಯಃ ಪರೋ ಧರ್ಮ ಇತ್ಯೇಷಾ ಗಾಯತ್ರೀ ॥೩॥

ಸಾ ಚ ಕಿಂಗೋತ್ರಾ ಕತ್ಯಕ್ಷರಾ ಕತಿಪದಾ । ಕತಿಕುಕ್ಷಯಃ । ಕಾನಿ ಶೀರ್ಷಾಣಿ ॥೪॥

ಸಾಂಖ್ಯಾಯನಸಗೋತ್ರಾ ಸಾ ಚತುರ್ವಿಂಶತ್ಯಕ್ಷರಾ ಗಾಯತ್ರೀ ತ್ರಿಪಾದಾ ಚತುಷ್ಪಾದಾ । ಪುನಸ್ತಸ್ಯಾಶ್ಚತ್ವಾರಃ ಪಾದಾಃ ಷಟ್ಕುಕ್ಷಿಕಾಃ ಪಂಚಶೀರ್ಷಾಣಿ ಭವಂತಿ ॥೫॥

ಕೇಚಪಾದಾಃ ಕಾಶ್ಚ ಕುಕ್ಷಯಃ ಕಾನಿ ಶೀರ್ಷಾಣಿ ॥೬॥

ಋಗ್ವೇದೋಽಸ್ಯಾಃ ಪ್ರಥಮಃ ಪಾದೋ ಭವತಿ । ಯಜುರ್ವೇದೋ ದ್ವಿತೀಯಃ ಪಾದಃ । ಸಾಮವೇದಸ್ತೃತೀಯಃ ಪಾದಃ । ಅಥರ್ವವೇದಶ್ಚತುರ್ಥಃ ಪಾದಃ । ಪೂರ್ವಾದಿಕ್ ಪ್ರಥಮಾ ಕುಕ್ಷಿರ್ಭವತಿ । ದಕ್ಷಿಣಾ ದ್ವಿತೀಯಾ ಕುಕ್ಷಿರ್ಭವತಿ । ಪಶ್ಚಿಮಾ ತೃತೀಯಾ ಕುಕ್ಷಿರ್ಭವತಿ । ಉತ್ತರಾ ಚತುರ್ಥೀ ಕುಕ್ಷಿರ್ಭವತಿ । ಊರ್ಧ್ವಂ ಪಂಚಮಾ ಕುಕ್ಷಿರ್ಭವತಿ । ಅಧಃ ಷಷ್ಠೀ ಕುಕ್ಷಿರ್ಭವತಿ । ವ್ಯಾಕರಣೋಽಸ್ಯಾಃ ಪ್ರಥಮಃ ಶೀರ್ಷೋ ಭವತಿ ।

ಹಿಂದಿನ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರವನ್ನು ಮುಂದಿನ ವಾಕ್ಯಗಳು ಸ್ಪಷ್ಟ ಪಡಿಸುತ್ತಿವೆ. ಭೂಃ ಭುವಃ ಸ್ವಃ ಮಹಃ ಜನಃ ತಪಃ ಸತ್ಯಂ ಎಂಬ ಏಳು ವ್ಯಾಹೃತಿಗಳು -ಆಯಾಯ ಸಂಕೇತದಿಂದಲೇ ಪ್ರಸಿದ್ಧವಾದ ಸಪ್ತಲೋಕಗಳನ್ನು ಬೋಧಿಸುವುವು. ಗಾಯತ್ರಿಯ ಪೂರ್ವಾರ್ಧದಲ್ಲಿರುವ ಪದಗಳಿಗೆ ತತ್=ತೇಜೋ ಮಯವಾದ ಪರೋಕ್ಷವಾದ ಅಗ್ನಿದೇವತೆಯು, ಸವಿತುಃ=ಅಂತರಿಕ್ಷದಲ್ಲಿರುವ ಆದಿತ್ಯನೆಂಬ ಸವಿತೃ ಪ್ರಕಾಶರೂಪವಾದ ತೇಜಸ್ಸು, ವರೇಣ್ಯಂ=ಪ್ರಜಾಪತಿದೇವತೆಯು, ಭರ್ಗಃ=ಜನಾಭಿಮಾನಿದೇವತೆ, ದೇವಸ್ಯ=ದ್ಯೋತನಶೀಲದಿಂದ ಕೂಡಿದ ಸರ್ವ ಪುರುಷಸಮಷ್ಟಿರೂಪನಾದ ರುದ್ರ, ಧೀಮಹಿ=ಅಂತರಾತ್ಮಾ ಎಂದು ಕ್ರಮವಾಗಿ ಅರ್ಥವನ್ನು ತಿಳಿಯಬೇಕು. ಹಾಗೂ ಉತ್ತರಾರ್ಧದಲ್ಲಿರುವ ಪದಗಳಿಗೆ ಧಿಯಃ= ಅಂತರಾತ್ಮಾ, ಯಃ=ಸದಾಶಿವಪುರುಷ, ನಃ=ಸ್ವಧರ್ಮದಲ್ಲಿರಬೇಕೆಂಬ ನಮ್ಮನ್ನು, ಪ್ರಚೋದಯಾತ್=ಅಭಿರುಚಿ ಹುಟ್ಟಿಸಿ ಪ್ರೇರೇಪಿಸಲು ಈ ಚೇತನವರ್ಗವನ್ನು ಆಶ್ರಯಿಸಿರುವನು. ಎಲ್ಲರಿಗೂ ಅವರವರ ಸ್ವಧರ್ಮವು ಶ್ರೇಷ್ಠವಾದುದು. ಎಂದು ಅರ್ಥ. ಪ್ರತಿಯೊಂದು ಪದಗಳಿಗೆ ಪ್ರತ್ಯೇಕ ಅರ್ಥವನ್ನು ಹೇಳಿದ್ದರಿಂದ ಸಮಷ್ಟಿ ಯಾಗಿ ಸೇರಿ ಅಗ್ನಿ–ಸೂರ್ಯ–ಪ್ರಜಾಪತಿ–ರುದ್ರ–ಜಲಪುರುಷ ಮುಂತಾದ ಸರ್ವ ಪುರುಷ ರೂಪನಾದ ಪರಮಾತ್ಮನು ನಮ್ಮನ್ನು ನಮ್ಮ ಧರ್ಮವೆಂಬ ಕರ್ತವ್ಯದಲ್ಲಿ ಪ್ರೇರಿಸಲಿ ಎಂದು ಅರ್ಥವಾಗುವುದು. ||೩||

ಆ ಗಾಯತ್ರಿಯ ಗೋತ್ರವಾವುದು ? ಅಕ್ಷರಗಳು, ಪದಗಳು, ಕುಕ್ಷಿಗಳು ಎಷ್ಟು ? ಶಿರಸ್ಸುಗಳು ಯಾವುವು ? ಎಂದು ಮುಂದಿನ ವಿಷಯಗಳ ಪ್ರಶ್ನವು. ||೪||

ಸಾಂಖ್ಯಾಯನವೆಂಬುದು ಗಾಯತ್ರಿಯ ಗೋತ್ರವು. ಇಪ್ಪತ್ತನಾಲ್ಕು ಅಕ್ಷರ ಗಳೂ, ಮೂರು ಮತ್ತು ನಾಲ್ಕು ಪಾದಗಳೂ, ಆರು ಕುಕ್ಷಿಗಳೂ, ಐದು ಶಿರಸ್ಸುಗಳೂ ಇವೆಯೆಂದು ತಿಳಿಯಬೇಕು. ಋಕ್ಕಿನಲ್ಲಿ ಇರುವ ಪಾದಗಳು ಮೂರು ಮತ್ತು ಕಲ್ಪಿತ ವಾದ ಪಾದಗಳು ನಾಲ್ಕು ಹೀಗೆ ಎರಡು ಬಗೆಯಾಗಿವೆ. ||೫||

ಆ ಪಾದಗಳು, ಕುಕ್ಷಿಗಳು ಮತ್ತು ಶೀರ್ಷಗಳು ಯಾವುವು ? ||೬||

ಋಗ್ವೇದವು ಈ ಗಾಯತ್ರಿಯ ಪ್ರಥಮಪಾದವು. ಯಜುರ್ವೇದವು ದ್ವಿತೀಯ ಪಾದ. ಸಾಮವೇದವು ತೃತೀಯಪಾದವು. ಅಥರ್ವವೇದವು ಚತುರ್ಥಪಾದವು. ಈರೀತಿ ನಾಲ್ಕುಪಾದಗಳು. ಪೂರ್ವದಿಕ್ಕು ಪ್ರಥಮ ಕುಕ್ಷಿಯಾಗಿಯೂ ದಕ್ಷಿಣದಿಕ್ಕು ದ್ವಿತೀಯಕುಕ್ಷಿಯಾಗಿಯೂ ಪಶ್ಚಿಮದಿಕ್ಕು ತೃತೀಯ ಕುಕ್ಷಿಯಾಗಿಯೂ ಉತ್ತರದಿಕ್ಕು ಚತುರ್ಥಕುಕ್ಷಿಯಾಗಿಯೂ ಊರ್ಧ್ವದಿಕ್ಕು ಪಂಚಮಕುಕ್ಷಿಯಾಗಿಯೂ ಅಧೋದಿಕ್ಕು ಷಷ್ಠಕುಕ್ಷಿಯಾಗಿಯೂ ಇರುವುವು. ಹೀಗೆ ಆರು ದಿಕ್ಕುಗಳೇ ಆರು ಕುಕ್ಷಿಗಳು.

ಶಿಕ್ಷಾ ದ್ವಿತೀಯಃ । ಕಲ್ಪಸ್ತೃತೀಯಃ । ನಿರುಕ್ತಶ್ಚತುರ್ಥಃ । ಜ್ಯೋತಿಷಾಮಯನಮಿತಿಪಂಚಮಃ ॥೭॥

ಕಾ ದಿಕ್ ಕೋ ವರ್ಣಃ ಕಿಮಾಯತನಂ ಕಃ ಸ್ವರಃ ಕಿಂ ಲಕ್ಷಣಂ ಕಾನ್ಯಕ್ಷರ ದೈವತಾನಿ ಕ ಋಷಯಃ ಕಾನಿ ಛಂದಾಂಸಿ ಕಾ ಶಕ್ತಯಃ ಕಾನಿ ತತ್ತ್ವಾನಿ ಕೇ ಚಾವಯವಾಃ ॥೮॥

ಪೂರ್ವಾಯಾಂ ಭವತು ಗಾಯತ್ರೀ । ಮಧ್ಯಮಾಯಾಂ ಭವತು ಸಾವಿತ್ರೀ । ಪಶ್ಚಿಮಾಯಾಂ ಭವತು ಸರಸ್ವತೀ । ರಕ್ತಾ ಗಾಯತ್ರೀ । ಶ್ವೇತಾ ಸಾವಿತ್ರೀ । ಕೃಷ್ಣಾ ಸರಸ್ವತೀ । ಪೃಥಿವ್ಯಂತರಿಕ್ಷಂ ದ್ಯೌರಾಯತನಾನಿ । ಅಕಾರೋಕಾರಮಕಾರರೂಪೋದಾತ್ತಾದಿಸ್ವರಾತ್ಮಿಕಾ । ಪೂರ್ವಾ ಸಂಧ್ಯಾ ಹಂಸವಾಹಿನೀ ಬ್ರಾಹ್ಮೀ । ಮಧ್ಯಮಾ ವೃಷಭವಾಹಿನೀ ಮಾಹೇಶ್ವರೀ । ಪಶ್ಚಿಮಾ ಗರುಡವಾಹಿನೀ ವೈಷ್ಣವೀ । ಪೂರ್ವಾಹ್ಣಕಾಲಿಕಾ ಸಂಧ್ಯಾ ಗಾಯತ್ರೀ ಕುಮಾರೀ ರಕ್ತಾ ರಕ್ತಾಂಗೀ ರಕ್ತವಾಸಿನೀ ರಕ್ತಗಂಧಮಾಲ್ಯಾನುಲೇಪನೀ ಪಾಶಾಂಕುಶಾಕ್ಷಮಾಲಾ ಕಮಂಡಲುವರಹಸ್ತಾ ಹಂಸಾರೂಢಾ ಬ್ರಹ್ಮದೈವತ್ಯಾ ಋಗ್ವೇದಸಹಿತಾ ಆದಿತ್ಯಪಥಗಾಮಿನೀ ಭೂಮಂಡಲವಾಸಿನೀ । ಮಧ್ಯಾಹ್ನಕಾಲಿಕಾ ಸಂಧ್ಯಾ ಸಾವಿತ್ರೀ ಯುವತೀ ಶ್ವೇತಾಂಗೀ ಶ್ವೇತವಾಸಿನೀ ಶ್ವೇತಗಂಧಮಾಲ್ಯಾನುಲೇಪನೀ ತ್ರಿಶೂಲಡಮರುಹಸ್ತಾ ವೃಷಭಾರೂಢಾ ರುದ್ರದೈವತ್ಯಾ ಯಜುರ್ವೇದಸಹಿತಾ ಆದಿತ್ಯಪಥಗಾಮಿನೀ ಭುವೋ ಲೋಕೇ ವ್ಯವಸ್ಥಿತಾ । ಸಾಯಂ ಸಂಧ್ಯಾ ಸರಸ್ವತೀ ವೃದ್ಧಾ ಕೃಷ್ಣಾಂಗೀ ಕೃಷ್ಣವಾಸಿನೀ ಕೃಷ್ಣಗಂಧಮಾಲ್ಯಾನುಲೇಪನಾ ಶಂಖಚಕ್ರಗದಾಭಯಹಸ್ತಾ ಗರುಡಾರೂಢಾ ವಿಷ್ಣುದೈವತ್ಯಾ ಸಾಮವೇದಸಹಿತಾ ಆದಿತ್ಯಪಥಗಾಮಿನೀ ಸ್ವರ್ಗಲೋಕವ್ಯವಸ್ಥಿತಾ ॥೯॥

ಹಾಗೆಯೇ ವ್ಯಾಕರಣಾದಿ ಅಂಗಗಳು ಶೀರ್ಷಗಳಾಗಿವೆ. ವ್ಯಾಕರಣವು ಒಂದು ಶೀರ್ಷವು. ಶಿಕ್ಷಾ ಎಂಬ ಅಂಗವು ದ್ವಿತೀಯ ಶೀರ್ಷವು. ಕಲ್ಪವೆಂಬ ಅಂಗವು ತೃತೀಯ ಶೀರ್ಷವು. ನಿರುಕ್ತವೆಂಬ ವೇದಾಂಗವು ಚತುರ್ಥ ಶೀರ್ಷವು. ಜ್ಯೋತಿಷವು ಪಂಚಮಶೀರ್ಷವು. ಹೀಗೆ ವೇದಾಂಗಗಳೇ ಗಾಯತ್ರಿಯ ಪಂಚಶೀರ್ಷಗಳು. ||೭||

ಮತ್ತೆ ಕೆಲವು ಪ್ರಶ್ನೆಗಳು ಎತ್ತಲ್ಪಟ್ಟಿವೆ. ಗಾಯತ್ರೀ ಮುಂತಾದ ದೇವತೆಗಳಿಗೆ ದಿಕ್ಕು, ವರ್ಣ, ವಾಸದೇಶ, ಸ್ವರ, ಲಕ್ಷಣ, ಆಯಾಯ ಅಕ್ಷರಾಭಿಮಾನಿ ದೇವತೆಗಳು, ಋಷಿಗಳು, ಛಂದಸ್ಸುಗಳು, ಶಕ್ತಿಗಳು, ತತ್ತ್ವಗಳು, ಅವಯವಗಳು ಯಾವುವು? ||೮||

ಗಾಯತ್ರೀಮಂತ್ರಪ್ರತಿಪಾದ್ಯವಾದ ದೇವತೆಯು ತ್ರಿಸಂಧ್ಯೆಗಳಲ್ಲಿ ಉಪಾಸ್ಯವಾಗಿ ನಾನಾರೂಪ-ಸಂಜ್ಞಾದಿಗಳನ್ನು ಹೊಂದಿದೆ. ಅವುಗಳಲ್ಲಿ ಕ್ರಮವಾಗಿ ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬುವು ಮೂರು ಸಂಜ್ಞೆಗಳು. ಗಾಯತ್ರಿಯು ಪೂರ್ವದಿಕ್ಕಿನಲ್ಲಿಯೂ, ಸಾವಿತ್ರಿಯು ಮಧ್ಯಮದಿಕ್ಕಿನಲ್ಲಿಯೂ, ಸರಸ್ವತಿಯು ಪಶ್ಚಿಮದಿಕ್ಕಿನಲ್ಲಿಯೂ ಇರುವರು. ಗಾಯತ್ರಿಗೆ ರಕ್ತವರ್ಣ, ಸಾವಿತ್ರಿಗೆ ಶ್ವೇತವರ್ಣ, ಸರಸ್ವತಿಗೆ ಕೃಷ್ಣವರ್ಣ ಹೀಗೆ ವರ್ಣವಿಭಾಗವನ್ನು ಅರಿಯಬೇಕು. ಮೂರು ದೇವತೆಗಳಿಗೆ ಕ್ರಮವಾಗಿ ಪೃಥಿವೀ, ಅಂತರಿಕ್ಷ, ದ್ಯು ಎಂಬ ಲೋಕಗಳು ಆಯತನಗಳು. ಅಕಾರ, ಉಕಾರ, ಮಕಾರಗಳೆಂಬ ಮೂರು ಸ್ವರಾಕ್ಷರಗಳೂ; ಉದಾತ್ತ, ಅನುದಾತ್ತ, ಸ್ವರಿತವೆಂಬ ಮೂರು ಸ್ವರಗಳೂ ಕ್ರಮವಾಗಿ ಮೂರು ದೇವತೆಗಳಿಗೆ ಇರುವುವು. ಬ್ರಹ್ಮನ ಶಕ್ತಿರೂಪಳೂ, ಪೂರ್ವಸಂಧ್ಯಾಭಿಮಾನಿಯೂ, ಹಂಸವಾಹನವನ್ನು ಏರಿದವಳೂ ಆಗಿ ಗಾಯತ್ರಿಯು ಇರುವಳು. ಮಧ್ಯಾಹ್ನಸಂಧ್ಯಾಭಿಮಾನಿಯೂ, ವೃಷಭವಾಹನದಲ್ಲಿ ಆರೂಢಳೂ, ಮಹೇಶ್ವರನ ಶಕ್ತಿಸ್ವರೂಪಳೂ ಆಗಿ ಸಾವಿತ್ರೀದೇವತೆಯು ಇರುವಳು. ಸಾಯಂಸಂಧ್ಯಾಭಿಮಾನಿ, ಗರುಡವಾಹನಾರೂಢಳು ಮತ್ತು ವಿಷ್ಣು ಶಕ್ತಿಸ್ವರೂಪಳಾಗಿ ಸರಸ್ವತಿಯಿರುವಳು. ಪ್ರಾತಃಸಂಧ್ಯಾಭಿಮಾನಿಯಾದ ಗಾಯತ್ರಿಗೆ ಕೌಮಾರಾವಸ್ಥೆ, ರಕ್ತವರ್ಣ, ರಕ್ತವರ್ಣದ ನಿಖಿಲಾವಯವ, ರಕ್ತವಸ್ತ್ರ, ರಕ್ತವರ್ಣದ ಗಂಧ ಮಾಲ್ಯ ಅನುಲೇಪನಗಳು, ಪಾಶ–ಅಂಕುಶ–ಜಪಮಾಲಾ–ಕಮಂಡಲು–ವರದ ಚಿಹ್ನಗಳಿಂದ ಕೂಡಿದ ಕೈಗಳು, ಹಂಸವಾಹನ ಇವುಗಳು ಲಕ್ಷಣಗಳು. ಇವುಗಳಿಂದ ಕೂಡಿ ಬ್ರಹ್ಮದೇವತಾಸ್ವರೂಪ, ಋಗ್ವೇದಗಳಿಂದ ಕೂಡಿ ಆದಿತ್ಯಪಥದಲ್ಲಿ ಸಂಚರಿಸುತ್ತಾ, ಭೂಮಂಡಲದಲ್ಲಿ ವಾಸವಾಗಿರುವಳು. ಮಧ್ಯಾಹ್ನ ಸಂಧ್ಯಾದೇವತೆಯಾದ ಸಾವಿತ್ರಿಯು ಯುವತಿಯೂ, ಬಿಳಿಯ ಬಣ್ಣದ ಅವಯುವ, ವಸ್ತ್ರ, ಗಂಧಮಾಲ್ಯಾದಿಗಳನ್ನೂ; ತ್ರಿಶೂಲ, ಡಮರುಗಳನ್ನು ಧರಿಸಿದ ಹಸ್ತಗಳನ್ನೂ, ವೃಷಭವಾಹನವನ್ನೂ ಇಟ್ಟುಕೊಂಡವಳೂ, ರುದ್ರದೇವಾತ್ಮಕಳೂ ಯಜುರ್ವೇದ ಸಹಿತಳೂ ಆಗಿ ಆದಿತ್ಯಪಥದಲ್ಲಿ ಸಂಚರಿಸುತ್ತ ಭೂಲೋಕದಲ್ಲಿ ವಾಸಮಾಡುವಳು. ಸಾಯಂಸಂಧ್ಯಾದೇವಿಯಾದ

ಅಗ್ನಿವಾಯುಸೂರ್ಯರೂಪಾಹವನೀಯಗಾರ್ಹಪತ್ಯದಕ್ಷಿಣಾಗ್ನಿ ರೂಪಾ ಋಗ್ಯಜುಃಸಾಮರೂಪಾ ಭೂರ್ಭುವಸ್ಸ್ವರಿತಿವ್ಯಾಹೃತಿರೂಪಾ ಪ್ರಾತರ್ಮಧ್ಯಾಹ್ನತೃತೀಯಸವನಾತ್ಮಿಕಾ ಸತ್ತ್ವರಜಸ್ತಮೋಗುಣಾತ್ಮಿಕಾ ಜಾಗ್ರತ್ಸ್ವಪ್ನಸುಷುಪ್ತರೂಪಾ ವಸುರುದ್ರಾದಿತ್ಯರೂಪಾ ಗಾಯತ್ರೀ ತ್ರಿಷ್ಟುಬ್ಜಗತೀರೂಪಾ ಬ್ರಹ್ಮಶಂಕರವಿಷ್ಣುರೂಪಾ ಇಚ್ಛಾಜ್ಞಾನಕ್ರಿಯಾ ಶಕ್ತಿರೂಪಾ ಸ್ವರಾಡ್ವಿರಾಡ್ವಷಡ್ಬ್ರಹ್ಮರೂಪೇತಿ ॥೧೦॥

ಪ್ರಥಮಮಾಗ್ನೇಯಂ ದ್ವಿತೀಯಂ ಪ್ರಾಜಾಪತ್ಯಂ ತೃತೀಯಂ ಸೌಮ್ಯಂ ಚತುರ್ಥಮೀಶಾನಂ ಪಂಚಮಮಾದಿತ್ಯಂ ಷಷ್ಠಂ ಗಾರ್ಹಪತ್ಯಂ ಸಪ್ತಮಂ ಮೈತ್ರಮಷ್ಟಮಂ ಭಗದೈವತಂ ನವಮಮಾರ್ಯಮಣಂ ದಶಮಂ ಸಾವಿತ್ರ ಮೇಕಾದಶಂ ತ್ವಾಷ್ಟ್ರಂ ದ್ವಾದಶಂ ಪೌಷ್ಣಂ ತ್ರಯೋದಶ ಮೈಂದ್ರಾಗ್ನಂ ಚತುರ್ದಶಂ ವಾಯವ್ಯಂ ಪಂಚದಶಂ ವಾಮದೇವಂ ಷೋಡಶಂ ಮೈತ್ರಾವರುಣಂ ಸಪ್ತದಶಂ ಭ್ರಾತೃವ್ಯಮಷ್ಟಾದಶಂ ವೈಷ್ಣವ ಮೇಕೋನವಿಂಶಂ ವಾಮನಂ ವಿಂಶಂ ವೈಶ್ವದೇವಮೇಕವಿಂಶಂ ರೌದ್ರಂ ದ್ವಾವಿಂಶಂ ಕೌಬೇರಂ ತ್ರಯೋವಿಂಶಮಾಶ್ವಿನಂ ಚತುರ್ವಿಂಶಂ ಬ್ರಾಹ್ಮಮಿತಿ ಪ್ರತ್ಯಕ್ಷರದೈವತಾನಿ ॥೧೧॥

ಪ್ರಥಮಂ ವಾಸಿಷ್ಠಂ ದ್ವಿತೀಯಂ ಭಾರದ್ವಾಜಂ ತೃತೀಯಂ ಗಾರ್ಗ್ಯಂ ಚತುರ್ಥಮೌಪಮನ್ಯವಂ ಪಂಚಮಂ ಭಾರ್ಗವಂ ಷಷ್ಠಂ ಶಾಂಡಿಲ್ಯಂ ಸಪ್ತಮಂ ಲೌಹಿತಮಷ್ಟಮಂ ವೈಷ್ಣವಂ ನವಮಂ ಶಾತಾತಪಂ ದಶಮಂ ಸನತ್ಕುಮಾರಮೇಕಾದಶಂ ವೇದವ್ಯಾಸಂ ದ್ವಾದಶಂ ಶುಕಂ ತ್ರಯೋದಶಂ ಪಾರಾಶರ್ಯಂ ಚತುರ್ದಶಂ ಪೌಂಡ್ರಕಂ ಪಂಚದಶಂ ಕ್ರತುಂ ಷೋಡಶಂ ದಾಕ್ಷಂ ಸಪ್ತದಶಂ ಕಾಶ್ಯಪಮಷ್ಟಾದಶಮಾತ್ರೇಯ ಮೇಕೋನವಿಂಶ ಮಗಸ್ತ್ಯಂ ವಿಂಶಮೌದ್ದಾಲಕಮೇಕವಿಂಶಮಾಂಗಿರಸಂ ದ್ವಾವಿಂಶಂ ನಾಮಿ ಕೇತುಂ ತ್ರಯೋವಿಂಶಂ ಮೌದ್ಗಲ್ಯಂ ಚತುರ್ವಿಂಶಮಾಂಗಿರಸಂ ವೈಶ್ವಾಮಿತ್ರ ಮಿತಿ ಪ್ರತ್ಯಕ್ಷರಾಣಾಮೃಷಯೋ ಭವಂತಿ ॥೧೨॥

ಸರಸ್ವತಿಯು ವೃದ್ಧಳೂ, ಕಪ್ಪುಬಣ್ಣದ ಅಂಗ, ವಸ್ತ್ರ, ಗಂಧಮಾಲ್ಯಾದಿಗಳನ್ನು ಧರಿಸಿ ಶಂಖ, ಚಕ್ರ, ಗದಾ, ಅಭಯಗಳಿಂದ ಕೂಡಿದ ಚತುರ್ಭುಜಗಳಿಂದ ಕೂಡಿದವಳೂ, ಗರುಡವಾಹನಾರೂಢಳೂ, ವಿಷ್ಣುದೇವಾತ್ಮಕಳೂ, ಸಾಮವೇದಸಹಿತಳೂ ಆಗಿ ಆದಿತ್ಯಪಥದಲ್ಲಿ ಸಂಚರಿಸುತ್ತ ಸ್ವರ್ಗಲೋಕದಲ್ಲಿ ವಾಸಿಸುವಳು. ಇವೆಲ್ಲ ಬೇರೆಬೇರೆಯಾದ ಲಕ್ಷಣಗಳು. ||೯||

ಮತ್ತು ವರ್ಗತ್ರಯರೂಪವಾಗಿರುವ ಅಗ್ನಿ, ವಾಯು, ಸೂರ್ಯ–ದೇವತಾತ್ರಯ; ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ–ಅಗ್ನಿತ್ರಯ; ಋಕ್, ಯಜುಸ್ಸು, ಸಾಮ–ವೇದತ್ರಯ; ಭೂಃ, ಭುವಃ, ಸ್ವಃ–ವ್ಯಾಹೃತಿತ್ರಯ; ಪ್ರಾತಃಸವನ, ಮಧ್ಯಾಹ್ನಸವನ, ತೃತೀಯಸವನ–ಸವನತ್ರಯ; ಸತ್ತ್ವ, ರಜಸ್ಸು, ತಮಸ್ಸು–ಗುಣತ್ರಯ; ಜಾಗ್ರತ್, ಸ್ವಪ್ನ, ಸುಷುಪ್ತಿ–ಅವಸ್ಥಾತ್ರಯ; ವಸು, ರುದ್ರ, ಆದಿತ್ಯ–ಗಣತ್ರಯ; ಗಾಯತ್ರೀ, ತ್ರಿಷ್ಟುಪ್, ಜಗತೀ–ಛಂದಸ್ತ್ರಯ; ಬ್ರಹ್ಮ, ಶಂಕರ, ವಿಷ್ಣು–ಮೂರ್ತಿತ್ರಯ; ಇಚ್ಛಾ, ಜ್ಞಾನ, ಕ್ರಿಯಾ–ಶಕ್ತಿತ್ರಯ; ಸ್ವರಾಟ್‌ಬ್ರಹ್ಮ, ವಿರಾಟ್‌ಬ್ರಹ್ಮ, ವಷಟ್‌ಬ್ರಹ್ಮ–ಬ್ರಹ್ಮತ್ರಯ ಎಂಬ ಗುಂಪುಗಳಲ್ಲಿ ಗಾಯತ್ರೀ, ಸಾವಿತ್ರೀ, ಸರಸ್ವತಿಯರು ಕ್ರಮವಾಗಿ ಪ್ರತ್ಯೇಕ ರೂಪಗಳನ್ನು ಹೊಂದಿರುವರು. ||೧೦||

ಮುಂದೆ ಗಾಯತ್ರೀ ಮಂತ್ರದಲ್ಲಿ ಸೇರಿದ ಇಪ್ಪತ್ತನಾಲ್ಕು ಅಕ್ಷರಗಳಿಗೂ ಕ್ರಮವಾಗಿ ಅಕ್ಷರಾಭಿಮಾನಿದೇವತೆಗಳನ್ನು ತೋರಿಸಿದೆ. ಅಗ್ನಿ, ಪ್ರಜಾಪತಿ, ಸೋಮ, ಈಶಾನ, ಆದಿತ್ಯ, ಗಾರ್ಹಪತ್ಯ, ಮಿತ್ರ, ಭಗ, ಆರ್ಯಮ, ಸವಿತೃ, ತ್ವಷ್ಟೃ, ಪೂಷ, ಇಂದ್ರಾಗ್ನಿ, ವಾಯು, ವಾಮದೇವ, ಮಿತ್ರಾವರುಣ, ಭ್ರಾತೃವ್ಯ, ವಿಷ್ಣು, ವಾಮನ, ವಿಶ್ವೇದೇವ, ರುದ್ರ, ಕುಬೇರ, ಅಶ್ವಿನೀ, ಬ್ರಹ್ಮಾ ಎಂಬ ಇಪ್ಪತ್ತನಾಲ್ಕು ದೇವತೆಗಳು

ತ್ ರ್

ಕ್ರಮವಾಗಿ ಗಾಯತ್ರೀಮಂತ್ರದಲ್ಲಿರುವ ತ ಸ ವಿ ತು ವ ರೇ ಣ ಯಂ ಭ ರ್ಗೋ

ತ್

ದೇ ವ ಸ್ಯ ಧೀ ಮ ಹಿ ಧಿ ಯೋ ಯೋ ನಃ ಪ್ರ ಚೋ ದ ಯಾ ಎಂಬ ಇಪ್ಪತ್ತ ನಾಲ್ಕು ಅಕ್ಷರಗಳಿಗೆ ಅಭಿಮಾನಿಗಳಾಗಿರುವರು. ||೧೧||

ಹೀಗೆಯೇ ವಸಿಷ್ಠ, ಭರದ್ವಾಜ, ಗಾರ್ಗ್ಯ, ಉಪಮನ್ಯು, ಭೃಗು, ಶಾಂಡಿಲ್ಯ, ಲೋಹಿತ, ವಿಷ್ಣು, ಶತಾತಪ, ಸನತ್ಕುಮಾರ, ವೇದವ್ಯಾಸ, ಶುಕ, ಪರಾಶರ, ಪುಂಡ್ರ, ಕ್ರತು, ದಕ್ಷ, ಕಶ್ಯಪ, ಅತ್ರಿ, ಆಗಸ್ತ್ಯ, ಉದ್ದಾಲಕ, ಅಂಗಿರಸ್, ನಮಿಕೇತು, ಮುದ್ಗಲ, ಅಂಗೀರೋವಿಶ್ವಾಮಿತ್ರ ಎಂಬುವರು ಪೂರ್ವೋಕ್ತವಾದ ಗಾಯತ್ರಿಯ ಪ್ರತಿಯೊಂದು ಅಕ್ಷರಗಳಿಗೂ ಋಷಿಗಳು. ||೧೨||

ಗಾಯತ್ರೀ ತ್ರಿಷ್ಟುಬ್ಜಗತ್ಯನುಷ್ಟುಪ್ ಪಂಕ್ತಿರ್ಬೃಹತ್ಯುಷ್ಣಿಗದಿತಿರಿತಿ ತ್ರಿರಾವೃತ್ತೇನ ಛಂದಾಂಸಿ ಪ್ರತಿಪಾದ್ಯಂತೇ ॥೧೩॥

ಪ್ರಹ್ಲಾದಿನೀ ಪ್ರಜ್ಞಾ ವಿಶ್ವಭದ್ರಾ ವಿಲಾಸಿನೀ ಪ್ರಭಾ ಶಾಂತಾ ಮಾ ಕಾಂತಿಃ ಸ್ಪರ್ಶಾ ದುರ್ಗಾ ಸರಸ್ವತೀ ವಿರೂಪಾ ವಿಶಾಲಾಕ್ಷೀ ಶಾಲಿನೀ ವ್ಯಾಪಿನೀ ವಿಮಲಾ ತಮೋಽಪಹಾರಿಣೀ ಸೂಕ್ಷ್ಮಾವಯವಾ ಪದ್ಮಾಲಯಾ ವಿರಜಾ ವಿಶ್ವರೂಪಾ ಭದ್ರಾ ಕೃಪಾ ಸರ್ವತೋಮುಖೀತಿ ಚತುರ್ವಿಂಶತಿ ಶಕ್ತಯೋ ನಿಗದ್ಯಂತೇ ॥೧೪॥

ಪೃಥಿವ್ಯಪ್ತೇಜೋವಾಯ್ವಾಕಾಶ ಗಂಧರಸರೂಪಸ್ಪರ್ಶಶಬ್ದವಾಕ್ಪಾಣಿ ಪಾದಪಾಯೂಪಸ್ಥತ್ವಕ್ ಚಕ್ಷುಃ ಶ್ರೋತ್ರ ಜಿಹ್ವಾಘ್ರಾಣ ಮನೋಬುದ್ಧ್ಯ ಹಂಕಾರ ಚಿತ್ತಜ್ಞಾನಾನೀತಿ ಪ್ರತ್ಯಕ್ಷರಾಣಾಂ ತತ್ತ್ವಾನಿ ಪ್ರತೀಯಂತೇ॥೧೫॥

ಚಂಪಕಾತಸೀಕುಂಕುಮಪಿಂಗಲೇಂದ್ರನೀಲಾಗ್ನಿಪ್ರಭೋದ್ಯತ್ಸೂರ್ಯ ವಿದ್ಯುತ್ತಾರಕಸರೋಜಗೌರಮರಕತಶುಕ್ಲಕುಂದೇಂದುಶಂಖಪಾಂಡುನೇತ್ರ ನೀಲೋತ್ಪಲ ಚಂದನಾಗುರು ಕಸ್ತೂರೀಗೋರೋಚನಘನಸಾರಸನ್ನಿಭಂ ಪ್ರತ್ಯಕ್ಷರಮನುಸ್ಮೃತ್ಯ ಸಮಸ್ತಪಾತಕೋಪಪಾತಕಮಹಾಪಾತಕಾಗಮ್ಯಾ ಗಮನ ಗೋಹತ್ಯಾ ಬ್ರಹ್ಮಹತ್ಯಾ ಭ್ರೂಣಹತ್ಯಾ ವೀರಹತ್ಯಾ ಪುರುಷಹತ್ಯಾ ಽಽಜನ್ಮಕೃತಹತ್ಯಾ ಸ್ತ್ರೀಹತ್ಯಾ ಗುರುಹತ್ಯಾ ಪಿತೃಹತ್ಯಾ ಪ್ರಾಣಹತ್ಯಾ ಚರಾ ಚರಹತ್ಯಾಽಭಕ್ಷ್ಯಭಕ್ಷಣ ಪ್ರತಿಗ್ರಹಸ್ವಕರ್ಮವಿಚ್ಛೇದನ ಸ್ವಾಮ್ಯಾರ್ತಿ ಹೀನ ಕರ್ಮಕರಣ ಪರಧನಾಪಹರಣ ಶೂದ್ರಾನ್ನಭೋಜನ ಶತ್ರುಮಾರಣ ಚಂಡಾಲೀಗಮನಾದಿಸಮಸ್ತ ಪಾಪಹರಣಾರ್ಥಂ ಸಂಸ್ಮರೇತ್ ॥೧೬॥

ಮೂರ್ಧಾ ಬ್ರಹ್ಮಾ ಶಿಖಾಂತೋ ವಿಷ್ಣುರ್ಲಲಾಟಂ ರುದ್ರಶ್ಚಕ್ಷುಷೀ ಚಂದ್ರಾದಿತ್ಯೌ ಕರ್ಣೌ ಶುಕ್ರಬೃಹಸ್ಪತೀ ನಾಸಾಪುಟೇ ಅಶ್ವಿನೌ ದಂತೋ ಷ್ಠಾವುಭೇ ಸಂಧ್ಯೇ ಮುಖಂ ಮರುತಃ ಸ್ತನೌ ವಸ್ವಾದಯೋ ಹೃದಯಂ ಪರ್ಜನ್ಯ ಉದರಮಾಕಾಶೋ ನಾಭಿರಗ್ನಿಃ ಕಟಿರಿಂದ್ರಾಗ್ನೀ ಜಘನಂ

ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಂಕ್ತಿ, ಬೃಹತೀ, ಉಷ್ಣಿಕ್, ಅದಿತಿಯೆಂಬ ಛಂದಸ್ಸುಗಳನ್ನು ಕ್ರಮವಾಗಿ ಮೂರುಸಲ ಪಠಿಸಿದರೆ ಲಭಿಸುವ ಇಪ್ಪತ್ತನಾಲ್ಕು ಛಂದಸ್ಸುಗಳು ಗಾಯತ್ರಿಯ ಮಂತ್ರದ ಅಕ್ಷರಗಳಿಗೆ ಕ್ರಮವಾಗಿವೆ ಯೆಂದು ತಿಳಿಯುವುದು. ||೧೩||

ಪ್ರಹ್ಲಾದಿನೀ, ಪ್ರಜ್ಞಾ, ವಿಶ್ವಭದ್ರಾ, ವಿಲಾಸಿನೀ, ಪ್ರಭಾ, ಶಾಂತಾ, ಮಾ, ಕಾಂತಿ, ಸ್ಪರ್ಶಾ, ದುರ್ಗಾ, ಸರಸ್ವತೀ, ವಿರೂಪಾ, ವಿಶಾಲಾಕ್ಷೀ, ಶಾಲಿನೀ, ವ್ಯಾಪಿನೀ, ವಿಮಲಾ, ತಮೋಪಹಾರಿಣೀ, ಸೂಕ್ಷ್ಮಾವಯವಾ, ಪದ್ಮಾಲಯಾ, ವಿರಜಾ, ವಿಶ್ವರೂಪಾ, ಭದ್ರಾ, ಕೃಪಾ, ಸರ್ವತೋಮುಖೀ ಎಂಬ ಇಪ್ಪತ್ತನಾಲ್ಕು ಗಾಯತ್ರಿಯ ಅಕ್ಷರಗಳಿಗೆ ಕ್ರಮವಾಗಿ ಶಕ್ತಿಗಳು. ||೧೪||

ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ, ಗಂಧ, ರಸ, ರೂಪ, ಸ್ಪರ್ಶ, ಶಬ್ದ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ತ್ವಕ್, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣ, ಮನೋ, ಬುದ್ಧಿ, ಅಹಂಕಾರ, ಚಿತ್ತಜ್ಞಾನ ಇವುಗಳು ಗಾಯತ್ರಿಯ ಇಪ್ಪತ್ತನಾಲ್ಕು ಅಕ್ಷರಗಳ ಇಪ್ಪತ್ತನಾಲ್ಕು ಮೂಲತತ್ತ್ವಗಳು. ||೧೫||

ಸಂಪಿಗೆ, ಅಗಸೆ, ಕುಂಕುಮ, ಹೊಂಬಣ್ಣದವಸ್ತು, ಇಂದ್ರನೀಲಮಣಿ, ಅಗ್ನಿ, ಪ್ರಭೆ, ಬಾಲಸೂರ್ಯ, ಮಿಂಚು, ನಕ್ಷತ್ರ, ಕಮಲ, ಹಳದಿ, ಪಚ್ಚೆ, ಬಿಳಿಯ ವಸ್ತು, ಮಲ್ಲಿಗೆ, ಚಂದ್ರ, ಶಂಖ, ಬಿಳಿಯಬೆತ್ತ, ಕನ್ನೈದಿಲೆ, ಚಂದನ, ಅಗುರು, ಕಸ್ತೂರೀ, ಗೋರೋಚನ, ಕರ್ಪೂರಗಳ ವರ್ಣಗಳಿಂದ ರಂಜಿತವಾದ ಆಕಾರಗಳನ್ನು ಪ್ರತಿಯೊಂದು ಅಕ್ಷರಗಳಿಗೂ ಭಾವಿಸಬೇಕು. ಮತ್ತು ಸಮಸ್ತಪಾತಕ, ಉಪಪಾತಕ, ಮಹಾಪತಕ, ಅಗಮ್ಯಾಗಮನ, ಗೋಹತ್ಯಾ, ಬ್ರಹ್ಮಹತ್ಯಾ, ಭ್ರೂಣಹತ್ಯಾ, ವೀರ ಹತ್ಯಾ, ಪುರುಷಹತ್ಯಾ, ಆಜನ್ಮಕೃತಹತ್ಯಾ, ಸ್ತ್ರೀಹತ್ಯಾ, ಗುರುಹತ್ಯಾ, ಪಿತೃಹತ್ಯಾ, ಪ್ರಾಣಹತ್ಯಾ, ಚರಾಚರಹತ್ಯಾ, ಅಭಕ್ಷ್ಯಭಕ್ಷಣ, ಪ್ರತಿಗ್ರಹ, ಸ್ವಕರ್ಮವಿಚ್ಛೇದನ, ಸ್ವಾಮ್ಯಾರ್ತಿ, ಹೀನಕರ್ಮಕರಣ, ಪರಧನಾಪಹರಣ, ಶೂದ್ರಾನ್ನಭೋಜನ, ಶತ್ರು ಮಾರಣ, ಚಂಡಾಲಸ್ತ್ರೀಸಂಗಮ ಮುಂತಾದ ಇಪ್ಪತ್ತನಾಲ್ಕು ಇಲ್ಲಿ ಹೇಳಿದ ಪಾಪ ಗಳನ್ನು ಕಳೆಯುವ ಶಕ್ತಿಯು ಪ್ರತಿ ಅಕ್ಷರಕ್ಕೂ ಇರುವುದೆಂದು ಭಾವಿಸಿ ಆ ಪ್ರಯೋ ಜನಕ್ಕೋಸ್ಕರ ಇವುಗಳನ್ನು ಸ್ಮರಿಸಬೇಕು. ||೧೬||

ಗಾಯತ್ರಿಯನ್ನು ವಿಶ್ವರೂಪದಿಂದ ವ್ಯಾಪಿಸಿರುವಳೆಂದು ಧ್ಯಾನಿಸಲು ವಿಶ್ವ ರೂಪಾಕಾರವನ್ನು ಇಲ್ಲಿ ಹೇಳಿದೆ. ಬ್ರಹ್ಮನು ಶಿರೋರೂಪನು, ವಿಷ್ಣುವು ಶಿಖಾಗ್ರವು, ರುದ್ರನು ಲಲಾಟ, ಚಂದ್ರಸೂರ್ಯರು ಕಣ್ಣು, ಶುಕ್ರ ಬೃಹಸ್ಪತಿಗಳು ಕಿವಿಗಳು, ಅಶ್ವಿನೀ ದೇವತೆಗಳು ಮೂಗಿನ ರಂಧ್ರಗಳು, ಎರಡು ಸಂಧ್ಯೆಗಳು ತುಟಿಗಳು,

ಸ್ಪ್ರಾಜಾಪತ್ಯ ಮೂರೂ ಕೈಲಾಸಮೂಲಂ ಜಾನುನೀ ವಿಶ್ವೇದೇವೌ ಜಂಘೇ ಶಿಶಿರಃ ಗುಲ್ಫಾನಿ ಪೃಥಿವೀ ವನಸ್ಪತ್ಯಾದೀನಿ ನಖಾನಿ ಮಹತೀ ಅಸ್ಥೀನಿ ನವಗ್ರಹಾ ಅಸೃಕ್ಕೇತುರ್ಮಾಂಸಮೃತುಸಂಧಯಃ ಕಾಲದ್ವಯಾಸ್ಫಾಲನಂ ಸಂವತ್ಸರೋ ನಿಮೇಷೋಽಹೋರಾತ್ರಮಿತಿ ವಾಗ್ದೇವೀಂ ಗಾಯತ್ರೀಂ ಶರಣಮಹಂ ಪ್ರಪದ್ಯೇ ॥೧೭॥

ಯ ಇದಂ ಗಾಯತ್ರೀರಹಸ್ಯಮಧೀತೇ ತೇನಕ್ರತುಸಹಸ್ರಮಿಷ್ಟಂ ಭವತಿ । ಯ ಇದಂ ಗಾಯತ್ರೀರಹಸ್ಯಮಧೀತೇ ದಿವಸಕೃತಂ ಪಾಪಂ ನಾಶಯತಿ । ಪ್ರಾತರ್ಮಧ್ಯಾಹ್ನಯೋಃ ಷಣ್ಮಾಸಕೃತಾನಿ ಪಾಪಾನಿ ನಾಶಯತಿ । ಸಾಯಂಪ್ರಾತರಧೀಯಾನೋ ಜನ್ಮಕೃತಂ ಪಾಪಂ ನಾಶಯತಿ । ಯ ಇದಂ ಗಾಯತ್ರೀರಹಸ್ಯಂ ಬ್ರಾಹ್ಮಣಃ ಪಠೇತ್ ತೇನ ಗಾಯತ್ರ್ಯಾಃ ಷಷ್ಟಿಸಹಸ್ರಲಕ್ಷಾಣಿ ಜಪ್ತಾನಿ ಭವಂತಿ । ಸರ್ವಾನ್ ವೇದಾನಧೀತೋ ಭವತಿ । ಸರ್ವೇಷು ತೀರ್ಥೇಷು ಸ್ನಾತೋ ಭವತಿ । ಅಪೇಯಪಾನಾತ್ ಪೂತೋ ಭವತಿ । ಅಭಕ್ಷ್ಯಭಕ್ಷಣಾತ್ಪೂತೋ ಭವತಿ । ವೃಷಲೀಗಮನಾತ್ಪೂತೋ ಭವತಿ । ಅಬ್ರಹ್ಮಚಾರೀ ಬ್ರಹ್ಮಚಾರೀ ಭವತಿ । ಪಂಕ್ತಿಷು ಸಹಸ್ರಪಾನಾತ್ಪೂತೋ ಭವತಿ । ಅಷ್ಟೌ ಬ್ರಾಹ್ಮಣಾನ್ ಗ್ರಾಹಯಿತ್ವಾ ಬ್ರಹ್ಮಲೋಕಂ ಸ ಗಚ್ಛತಿ । ಇತ್ಯಾಹ ಭಗವಾನ್ ಬ್ರಹ್ಮಾ ॥೧೮॥

ಇತಿ ಗಾಯತ್ರೀರಹಸ್ಯೋಪನಿಷತ್ ಸಮಾಪ್ತಾ.



ಮರುದ್ದೇವತೆಗಳು ಮುಖ, ವಸ್ವಾದಿದೇವತಗಳು ಸ್ತನಗಳು, ಪರ್ಜನ್ಯನು ಹೃದಯ, ಆಕಾಶವು ಉದರ, ಅಗ್ನಿಯು ನಾಭಿಯು, ಇಂದ್ರಾಗ್ನಿ ದೇವತೆಗಳು ನಡು, ಪ್ರಜಾಪತಿಯು ನಡುವಿನ ಮುಂಭಾಗ, ಕೈಲಾಸದ ಕೆಳಭಾಗವು ತೊಡೆಗಳು, ವಿಶ್ವದೇವರು ಮೊಣಕಾಲುಗಳು, ಶಿಶಿರಋತುವು ಜಂಘಾಪ್ರದೇಶ, ಪೃಥಿವೀ ವನಸ್ಪತಿ ಮುಂತಾದುವು ಪಾದಗ್ರಂಥಿ ಸಂಧಿಗಳು, ಮಹತೀದೇವಿಯು ಉಗುರು, ನವಗ್ರಹಗಳು ಅಸ್ಥಿ, ಕೇತುವು ರಕ್ತ, ಋತುಗಳ ಸಂಧಿಭಾಗಗಳು ಮಾಂಸ, ಸಂವತ್ಸರವು ಭೂತಭಾವಿಕಾಲದ್ವಯವನ್ನು ಹೊಡೆಯುವುದು, ಅಹೋರಾತ್ರಗಳು ರೆಪ್ಪೆ ಹೊಡೆಯುವುದು– ಎಂಬ ಈರೀತಿಯಿಂದ ವಿಶ್ವವೆಲ್ಲವೂ ಗಾಯತ್ರಿಯ ಅವಯವಗಳಲ್ಲಿ ಸೇರಿದ್ದರಿಂದ ಗಾಯತ್ರೀ ಮಾತೆಯು ವಿಶ್ವರೂಪವುಳ್ಳವಳು. ಇಂತಹ ವಾಗ್ದೇವೀರೂಪಳಾದ ಗಾಯತ್ರಿಯನ್ನು ಶರಣ ಹೊಂದುವೆನು. ||೧೭||

ಈ ಗಾಯತ್ರೀರಹಸ್ಯೋಪನಿಷತ್ತನ್ನು ಅಧ್ಯಯನ ಮಾಡುವವನಿಗೆ ಪ್ರಾಪ್ತವಾಗುವ ಫಲಗಳು ಮುಂದೆ ಪಠಿತವಾಗಿವೆ. ಈ ಗಾಯತ್ರೀರಹಸ್ಯವನ್ನು ಅಧ್ಯಯನ ಮಾಡಿದವನು ಸಹಸ್ರ ಯಜ್ಞಗಳನ್ನು ಮಾಡಿದ ಫಲಗಳನ್ನು ಹೊಂದುತ್ತಾನೆ. ಯಾವನು ಈ ಗಾಯತ್ರೀರಹಸ್ಯವನ್ನು ಅಧ್ಯಯನ ಮಾಡುವನೋ ಅವನು ಹಗಲು ಮಾಡಿದ ಪಾಪಗಳನ್ನು ಕಳೆದುಕೊಳ್ಳುವನು. ಪ್ರಾತಃಕಾಲ ಮತ್ತು ಮಧ್ಯಾಹ್ನ ಕಾಲಗಳಲ್ಲಿ ಪಠಿಸಿದ್ದರಿಂದ ಆರು ತಿಂಗಳು ಕಾಲದಿಂದ ಸಂಭವಿಸಿದ ಪಾಪಗಳಿಂದ ಬಿಡುಗಡೆಯಾಗುತ್ತದೆ. ಸಾಯಂಕಾಲ ಪ್ರಾತಃಕಾಲಗಳಲ್ಲಿಯೂ ತಪ್ಪದೇ ಪಾರಾಯಣ ಮಾಡಿದ್ದರಿಂದ ಜನ್ಮ ಮೊದಲ್ಗೊಂಡು ಮಾಡಿದ ಪಾಪಗಳು ನಶಿಸುವುವು. ಈ ಗಾಯತ್ರೀರಹಸ್ಯವನ್ನು ಪಠಿಸಿದ ಬ್ರಾಹ್ಮಣನು ಅರವತ್ತುಸಾವಿರಲಕ್ಷ ಗಾಯತ್ರೀ ಮಂತ್ರ ಜಪವನ್ನು ಮಾಡಿದಂತೆ ಸುಕೃತಿಯಾಗುವನು. ಮತ್ತು ಸರ್ವವೇದಗಳನ್ನೂ ಅಧ್ಯಯನ ಮಾಡಿ ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲಗಳನ್ನು ಅರ್ಜಿಸುತ್ತಾನೆ. ಅಪೇಯಪಾನ, ಅಭಕ್ಷ್ಯಭಕ್ಷಣ, ವೃಷಲೀ ಗಮನಾದಿ ಪಾತಕಗಳನ್ನು ಕಳೆದುಕೊಳ್ಳುವನು. ಬ್ರಹ್ಮಚಾರಿಯಲ್ಲದವನು ಇದರ ಮಹಿಮೆಯಿಂದ ಬ್ರಹ್ಮಚಾರಿಯಾಗುವನು. ಸಾವಿರಾರು ಜನರಿಂದ ಕೂಡಿ ನಡೆಯುವ ಪಾನ ಭೋಜನಾದಿಗಳಲ್ಲಿ ಸೇರಿ ಅಷ್ಟು ಜನರ ಪಂಕ್ತಿ ಪವಿತ್ರ ಮಾಡುವವನಾಗುತ್ತಾನೆ. ಇದನ್ನು ಎಂಟು ಜನರಿಂದ ಅಧ್ಯಯನ ಮಾಡಿಸಿದರೆ ಅದರ ಪುಣ್ಯದಿಂದ ಬ್ರಹ್ಮಲೋಕವನ್ನು ಹೊಂದುವನು ಎಂದು ಭಗವಂತನಾದ ಬ್ರಹ್ಮನು ಉಪದೇಶಿಸಿರುವನು. ||೧೮||

**ಗಾಯತ್ರೀರಹಸ್ಯೋಪನಿಷತ್ತಿನ ಕನ್ನಡ ಅನುವಾದವು ಸಮಾಪ್ತವು.**

